# ಕಾಲವಾಹಿನಿ

ಸಾಮಾಜಿಕ ಕಾದಂಬರಿ

ತೆಲುಗು ಮೂಲ

**ದ್ವಿವೇದುಲು ವಿಶಾಲಾಕ್ಷಿ**

ಕನ್ನಡ ಅನುವಾದ

**ಶರ್ವಾಣಿ**

ಪ್ರಕಾಶಕರು

## ಡಿ. ವಿ. ಕೆ. ಮೂರ್ತಿ

**ಕೃಷ್ಣಮೂರ್ತಿಪುರಂ : : ಮೈಸೂರು-೪**

*KALAVAHINI*—A Social novel in Telugu by Smt. Dwivedulu Vishalakshi. Translated into kannada by Smt. Sarvani. First Edition 1981. Published by D.V.K. Murthy, Krishnamurthipuram, Mysore-570 004.

ಮೊದಲನೆಯ ಮುದ್ರಣ : ೧೯೮೧

© ಶರ್ವಾಣಿ (ಕನ್ನಡ ಅನುವಾದ)

ಮುಖಚಿತ್ರ : ವೆಂಕಟೇಶ್

ಮುದ್ರಕರು

ವಾಣೀ ಪ್ರೆಸ್ : ಗೀತಾ ರಸ್ತೆ : ಮೈಸೂರು 4

# ಕಾಲವಾಹಿನಿ

ನಾಲ್ಕು ವರ್ಷದ ನಂತರ ಮತ್ತೆ ಆ ಮನೆಯಲ್ಲಿ ನಗುವಿನ ಬುಗ್ಗೆ ಚಿಮ್ಮಿತು. ಹೊರಗಿನಿಂದ ಓಡಿಬಂದ ಶಾಂತ ಅಕ್ಕನನ್ನು ತಬ್ಬಿಕೊಂಡಳು. ಕೈಯಲ್ಲಿದ್ದ ಪುಸ್ತಕ ಕೆಳಗಿಟ್ಟು "ಏನಮ್ಮಾ ಶಾಂತೂ, ಏನಾಯಿತು?" ಎಂದಳು ಜಾನಕಿ.

"ಹೋಗಕ್ಕಾ, ನೀನು ಯಾವಾಗಲೂ ಅಷ್ಟೆ. ಈ ಲೋಕದಲ್ಲಿ ನಡೀತಿರೋದೇನೂ ನಿನಗೆ ಬೇಕಾಗಿಲ್ಲದವಳಹಾಗಿರುತ್ತಿ" ಎಂದಳು ಹುಸಿಕೋಪ ತೋರುತ್ತಾ, ಶಾಂತ.

"ಹಾಗೆಂದರೆ ಹೇಗೆ? ನನಗೇನಾದರೂ ದಿವ್ಯದೃಷ್ಟಿಯಿದೆಯೇ, ನೀನಿಷ್ಟು ಸಂತೋಷವಾಗಿರಲು ಕಾರಣ ಏನು ಅಂತ ತಿಳಿದುಕೊಳ್ಳೋಕೆ?" ಜಾನಕಿ ತಂಗಿಯನ್ನು ಸಮಾಧಾನಪಡಿಸಲು ಪ್ರಯತ್ನಿಸಿದಳು.

ಶಾಂತ ನಗುತ್ತ ಬಚ್ಚಿಟ್ಟುಕೊಂಡ ನ್ಯೂಸ್‌ಪೇಪರನ್ನು ಅಕ್ಕನ ಮುಂದೆ ಹಿಡಿದಳು.

"ಓಹೋ, ಇದೋ ವಿಷಯ, ರಿಸಲ್ಟ್ ಬಂತೇ ಆಗಲೇ? ಕೊಡಿಲ್ಲಿ ನೋಡೋಣ."

ಪೇಪರ್ ನೋಡುತ್ತಾ ಆತುರದಿಂದ, "ಅಮ್ಮಾ, ಅಮ್ಮಾ, ಶಾಂತನ ರಿಸಲ್ಟ್ ಬಂದಿದೆಕಣಮ್ಮಾ" ಎಂದು ಕೂಗಿದಳು, ಜಾನಕಿ.

ಒಲೆಯಲ್ಲಿ ಉರಿಯುತ್ತಿದ್ದ ಕೊಳ್ಳಿಯನ್ನು ಈಚೆಗೆ ತೆಗೆದು ಬೇಗಬೇಗ ವರಾಂಡಾದೊಳಕ್ಕೆ ಬಂದರು ಸುಂದರಮ್ಮ. ಜಾನಕಿಯ ಕೂಗು ಕೇಳಿ ಒಗೆಯುತ್ತಿದ್ದ ಬಟ್ಟೆಗಳನ್ನು ಅಲ್ಲಿಯೇ ಬಿಟ್ಟು ಧಾವಿಸಿ ಬಂದಳು ಅತ್ತಿಗೆ, ಕನಕಲಕ್ಷ್ಮಿ.

"ಅಷ್ಟು ಸಂತೋಷಾನೂ ಅಕ್ಕಾ–ತಂಗಿ ಇಬ್ಬರೇ ಹಂಚಿಕೋಬೇಕೇನು? ಎಲ್ಲಿ, ನಮಗೂ ಅಷ್ಟು ಕೊಡಿ" ಎಂದಳು.

"ಅದಕ್ಕೇ ಅಲ್ಲವೇನತ್ತಿಗೆ ಕೂಗಿದ್ದು? ಅಷ್ಟರಲ್ಲೇ ಇಷ್ಟು ಆತುರವಾದರೆ ಹೇಗೆ? ಶಾಂತ ಪರೀಕ್ಷೇಲಿ ಪಾಸಾಗಿದಾಳೆ."

"ಹೆಣ್ಣು ಹುಡುಗಿ, ಅವಳ ಮಾತಿರಲಿ. ಪ್ರಕಾಶನದೇನಾಯಿತೋ ನೋಡಮ್ಮಾ. ಈ ವರ್ಷನಾದರೂ ಪಾಸಾದನೋ ಇಲ್ಲವೋ?" ಎಂದು ಕಳವಳದಿಂದ ಪ್ರಶ್ನಿಸಿದರು ಸುಂದರಮ್ಮ.

"ನೋಡಿದೆಯೇನಕ್ಕಾ, ಅಮ್ಮನಿಗೆಷ್ಟು ಪಕ್ಷಪಾತಾಂತ? ನಾನು

ಪಾಸಾದೆ ಅಂದರೆ ಲಕ್ಷ್ಯವೇ ಇಲ್ಲ. ಸದಾ ಗಂಡುಮಕ್ಕಳು, ಅವರ ಓದು, ಅವರ ಕೆಲಸ ಇದೇ ಹೊರತು ಹೆಣ್ಣುಮಕ್ಕಳ ವಿಷಯಾನೇ ಬೇಕಾಗೊಲ್ಲ" ಎಂದಳು ಶಾಂತ ನಿಷ್ಠೂರದಿಂದ.

"ಅದೇನೇ ಶಾಂತಾ ಹಾಗಂತಿ? ನೀನು ಪಾಸಾದರೆ ನನಗೆ ಸಂತೋಷ ವಲ್ಲವೆ? ಆದರೆ ಅಣ್ಣ ನೋಡು, ನಿನಗಿಂತ ಎರಡು ವರ್ಷಕ್ಕೆ ದೊಡ್ಡೋನು. ಮೂರು ವರ್ಷದಿಂದ ಇದೇ ಕ್ಲಾಸಿನಲ್ಲಿ ಕೂತಿದಾನೆ. ಈ ಸಲವಾದರೂ 'ಗೆದ್ದೆ' ಅಂತಾನೇನೋ ಅಂತ ನನ್ನ ಆಸೆ" ಎಂದರು ಸುಂದರಮ್ಮ ನಿಸ್ಪೃಹರಾಗಿ.

"ಹೋಗಲಿ ಬಿಡಿ ಅತ್ತೆ. ಒಬ್ಬರಾದರೂ ಪಾಸಾದರಲ್ಲಾ. ಅದೇ ಸಂತೋಷ" ಎಂದಳು ಕನಕಲಕ್ಷ್ಮಿ.

"ಹಾಗಲ್ಲಮ್ಮ. ಹೆಣ್ಣುಮಕ್ಕಳದೇನು ಲೆಕ್ಕ? ಈವತ್ತಿಲ್ಲ ನಾಳೆ ಮದುವೆ ಮಾಡಿಕೊಂಡು ಅತ್ತೆಮನೆಗೆ ಹೋಗೋರು ತಾನೆ? ಸಂಪಾದಿಸಿ ಪೋಷಿಸ ಬೇಕಾದ ಗಂಡಿಗೆ ಓದು ಇಲ್ಲದಿದ್ದರೆ ಹೇಗೆ ಹೇಳು?"

"ಅದೆಲ್ಲಾ ಪೂರ್ವಕಾಲದ ಮಾತು ಅತ್ತೆ. ಈ ಕಾಲದಲ್ಲಿ ಗಂಡೇನು? ಹೆಣ್ಣೇನು? ಎಲ್ಲರೂ ಕೆಲಸ ಮಾಡೋರೆ. ನಿಮ್ಮ ಹಿರಿಯ ಮಗನ ಹಾಗೆ, ಹಿರಿಯ ಮಗಳೂ ಸಂಪಾದಿಸುತ್ತಿಲ್ಲವೇ? ಶಾಂತಾನೂ ಅಕ್ಕನಂತೆ ಕೆಲಸ ಮಾಡುತ್ತಾಳೇನೋ ಯಾರು ಬಲ್ಲರು?" ಎಂದಳು ಕನಕ ಉತ್ಸಾಹದಿಂದ.

ಬಾಲಭೋದೆಯೊಂದಿಗೇ ಓದಿಗೆ ಮಂಗಳಾರತಿ ಹಾಡಿದ ಹಳ್ಳಿಯ ಹುಡುಗಿ ಕನಕಳಿಗೆ ನೌಕರಿ ಮಾಡುತ್ತಿರುವ ಜಾನಕಿಯ ಬಗ್ಗೆ ತುಂಬಾ ಗೌರವ. ಚುರುಕಾಗಿ ಓದಿಕೊಳ್ಳುತ್ತಿದ್ದ ಪುಟ್ಟ ನಾದಿನಿ ಶಾಂತಳ ಬಗ್ಗೆ ಎಷ್ಟೋ ಆದರ. ತನಗೆ ಅರ್ಥವಾಗದ ವಿಷಯಗಳನ್ನು ಅವರಿಬ್ಬರೂ ಮಾತನಾಡು ತ್ತಿದ್ದಾಗ ಬೆರಗುಗಣ್ಣುಗಳಿಂದ ನಿಂತು ಕೇಳುತ್ತಿದ್ದಳು. ನೆರೆಹೊರೆಯವ ರೊಂದಿಗೆ ತಮ್ಮ ಮನೆಯ ಹೆಣ್ಣುಮಕ್ಕಳನ್ನು ಕುರಿತು ಹೆಮ್ಮೆಯಿಂದ ಹೇಳಿ ಕೊಳ್ಳುತ್ತಿದ್ದಳು. 'ನನ್ನ ನಾದಿನಿಯರು ವಿದ್ಯೆ–ಬುದ್ಧಿಗಳಲ್ಲಿ ಯಾವ ಗಂಡಸರಿಗೂ ಕಡಿಮೆಯಿಲ್ಲ' ಎಂದು.

ಈಗ ಕನಕಳಾಡಿದ ಮಾತು ಕೇಳಿ ಬೆಚ್ಚಿಬಿದ್ದರು ಸುಂದರಮ್ಮ. "ಅಯ್ಯೋ ರಾಮಾ, ಜಾನಕಿಯ ಹೋಲಿಕೆ ಯಾರಿಗೂ ಬರಬಾರದಮ್ಮಾ. ನಮ್ಮ ಶಾಂತ ಹಾಯಾಗಿ ಮದುವೆ ಮಾಡಿಕೊಂಡು ಮಕ್ಕಳು–ಮರಿಯೊಂದಿಗೆ ಸುಖವಾಗಿ ಬಾಳಲಿ" ಎಂದರು. ಅಪಶಕುನದ ಮಾತು ಕೇಳಿದೆನಲ್ಲಾ ಎಂದು ಮನಸ್ಸಿನಲ್ಲಿಯೇ 'ಶಾಂತಂ ಪಾಪಂ' ಎಂದುಕೊಂಡರು.

ಕನಕಳ ಮುಖ ಕಪ್ಪಿಟ್ಟಿತು.

"ಆ ಉದ್ದೇಶದಿಂದ ಹೇಳಲಿಲ್ಲ ಅತ್ತೇ" ಎಂದಳು ದೀನಳಾಗಿ.

ಜಾನಕಿಯ ಕೈಯಲ್ಲಿದ್ದ ಪೇಪರ್ ಕೆಳಗೆ ಬಿತ್ತು. ಮೌನವಾಗಿ ಅಲ್ಲಿಂದೆದ್ದು ಕೋಣೆಯೊಳಕ್ಕೆ ಹೊರಟುಹೋದಳು. ಶಾಂತೆಳ ಸಂತೋಷ ಮಡಕೆ ಬಿಸಿಹಾಲಿನಲ್ಲಿ ತೊಟ್ಟು ಮಜ್ಜಿಗೆ ಬಿದ್ದಂತೆ ಒಡೆಯಿತು. ಸುಂದರಮ್ಮನ ಕಣ್ಣು ತೇವಗೊಂಡಿತು.

ಗತಕಾಲದ ನೆನಪುಗಳು ಆ ಮನೆಯ ಸುತ್ತೂ ಗಾಳಿಯಲ್ಲಿ ಬೆರೆತು ಚಲಿಸುತ್ತಿತ್ತು. ಸ್ಥಳ ಸಿಕ್ಕಿದರೆ ಸಾಕು. ಆ ಮನೆಯ ಮನುಷ್ಯರ ಉಸಿರಿನೊಂದಿಗೆ ಬೆರೆತು ಶರೀರವನ್ನು ಪ್ರವೇಶಿಸಿ ಅವರನ್ನು ಹಿಂಸಿಸಲು ಸಿದ್ಧವಾಗಿ ಇರುತ್ತಿತ್ತು. ಸುಂದರಮ್ಮನ ಮಾತಿನಿಂದಾಗಿ ಹಳೆಯ ನೆನಪು ಮತ್ತೆ ಜೀವ ತಳೆದಿತ್ತು....

ಒಂದು ವಾರದಿಂದ ಮನೆಗೆ ಬಂದ ಬಂಧುಗಳ ಸಡಗರದಿಂದ, ಹಸಿರು ಚಪ್ಪರದಿಂದ, ಅರಿಸಿನ ಕುಂಕುಮದಿಂದ ಸಿಂಗರಿಸಿದ ಹೊಸ್ತಿಲಿನಿಂದ ಸಂತೋಷ ಸದನದಂತಿದ್ದ ಆ ಮನೆ ಹಠಾತ್ತಾಗಿ ಕದನರಂಗವಾಗಿ ಮಾರ್ಪಟ್ಟಿತ್ತು. ಮಂಚದ ಮೇಲೆ ಬಿಗಿದು ಕುಳಿತಿದ್ದ ಮದುಮಗ ತಟ್ಟನೆ ಎದ್ದು ಕುಳಿತಿದ್ದ. ಹೆಣ್ಣು–ಗಂಡಿನ ಕಡೆಯವರು ಎದುರುಬದುರಾಗಿ ನಿಂತು ಕಣ್ಣಿನಲ್ಲಿ ಕೆಂಡ ಕಾರತೊಡಗಿದ್ದರು. ಶೂಲದಂತಹ ಮಾತುಗಳು ಅಲ್ಲಿಂದಿಲ್ಲಿಗೆ ಬಿರುಸಾಗಿ ಓಡಾಡಿದುವು. ಬಯ್ಗುಳೂ–ನಿಂದೆಗಳೂ ಎರಡೂಪಕ್ಷಗಳ ನಡುವೆ ಬಾಂಬಿನಂತೆ 'ಧನಾಧನ್' ಎಂದು ಸಿಡಿದುವು. ಎರಡೂ ಕಡೆಯವರ ಮಾನಮರ್ಯಾದೆ ಆ ಕೋಪಾಗ್ನಿಜ್ವಾಲೆಯಲ್ಲಿ ಬಿದ್ದು ಉರಿದು ಬೂದಿಯಾಗಿತ್ತು. ಆ ಮಸಿಯ ಕಪ್ಪು ಮದುವ ಮನೆಯನ್ನೆಲ್ಲಾ ಆವರಿಸಿತ್ತು.

ಆವೇಶ ಸ್ವಲ್ಪ ಕಡಿಮೆಯಾದ ಮೇಲೆ ಆಡುತ್ತಿದ್ದ ಮಾತಿಗೊಂದು ರೂಪ ಏರ್ಪಟ್ಟಿತ್ತು.

"ಮೊದಲು ಒಪ್ಪಿಕೊಂಡಂತೆ ಮೂರು ಸಾವಿರಾನೂ ಸುರಿದಾಗಿದೆ, ಹೆಣ್ಣು ಹೆತ್ತ ಅಪರಾಧಕ್ಕೆ ಅದಕ್ಕಿಂತ ಹೆಚ್ಚು ಜುಲ್ಮಾನೆ ಕೊಡುವ ಶಕ್ತಿ ನನಗಿಲ್ಲ" ಎಂದರು ಮದುಮಗಳ ತಂದೆ.

"ಹಾಗಂದರೆ ಹೇಗೆ? ಅವನು ತಾನೇ ಲಕ್ಷ, ಕೋಟಿ ಕೇಳಿದನೇ? ಒಂದು ಸಾವಿರ ರೂಪಾಯಿಯ ಮುಖ ನೋಡಿದರೆ ಹೇಗೆ? ಈವತ್ತಿನ ಸಂತೋಷ ಇನ್ನೊಂದು ದಿನ ಬಾ ಅಂದರೆ ಬರುತ್ತೇನ? ನಾಳೆ ನಿಮ್ಮ ಅಳಿಯ ಮೋಟಾರ್ ಸೈಕಲ್ ಮೇಲೆ ಕುಳಿತು, ನಿಮ್ಮ ಮಗಳೊಂದಿಗೆ ನಿಮ್ಮ ಮನೆಗೆ

ಬಂದರೆ ಆ ಸಂತೋಷ ನಿಮ್ಮದಲ್ಲವೆ? ಕೋಪದಲ್ಲಿ ಒಂದು ಮಾತೆಂದರೂ ಅವನ ಆಸೆ ತೀರಿಸಬೇಕೆಂಬ ಆಕಾಂಕ್ಷೆ ನಿಮಗೆ ಮಾತ್ರ ಇಲ್ಲದಿರುತ್ತದೆಯೇ?" ಎಂದರು ಮದುಮಗನ ತಂದೆ, ನಯವಾಗಿ.

"ಓ, ನನಗೂ ಸಂತೋಷಾನೇ. ಅಳಿಯ ಮೋಟಾರ್ ಸೈಕಲ್ ಕೊಳ್ಳುತ್ತಾನೆಂದರೆ ನಾನು ಬೇಡವೆನ್ನುತ್ತೇನೆಯೇ? ನೀವು ಹೇಳಿದ ಹಾಗೆ ನನಗೆ ಮಾತ್ರ ಮಕ್ಕಳ ಸುಖ ಗೊತ್ತಿಲ್ಲವೇ? ನಾನು ಹೇಳುತ್ತಿರುವುದೊಂದೇ. ನಮಗೆ ಶಕ್ತಿಯಿದ್ದಷ್ಟು ವರದಕ್ಷಿಣೆ ಕೊಟ್ಟಿದೇವೆ. ಇನ್ನು ಏನಾದರೂ ಉಳಿದಿದ್ದರೆ ದಯವಿಟ್ಟು ನೀವು ತುಂಬಿಕೊಳ್ಳಿ. ನೀವೂ ಉಳ್ಳವರೇ ತಾನೇ?"

"ಸರಿ, ಸರಿ. ನಮ್ಮ ಹುಡುಗನಿಗೆ ನಾವು ಕೊಡೋದಕ್ಕೆ ನೀವು ಹೇಳಬೇಕೇನು? ನಿಮ್ಮ ಮಕ್ಕಳ ಬೇಡಿಕೆಯನ್ನು ಕನ್ಯಾದಾತರಾದ ನೀವು ತೀರಿಸಬೇಕು, ನೆರವೇರಿಸಬೇಕು." ಬೀಗಿತ್ತಿ ಜಾಣತನದ ಮಾತನ್ನಾಡಿದರು.

"ಹಾಗೆ ನೋಡಿದರೆ ಈ ಬೇಡಿಕೆಗಳಿಗೆ ಕೊನೆ ಎಲ್ಲಿ? ನಮಗೆ ಇದ್ದುದರಲ್ಲಿ ನಾವು ಸಂತೋಷವಾಗಿ ಎಷ್ಟು ಮಾಡಬಹುದೋ ಅಷ್ಟು ಮಾಡಿದೇವೆ. ಅಷ್ಟಕ್ಕೆ ನೀವು ತೃಪ್ತಿಪಡಬೇಕು. ಇದ್ದುದನ್ನೆಲ್ಲಾ ಬಳಿದು ಕೊಡಲು ಅವಳೊಬ್ಬಳೇ ಮಗಳಲ್ಲ ನಮಗೆ. ಇನ್ನೊಂದು ಹುಡುಗಿ ಸಿದ್ಧವಾಗಿದಾಳೆ ಆಗಲೇ. ಹೆಣ್ಣಿನ ಕಡೆಯವರೆಂದು ತಾತ್ಸಾರಮಾಡಿ ಸುಲಿದು ತಿನ್ನೋಣವೆಂದು ಕೊಳ್ಳುವುದು ಸರಿಯಲ್ಲ" ಎಂದರು ಹುಡುಗಿಯ ತಾಯಿ.

ಆ ಮಾತಿನಿಂದ ಮತ್ತೆ ಬೆಂಕಿ ಹತ್ತಿಕೊಂಡಿತು. ಮದುಮಗ ಮಂಚದ ಮೇಲೆ ಪದ್ಮಾಸನ ಹಾಕಿ ಕುಳಿತು ಜೋಕಾಗಿ ಎಲ್ಲವನ್ನೂ ಗಮನಿಸುತ್ತಿದ್ದ. ತನ್ನ ಕಡೆಯವರ ಕೈ ಮೇಲಾದಾಗ ಸಂತೋಷ—ಪೆಟ್ಟುತಿಂದಾಗ ಚಿಂತೆ ವ್ಯಕ್ತಪಡಿಸುತ್ತಾ ಕುಳಿತಿದ್ದ. ಮೌನವಾಗಿಯೇ ತನ್ನವರಿಗೆ ತನ್ನ ಕೈಲಾದ ಸಹಾಯ ಮಾಡುತ್ತಿದ್ದ.

"ಹಾಗಾದರೆ ಭಾವನವರು ಮೋಟಾರ್‌ಸೈಕಲ್ ಕೊಂಡುಕೊಂಡು ಬೆಳಿಗ್ಗೆ ಎದ್ದು ಹಾರೆಗುದ್ದಲಿ ಕೈ ಚೀಲದಲ್ಲಿ ಹಾಕಿಕೊಂಡು ಹೊಲದಕಡೆ ವಾಕಿಂಗ್ ಹೊರಡುತ್ತಾರೇನು?" ಪುಟ್ಟಮ್ಮನ ಪಟಾಕಿ ಹಾರಿಸಿದ.

"ಭಾವಾ, ಇಲ್ಲಿ ಕೊಂಡುಕೊಂಡ ಮೋಟಾರ್ ಸೈಕಲ್ ನಿಮ್ಮ ಹಳ್ಳಿಗೆ ಹೇಗೆ ತೆಗೆದುಕೊಂಡು ಹೋಗುತ್ತೀರಿ? ಆ ಡೊಂಕು ದಾರಿಯಲ್ಲಿ ಅದು ನಡೆಯುತ್ತೇನು?" ಪುಟ್ಟ ನಾದಿನಿ ಸಂದೇಹ ವ್ಯಕ್ತಪಡಿಸಿದಳು.

"ನಿನಗೇನು ಗೊತ್ತೇ ಹುಡುಗಿ, ಮೋಟಾರ್ ಸೈಕಲ್ ಕೊಂಡು ಕೊಡೋ ಮಾವ. ಅಷ್ಟು ಮಾತ್ರ ರೋಡ್ ಹಾಕಿಸಲೊಲ್ಲನೇ? ಅದನ್ನೂ

ಆತನೇ ಮಾಡುತ್ತಾನೆ. ಅಲ್ಲವೇನು ವೈದ್ಯ ಮಹಾಶಯ?" ಮತ್ತೊಂದು ವರಸೆಯಲ್ಲಿ ಅತ್ತಿಗೆಯಾದವಳು ಹಾಸ್ಯಮಾಡಿದಳು.

ಮದುಮಗನ ಮುಖ ದಪ್ಪಗಾಗಿತ್ತು. ಮನೆಯಲ್ಲಿ ಎಲ್ಲೆಲ್ಲೂ ವಾಗ್ಯುದ್ಧ ನಡೆದಿತ್ತು. ಗಂಡಿನ ಕಡೆಯವರು "ಹಾಂ....ಹೂಂ" ಎನ್ನುತ್ತಾ ಮದುವೆ ಮನೆಯಿಂದ ಕಾಲ್ತೆಗೆದರು. ಸಾಮಾನಿನ ಸಹಿತವಾಗಿ ಸ್ಟೇಷನ್ನಿನ ಕಡೆ ನಡೆದರು. ಇವರಿನ್ನೂ ಫರ್ಲಾಂಗ್ ದೂರದಲ್ಲಿರುವಾಗಲೇ "ಹೇಗೆ ಹತ್ತುತ್ತೀರೋ ನೋಡ್ತೀನಿ" ಎನ್ನುವಂತೆ ಕೂಗುಹಾಕಿ ಓಡಿತು—ಅವರು ಹತ್ತಬೇಕಾಗಿದ್ದ ರೈಲು. ಮತ್ತೆ ರಾತ್ರಿ ಹನ್ನೆರಡು ಗಂಟೆಯವರೆವಿಗೂ ಅವರ ಹಳ್ಳಿಯ ಕಡೆ ಹೊರಡುವ ರೈಲಿರಲಿಲ್ಲ. ಹಗಲೆಲ್ಲಾ ಊರು ಸುತ್ತಿದರು. ಕಂಡವರ ಹತ್ತಿರ ಹೆಣ್ಣಿನ ಕಡೆಯವರನ್ನು ಸಿಕ್ಕಾಪಟ್ಟೆ ಬೈದರು. ಹಸಿದ ಹೊಟ್ಟೆಯಲ್ಲಿ ಮದುವೆಯ ಔತಣದೂಟ ನೆನೆಸಿಕೊಳ್ಳುತ್ತಾ, ಅಯ್ಯರ್ ಹೋಟಲಿನಲ್ಲಿ ಸಾಂಬಾರು ಅನ್ನ ಉಂಡರು.

ಮಧ್ಯವರ್ತಿಗಳ ರಾಯಭಾರ ಫಲಿಸಲಿಲ್ಲ. ಎರಡು ಕಡೆಯವರಲ್ಲಿ ಯಾರೂ ಒಂದು ಮೆಟ್ಟಲಿಳಿಯಲೂ ಇಚ್ಛಿಸಲಿಲ್ಲ. 'ಅವರಿಗೇ ಇಲ್ಲದ್ದು ನಮಗೇನಂತೆ?' ಎಂದು ಎಲ್ಲರೂ ಸುಮ್ಮನಾದರು. ಮದುವೆಗೆ ಬಂದ ಬಂಧುಬಳಗದವರು ನಡೆದದ್ದಕ್ಕೆ ಮತ್ತಷ್ಟು ಸೇರಿಸಿ ಮಾತನಾಡಿಕೊಳ್ಳುತ್ತಾ, ತಮಗೆ ಬರಬೇಕಾದ ಉಡುಗೊರೆಗಳು ತಪ್ಪಿಹೋದುವಲ್ಲಾ ಎಂದು ಚಿಂತಿಸುತ್ತಾ, ಎರಡೂ ಕಡೆಯವರನ್ನು ಬೈದುಕೊಳ್ಳುತ್ತಾ ಮನೆಯ ದಾರಿ ಹಿಡಿದರು.

ನಡೆದುಹೋದ ಘಟನೆಯೊಂದಿಗೆ ತನ್ನ ಸಂಬಂಧ ಎಷ್ಟರ ಮಟ್ಟಿಗೆ ಎಂಬುದನ್ನರಿಯದ ಮದುವೆಹೆಣ್ಣು ಬೆದರಿ ಕುಳಿತಿದ್ದಳು. ಆವೇಶ ಕಡಿಮೆಯಾದ ಹೆಣ್ಣಿನ ತಾಯಿ ಸುಂದರಮ್ಮ ಆಲೋಚಿಸತೊಡಗಿದರು.

"ನಮ್ಮ ಕರ್ಮ. ಏನು ಮಾಡೋದು? ಹೆಣ್ಣು ಕೊಟ್ಟವರು ಹಠ ಹಿಡಿದರೆ ಹೇಗೆ? ಆ ಸಾವಿರ ರೂಪಾಯಿ ಸಾಲವೋ ಸೋಲವೋ ಮಾಡಿ ಅವರ ಮುಖಕ್ಕೆ ಹಾಕಿ ಬನ್ನಿ. ಇನ್ನೂ ಸ್ಟೇಷನ್ನಿನಲ್ಲೇ ಬಿದ್ದಿದ್ದಾರಂತೆ" ಎಂದರು ಗಂಡನೊಡನೆ.

"ಇನ್ನೊಂದು ಪೈಸಾ ಕೂಡಾ ಕೊಡೋದಿಲ್ಲ. ಅವರು ಕೇಳಿದ್ದೆಲ್ಲಾ ಕೊಡುತ್ತಾ ಹೋದರೆ ಅದಕ್ಕೆ ಕೊನೆಯೆಲ್ಲಿ? ಏನು ಮಾಡುತ್ತಾರೋ ಮಾಡಲಿ ನೋಡೋಣ" ಎಂದರು ಹೆಣ್ಣಿನ ತಂದೆ ರಮಣಯ್ಯನವರು.

ರಾತ್ರಿ ಹತ್ತು ಗಂಟೆ ದಾಟಿತ್ತು. ಮದುವೆ ಮನೆಯಲ್ಲಿ ಎಲ್ಲಿಯವರಲ್ಲಿ ಬಿದ್ದುಕೊಂಡಿದ್ದರು. ಅಲ್ಲಿ ರೈಲ್ವೆ ಸ್ಟೇಷನ್ನಿನಲ್ಲಿ ಗಂಡಿನ ಕಡೆಯವರು ಪ್ಲಾಟ್

ಫ್ಲಾಟ್‌ಫಾರಂನಲ್ಲಿ ಪೆಟ್ಟಿಗೆಗಳಿಗೂ ಮೂಟೆಗಳಿಗೂ ಆತು ಮಲಗಿ ಅರೆನಿದ್ದೆಯಲ್ಲಿದ್ದರು.

ಮೆಲ್ಲಗೆ ಬೀದಿಯ ಬಾಗಿಲು ತೆಗೆದು ಹೊರಬಿದ್ದಳು, ಮದುಮಗಳು ಜಾನಕಿ. ಕಾಲಿಗೆ ಹಚ್ಚಿದ್ದ ಅರಿಸಿನ ಮಾಸಿರಲಿಲ್ಲ. ಇನ್ನೂ ಹಣೆಯಲ್ಲಿರಿಸಿದ ಕಲ್ಯಾಣತಿಲಕ ಹಾಗೇ ಇತ್ತು. ಸೆರಗನ್ನು ಭುಜದ ತುಂಬಾ ಹೊದ್ದುಕೊಂಡು ತಲೆತಗ್ಗಿಸಿ ಬೀದಿಯ ದೀಪದ ಬೆಳಕನ್ನು ತಪ್ಪಿಸಿಕೊಳ್ಳುತ್ತಾ, ಸ್ಟೇಷನ್ನಿನ ಕಡೆ ನಡೆದಿದ್ದಳು ಜಾನಕಿ.

ಹಾಸಿಗೆಯ ಸುರುಳಿಗೆ ಆತು ತೂಕಡಿಸುತ್ತಿದ್ದ ಮದುಮಗ ರಾಜಾರಾಯನಿಗೆ ತನ್ನನ್ನು ಯಾರೋ ಕರೆಯುತ್ತಿದ್ದಂತೆನಿಸಿ, ಕಣ್ಣು ತೆರೆದು ನೋಡಿದ. ಮಸುಕು ಬೆಳಕಿನಲ್ಲಿ ಜಾನಕಿಯನ್ನು ಗುರ್ತಿಸಲಿಲ್ಲ ಆತ. ಜಾನಕಿಯನ್ನು ಆತ ನೋಡಿದ್ದು ಬಹಳ ಕಡಿಮೆ ಸಮಯ ಮಾತ್ರ. ಹುಡುಗಿಯನ್ನು ನೋಡಹೋದಾಗ ಅರ್ಧಗಂಟೆ. ಮತ್ತೆ ಧಾರೆಯ ಸಮಯದಲ್ಲಿ ಸ್ವಲ್ಪ ಹೊತ್ತು ಅಷ್ಟೆ.

ಜಾನಕಿ ಹೆಚ್ಚು ಪ್ರಯಾಸವಿಲ್ಲದೆಯೇ ಅವನನ್ನು ಗುರ್ತಿಸಿದ್ದಳು. ಕಣ್ಣಿಗೆ ಕಾಡಿಗೆ, ಕೆನ್ನೆಯಮೇಲೆ ದೃಷ್ಟಿಬೊಟ್ಟು ಮದುಮಗನಿಗಲ್ಲದೆ ಬೇರಾರಿಗೆ ಇರಬಲ್ಲುದು? ಅದೂ ಅಲ್ಲದೆ ಹೆಸರು ಹಿಡಿದು ಕರೆದಾಕ್ಷಣ ಬೆಚ್ಚಿಬಿದ್ದು ನೋಡಿದ್ದ. ಆತನೇ ರಾಜಾರಾಯ ಎಂದುಕೊಂಡಳು.

"ಯಾರು ಬೇಕು?" ರಾಜಾರಾಯ ಸರಿಯಾಗಿ ಕುಳಿತುಕೊಳ್ಳಲು ಪ್ರಯತ್ನಿಸುತ್ತಾ ಪ್ರಶ್ನಿಸಿದ.

"ನಿಮ್ಮೊಂದಿಗೆ ಮಾತನಾಡಬೇಕು. ಸ್ವಲ್ಪ ಈ ಕಡೆ ಬರುತ್ತೀರಾ?"

ಸುತ್ತಲೂ ಎಲ್ಲರೂ ನಿದ್ದೆಯಲ್ಲಿದ್ದರು. ಸ್ಟೇಷನ್ನಿನ ಗಡಿಯಾರ ಹನ್ನೊಂದು ಗಂಟೆ ತೋರಿಸುತ್ತಿತ್ತು. ಇಂತಹ ರಾತ್ರಿ ಯಾರೀ ಹುಡುಗಿ? ತನ್ನೊಂದಿಗೇನು ಕೆಲಸ ಈಕೆಗೆ? ಎಂದುಕೊಂಡ ರಾಜಾರಾಯ. ವಿಧವಿಧವಾದ ಊಹಾಪೋಹಗಳು ಮನಸಿನಲ್ಲಿ ಸುಳಿದು ಉತ್ಸಾಹ ತುಂಬಿಬಂತು. 'ಯಾರಾದರೆ ತನಗೇನು? ಹೆಣ್ಣು ಕರೆಯುತ್ತಿರುವಾಗ ಆಲೋಚನೆಮಾಡಬೇಕೆ?' ಎಂದುಕೊಂಡ.

ಇಬ್ಬರೂ ನಾಲ್ಕು ಹೆಜ್ಜೆ ನಡೆದು ಗೋಡೆಗಾತು ನಿಂತರು, ಒಂದುಕ್ಷಣ ಸಂಭಾಷಣೆ ಹೇಗೆ ಪ್ರಾರಂಭಿಸಬೇಕೆಂಬುದು ಅರ್ಥವಾಗಲಿಲ್ಲ, ಜಾನಕಿಗೆ.

"ಯಾರು ನೀನು?" ಮತ್ತೆ ಆತನೇ ಪ್ರಶ್ನಿಸಿದ.

ಜಾನಕಿ ತಲೆಯೆತ್ತಿ ಆತನ ಕಡೆ ನೋಡಿದಳು. ಆ ಕ್ಷಣದಲ್ಲಿಯೇ ದೂರದಲ್ಲಿ ಹೋಗುತ್ತಿದ್ದ ಲಾರಿಯೊಂದರ ದೀಪದ ಬೆಳಕು ಅವಳ ಮುಖದ ಮೇಲೆ

ಬಿತ್ತು.

"ಓ....ನೀನೇ...." ಆತನಿಗೆ ಗುರ್ತು ಸಿಕ್ಕಿತ್ತು.

"ಹೌದು....ನಾನೇ." ಮೆಲುದನಿಯಲ್ಲಿ ನುಡಿದಳು ಜಾನಕಿ.

"ಈಗೇಕೆ ಬಂದೆ? ನಿಮ್ಮಪ್ಪ ಹಗಲು ಮಾಡಲಾಗದ ರಾಜಿಯನ್ನು ರಾತ್ರಿ ನಿನ್ನ ಮೂಲಕ ಮಾಡಿಸೋಣ ಎಂದುಕೊಂಡರೇನು?" ಆತನ ಮಾತಿನಲ್ಲಿ ತಿರಸ್ಕಾರ ತುಂಬಿತ್ತು.

"ಯಾರೂ ನನ್ನನ್ನು ಕಳುಹಿಸಲಿಲ್ಲ. ನಾನು ಇಲ್ಲಿಗೆ ಬಂದಂತೆ ಮನೆಯಲ್ಲಿ ಯಾರಿಗೂ ಗೊತ್ತಿಲ್ಲ."

"ಮತ್ತೇಕೆ ಬಂದೆ?"

"ಈಗ ನಡೆದ ಘಟನೆಯಲ್ಲಿ ನಿಮಗೆಷ್ಟು ಪಾಲಿದೆಯೋ ತಿಳಿದು ಕೊಳ್ಳೋಣವೆಂದು ಬಂದೆ. ನಿಮ್ಮವರ ಮಾತುಗಳ ಅರ್ಥವನ್ನು ಯಾವ ರೀತಿ ಗ್ರಹಿಸಬೇಕೆಂಬುದನ್ನು ನಿಮ್ಮನ್ನು ಕೇಳಿ ತಿಳಿದುಕೊಳ್ಳೋಣವೆಂದು ಬಂದೆ...." ಜಾನಕಿ ಆತನ ಮುಖವನ್ನು ದಿಟ್ಟಿಸುತ್ತಾ ಒತ್ತಿ ಹೇಳಿದಳು.

"ಅಂದರೆ ನಮ್ಮ ತಂದೆ ನನ್ನ ಪ್ರಮೇಯವಿಲ್ಲದೆಯೇ ನಿಮ್ಮನ್ನು ಪೀಡಿಸುವ ಉದ್ದೇಶದಿಂದ ಈ ಮೂಲಕ ಸಾವಿರ ರೂಪಾಯಿ ಕೇಳಿದರೆನ್ನು ತ್ತೀಯಾ?"

"ಹೌದು, ರಾಜಾರಾಯರೇ, ಹಿರಿಯರು ಪೂರ್ವಕಾಲದ ಆಚಾರಗ ಳೆಂದು ಅದೂ, ಇದೂ ಕೇಳುವುದೂ ಮದುವೆಯಲ್ಲಿ ಗಲಾಟೆ ಎಬ್ಬಿಸುವುದೂ, ನಾಲ್ಕು ಜನದ ಮುಂದೆ ಅಪಹಾಸ್ಯದ ಪಾಲಾಗುವುದೂ ನಮಗೆಲ್ಲಾ ಗೊತ್ತಿದ್ದದ್ದೇ. ಆದರೆ ಈಗಿನ ಕಾಲದ ಯುವಕರು ಇಂತಹ ವಿಷಯಗಳಿಗೆ ಹೆಚ್ಚು ಪ್ರಾಧಾನ್ಯತೆ ಕೊಡುವುದಿಲ್ಲವೆಂದೂ, ಕನಿಷ್ಟಪಕ್ಷ ಪರಿಸ್ಥಿತಿ ಅನುಕೂಲಿ ಸದಿದ್ದಾಗ ಅದಕ್ಕೋಸ್ಕರ ಹಟಹಿಡಿಯುವುದಿಲ್ಲವೆಂದೂ ನನ್ನ ಅಭಿಪ್ರಾಯ."

"ಓ....ನೀನಂದುಕೊಳ್ಳುತ್ತಿರುವುದು ಕಾಲೇಜಿಗೆ ಮಣ್ಣು ಹೊತ್ತು ವರದಕ್ಷಿಣೆ ತಪ್ಪು ಎಂದು ಉಪನ್ಯಾಸ ಕೊಡುವ ಯುವಕರನ್ನು ಕುರಿತಾಗಿರ ಬಹುದು. ನಾನು ಓದಿಕೊಂಡವನಲ್ಲ. ನನಗಂತಹ ಉನ್ನತ ಭಾವನೆಗಳೂ ಇಲ್ಲ. ನಮ್ಮ ಪೂರ್ವದ ಸಂಪ್ರದಾಯ ಆಚಾರಗಳನ್ನು ಬಿಟ್ಟುಕೊಡುವಷ್ಟು ನಾಗರಿಕತೆ ನಮ್ಮ ಮನೆಯಲ್ಲಿ ಇನ್ನೂ ಬರಲಿಲ್ಲ."

"ನಿಮ್ಮ ಆಚಾರ, ಸಂಪ್ರದಾಯಗಳು ಏನು ಹೇಳುತ್ತಿವೆ, ರಾಜಾ ರಾಯರೇ? ಹೆಣ್ಣು ಹೆತ್ತು ಅವಳನ್ನು ನಿಮಗೊಪ್ಪಿಸಿದ ತಪ್ಪಿಗೆ, ಕನ್ಯಾದಾತರ ಧನ-ಮಾನ-ಪ್ರಾಣಗಳನ್ನು ಒತ್ತೆಯಿಡುವಂತೆ ಮಾಡಿ ಅವರನ್ನು ನಾಶ

ಮಾಡಬೇಕೆಂದೇ?

"ಗಂಡುಮಕ್ಕಳೊಂದಿಗೆ ಸಮಾನವಾಗಿ ಹೆಣ್ಣುಮಕ್ಕಳಿಗೂ ಆಸ್ತಿಯಲ್ಲಿ ಪಾಲಿಲ್ಲದ ಕಾಲದಲ್ಲಿ ತಮ್ಮ ಮನೆಯ ಮಗು ಬೇರೆ ಮನೆಗೆ ಹೋಗುತ್ತಿದೆಯಲ್ಲಾ, ಅವಳ ಆವಶ್ಯಕತೆಗಳನ್ನು ಪೂರೈಸೋಣವೆಂಬ ಉದ್ದೇಶದಿಂದ ಬೇಕಾದ ವಸ್ತುಗಳನ್ನು ಇಚ್ಛಾಪೂರ್ವಕವಾಗಿ, ಸ್ವಸಂತೋಷದಿಂದ ಕೊಡುತ್ತಿದ್ದರು ಪೂರ್ವಿಕರು. ವಿವಾಹ ಸಮಯದಲ್ಲಿ ತಮ್ಮ ಸಂತೋಷವನ್ನು ವ್ಯಕ್ತಗೊಳಿಸಲು ತಮ್ಮ ಯೋಗ್ಯತೆಗೆ ತಕ್ಕಂತೆ ವರದಕ್ಷಿಣೆ ಕೊಡುತ್ತಿದ್ದರು. ಈ ಆಚಾರಗಳನ್ನು ಸಂತೋಷವಾಗಿ ಆಚರಿಸುವುದು ನಿಂತು ನಿರ್ಬಂಧ ಎಂದು ಪ್ರಾರಂಭವಾಯಿತೋ ಅಂದಿನಿಂದ ಹೆಣ್ಣುಮಕ್ಕಳ ಮದುವೆ ಒಂದು ಸಮಸ್ಯೆಯಾಗತೊಡಗಿತು. ವರದಕ್ಷಿಣೆ ಎಂಬ ಆಚಾರ ದುರಾಚಾರವಾಗಿ ಮಾರ್ಪಟ್ಟಿತು. ಇಂತಹ ದುರಾಚಾರಗಳನ್ನು ದೂರಮಾಡಲು ನಿಮ್ಮಂತಹ ಯುವಕರು ಮುಂದೆ ಬರಬೇಕು. ಅದನ್ನು ಬಿಟ್ಟು ಇನ್ನೂ ಸಂಪ್ರದಾಯವೆಂದೂ, ಆಚಾರ ಎಂದೂ ಹಠ ಹಿಡಿಯುವುದು ನ್ಯಾಯವೇ? ಹೀಗಾದರೆ ನಮ್ಮ ಸಮಾಜ ಉನ್ನತಿ ಸಾಧಿಸುವುದೆಂದಿಗೆ?. ಸರ್ಕಾರ ಎಷ್ಟು ರೂಲ್ ತಂದರೂ ನಿಮ್ಮಂತಹ ಯುವಕರ ಸಹಾಯವಿಲ್ಲದೆ ಅದು ಊರ್ಜಿತವಾಗಲಾರದು" ಎಂದಳು ಜಾನಕಿ.

"ನೀನು ಹೇಳಿದ್ದೆಲ್ಲಾ ಉಪನ್ಯಾಸದಂತೆ ಕೇಳಲು ಚೆನ್ನಾಗಿಯೇ ಇದೆ, ಜಾನಕಿ. ಇಂತಹ ಸಮಾಜೋದ್ಧರಣೆಯ ಕೆಲಸವನ್ನು ನಾನು ವ್ಹೈಮೇಲೆ ಹಾಕಿಕೊಂಡಿಲ್ಲ ಮತ್ತೆ. ನನಗೆ ಬೇಕಾದ್ದು ನನ್ನವರ ಸುಖ-ಸಂತೋಷ. ನನ್ನ ತಂದೆತಾಯಿಯರ ಸಂತೃಪ್ತಿ. ನಮ್ಮ ಮನೆಯಲ್ಲಿ ನಾನೊಬ್ಬನೇ ಗಂಡು ಮಗ. ಮಿಕ್ಕ ಹೆಣ್ಣುಮಕ್ಕಳಿಗೆಲ್ಲಾ ನಾವೂ ಮದುವೆ ಮಾಡಬೇಕು. ಬರಬೇಕಾದ ಕಡೆ ವಸೂಲು ಮಾಡಿಕೊಳ್ಳದಿದ್ದಲ್ಲಿ ನಾವು ಕೊಡಬೇಕಾದ ಕಡೆ ಹೇಗೆ ಕೊಡಬಲ್ಲೆವು?"

"ಅದಕ್ಕೋಸ್ಕರ, ಸಾವಿರ ರೂಪಾಯಿಗಾಗಿ ನೀವು ಪವಿತ್ರವಾಗಿ ಭಾವಿಸಿ ಕಟ್ಟಿದ ಈ ಮಾಂಗಲ್ಯವನ್ನು ತೃಣೀಕರಿಸಿ ಹೊರಟುಹೋಗುತ್ತೀರಾ? ಈ ಈ ವಿಷಯದಲ್ಲಿ ನಿಮ್ಮ ರೀತಿ-ರಿವಾಜು ಏನು ಹೇಳುತ್ತದೆ? ಅಗ್ನಿಸಾಕ್ಷಿಯಾಗಿ ಕಟ್ಟಿದ ಈ ತಾಳಿಗೆ ಎಷ್ಟರಮಟ್ಟಿಗೆ ಬೆಲೆ ಕೊಡಬೇಕೆಂದು ಹೇಳಿದೆ? ರಾಜಾರಾಯರೆ, ನೀವು ಸ್ವಲ್ಪ ಆಲೋಚಿಸಿ ನೋಡಿ. ದೊಡ್ಡವರ ಮೂರ್ಖತೆಗೆ ಬಡುಕಿ ಬಾಳಬೇಕಾದ ಚಿಕ್ಕವರ ಬಾಳನ್ನು ಬಲಿಕೊಡುವುದರಲ್ಲಿ ಅರ್ಥವಿಲ್ಲ. ದೊಡ್ಡವರು ತಮ್ಮ ಹಠಮಾರಿತನಕ್ಕೆ ಕೊಡುವ ಬೆಲೆಯನ್ನು ಹುಡುಗರ ಒಳಿತು ಕೆಡಕುಗಳಿಗೆ ಕೊಡುವುದಿಲ್ಲ. ಅಪ್ಪನಿಗೆ ಬಂದಿಷ್ಟು ಸಾಧ್ಯವಿದ್ದಿದ್ದರೂ ಈ ರೀತಿ

ರೇಗಾಡುತ್ತಿರಲಿಲ್ಲ. ಇದ್ದುದನ್ನೆಲ್ಲ ಈ ಮದುವೆಗೆ ಖರ್ಚುಮಾಡಿಬಿಟ್ಟಿದ್ದಾರೆ. ಇನ್ನೊಂದು ಪೈಸಾ ಸಹ ಸಾಲಮಾಡುವ ಸ್ಥಿತಿಯಲ್ಲಿಲ್ಲ. ಆ ಮಾತು ಹೇಳಲಾರದೆ ಹೀಗನ್ನುತ್ತಿದ್ದಾರೆ."

"ಇಷ್ಟು ಚಿಕ್ಕ ಬೇಡಿಕೆಯನ್ನು ತೀರಿಸಲಾರದವರು ದೊಡ್ಡ ಸಂಬಂಧಕ್ಕೆ ಏಕೆ ಕೈ ಚಾಚಬೇಕು? ತಮಗೆ ತಕ್ಕ ಸಂಬಂಧ ನೋಡಿಕೊಂಡರೆ ಆಗುತ್ತಿರಲಿಲ್ಲವೇ? ಆಸೆ ಹೆಚ್ಚು....ದಾರಿ ಸಣ್ಣದು ಅಂತ ಇಂಥದಕ್ಕೇ ಅಂತಾರೆ. ನಿಮ್ಮವರಿಷ್ಟು ದರಿದ್ರರೆಂದು ತಿಳಿದಿದ್ದರೆ...."

ರಾಜಾರಾಯನ ಮಾತಿನಿಂದ ಜಾನಕಿಯ ಸಹನೆಯ ಕಟ್ಟೆಯೊಡೆಯಿತು. ಅಲ್ಲಿಗೂ ಅವಳು ಇದುವರೆವಿಗೂ ತನ್ನ ವಯಸ್ಸಿಗೆ ಮೀರಿದ ಸಹನೆ ತೋರಿಸಿದ್ದಳು. ಕಷ್ಟ ನಿಷ್ಠೂರಗಳ ಮಧ್ಯೆ ಬೆಳೆದ ಆ ಹುಡುಗಿಯ ಮನಸ್ಸು ಅವಳ ವಯಸಿಗೂ ಮೀರಿ ಬೆಳೆದಿತ್ತು. ಆದ್ದರಿಂದಲೇ ಮದುವೆಯ ಮನೆಯಲ್ಲಿ ನಡೆದ ಗಲಾಟೆ ಮುಂದೆ ತನ್ನ ವೈವಾಹಿಕ ಜೀವನದ ಮೇಲೆ ಎಂತಹ ಪ್ರಭಾವವನ್ನುಂಟು ಮಾಡಬಹುದೆಂಬುದನ್ನು ಊಹಿಸಿದಳು. ಯುವಕನಾದ ರಾಜಾರಾಯನೊಂದಿಗೆ ಮಾತನಾಡಿ ಇಂತಹ ಅವಾಂಚಿತ ಪರಿಸ್ಥಿತಿಯನ್ನು ಮೊದಲಿನಲ್ಲೇ ಕೊನೆಮುಟ್ಟಿಸಬೇಕೆಂದು ನಿಶ್ಚಯಿಸಿಕೊಂಡಳು. ಅರಿಶಿನ ಹಚ್ಚಿದ ಹಚ್ಚನೆಯ ಪಾದಗಳನ್ನು ಮನೆಯಿಂದ ಹೊರಗಿಡುವ ಸಾಹಸ ಮಾಡಿದ್ದಳು.

ಆದರೆ ರಾಜಾರಾಯನ ಮಾತುಗಳನ್ನು ಕೇಳಿದ ನಂತರ ಈ ವಿಷಯ ತಾನಂದುಕೊಂಡಷ್ಟು ಸುಲಭವಾಗಿ ಪರಿಷ್ಕಾರವಾಗುವುದಲ್ಲವೆಂದು ಮನವರಿಕೆಯಾಯಿತವಳಿಗೆ. ಧನದಾಹ ತಂದೆಮಕ್ಕಳಿಬ್ಬರಲ್ಲಿ ಸಮಾನವಾಗಿಯೇ ಇದೆಯೆಂದೂ, ಈ ವಿಷಯದಲ್ಲಿ ತಂದೆ ಹಾಕಿದ ಗೆರೆಯನ್ನು ಮಗ ದಾಟುವ ಪರಿಸ್ಥಿತಿಯಲ್ಲಿ ಇಲ್ಲವೆಂದೂ ತಿಳಿಯಿತು. ಪರಿಷ್ಕಾರ ಮಾರ್ಗ ಕಾಣದಂತಾದಾಗ ಜಾನಕಿಯಲ್ಲಿ ಅದುವರೆಗೂ ಅಡಗಿದ್ದ ಅಹಂಕಾರ ತಲೆಯೆತ್ತಿತು. ಆವೇಶದಿಂದ ಜವಾಬು ಹೇಳುವಷ್ಟರಲ್ಲಿಯೇ ಹಿಂಬದಿಯಿಂದ ಯಾರೋ "ರಾಜೂ" ಎಂದು ಕೂಗಿದಂತಾಯಿತು.

"ನಿಮಗೋಸ್ಕರ ಯಾರೋ ಬರುತ್ತಿರುವಂತಿದೆ. ನಾನು ಹೇಳಬೇಕಾದ್ದನ್ನು ಎರಡು ಮಾತಿನಲ್ಲಿ ಹೇಳಿ ಹೊರಟುಹೋಗುತ್ತೇನೆ. ಅನಂತರ ನಿಮ್ಮಿಷ್ಟದಂತೆ ಮಾಡಿ.

"ರಾಜಾರಾಯರೆ, ನಮಗೆ ಹಣವಿಲ್ಲವೆಂದೂ ದರಿದ್ರರೆಂದೂ ನಿಂದಿಸಿದಿರಿ. ನಮ್ಮ ತಂದೆಗೇ ಹಣವಿದ್ದಿದ್ದಲ್ಲಿ ನಿಮ್ಮ ಸಂಬಂಧದ ಕಡೆ ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ವಿದ್ಯೆ, ರೂಪ, ಸಂಸ್ಕಾರಗಳುಳ್ಳ ಹುಡುಗನನ್ನು ಹುಡುಕಿ ತರು

ತ್ತಿದ್ದರು. ಆದರೆ ಅವರಿಗೆ ಆ ಶಕ್ತಿ ಇಲ್ಲ. ನಮಗಿಲ್ಲದ ಹಣ ನಿಮಗಿದೆ. ಆದ್ದರಿಂದಲೇ ಮಿಕ್ಕ ಲಕ್ಷಣಗಳಿಗೋಸ್ಕರ ಒದ್ದಾಡದೆ ನಿಮ್ಮನ್ನು ಮದುವೆಯಾದೆ. ಮಿಕ್ಕ ವಿಷಯಗಳು ಹೇಗಿದ್ದರೂ ಬದುಕಿದ್ದಷ್ಟು ದಿನ ತಮ್ಮ ಮಗುವಿಗೆ ಹೊಟ್ಟೆಗೆ ಅನ್ನದ ಕೊರತೆ ಇರುವುದಿಲ್ಲವೆಂದು ನನ್ನವರು ನಂಬಿದರು.

"ವಿದ್ಯೆಯಿಲ್ಲದಿದ್ದರೂ ನಿಮ್ಮಲ್ಲಿ ವಿವೇಕವಿದೆಯೆಂದು ನಂಬುತ್ತೇನೆ. ನಿಮ್ಮ ತಂದೆ ಜಾರಿಮಾಡಿದ ಹುಕುಮನ್ನು ಕಾರ್ಯರೂಪದಲ್ಲಿ ತರುವ ಮೊದಲು ಸ್ವಲ್ಪ ನಿಮ್ಮ ಬುದ್ಧಿಯನ್ನುಪಯೋಗಿಸಿ. ಅನಂತರ ಕೆಲಸ ಮಾಡಿ ರೆಂದೇ ನನ್ನ ಪ್ರಾರ್ಥನೆ. ಇದಕ್ಕಿಂತ ಹೆಚ್ಚು ಹೇಳಲಾರೆ. ನಮಸ್ಕಾರ" ಎಂದು ಹಿಂದಿರುಗಿ ಸಹ ನೋಡದೆ ಸರಸರನೆ ಹೊರಟುಹೋದಳು ಜಾನಕಿ.

ಜಾನಕಿಯ ಮಾತುಗಳು ಚಪ್ಪಲಿಯಿಂದ ಮುಖಕ್ಕೆ ಹೊಡೆದಂತಾಗಿತ್ತು ರಾಜಾರಾಯನಿಗೆ. 'ಎಲೇ ಮಂಕೇ, ನಿನಗೆ ದುಡ್ಡಿದ್ದರೆ ಆಯಿತೇ? ನನಗೆ ವಿದ್ಯೆಯಿದೆ, ಸಭ್ಯತೆಯಿದೆ. ಎಂತಹ ಪರಿಸ್ಥಿತಿಯಲ್ಲೂ ನಿರ್ಭಯವಾಗಿ ನಿಂತು ಆಲೋಚಿಸತಕ್ಕ ಶಕ್ತಿಯಿದೆ. ನಿನಗೇನಿದೆ?' ಎಂದು ಸವಾಲು ಮಾಡಿದಂತೆ ಆಗಿತ್ತು.

ಅರ್ಧ ರಾತ್ರಿ ಬಂದು ಹೆಚ್ಚು ಪರಿಚಯವಿಲ್ಲದ ಗಂಡಸಿನ ಎದುರು ನಿಂತು ಎಷ್ಟು ಮಾತನ್ನಾಡಿಹೋಗಿದ್ದಾಳೆ? ಈ ಹುಡುಗಿಗೆಷ್ಟು ಧೈರ್ಯ?— ಎಂದು ಆಶ್ಚರ್ಯವೂ ಆಯಿತು.

ಗಂಡಸರ ಮುಖ ಕಂಡರೇ ತಲೆ ಮರೆಸಿಕೊಳ್ಳುವ ತಮ್ಮ ಮನೆಗಳಲ್ಲಿನ ಹೆಂಗಸರೊಂದಿಗೆ ಜಾನಕಿಯನ್ನು ಹೋಲಿಸಿ ನೋಡಿ, 'ಹಣದ ವಿಷಯ ಮರೆತು ಈ ಹುಡುಗಿಯನ್ನು ಕರೆದುಕೊಂಡು ಹೋದರೂ ಸ್ಥಿರವಾಗಿ ಸಂಸಾರ ಮಾಡುತ್ತಾಳೆಂಬ ನಂಬಿಕೆಯೇನು?' ಎಂದುಕೊಂಡ. ಇಂತಹ ಹುಡುಗಿ ಯನ್ನು ತಾನು ಭರಿಸಬಲ್ಲೆನೇ ಎಂದೂ ಅನ್ನಿಸಿತು. ಸರಿಯಾದ ಉತ್ತರ ಬರುವ ಮುನ್ನವೇ ರೈಲು ಹೊರಟಿತ್ತು. ಮತ್ತೆ ತಂದೆ-ತಾಯಿಯರ ಆರ್ಭಟ, ಬಂಧುಗಳ ಬೋಧನೆಗಳ ನಡುವೆ ಜಾನಕಿಯ ಪ್ರಾರ್ಥನೆ ಮರೆಯಾಗಿತ್ತು.

* * *

ರಮಣಯ್ಯನವರ ಮನೆಯಲ್ಲಿ ಜಾನಕಿಯ ಮದುವೆಯಲ್ಲಿ ನಡೆದ ರಾದ್ಧಾಂತದ ಸದ್ದಡಗದ ಮುಂಚೆಯೇ ಮೂರು ತಿಂಗಳು ಕಳೆದುಹೋಗಿತ್ತು. ಶ್ರಾವಣ ಮಾಸ ಆರಂಭವಾದಂದಿನಿಂದ ಅವರ ಮನೆಯಲ್ಲಿ ಪ್ರತಿದಿನ ಆತುರ ದಿಂದ ಎದುರು ನೋಡುವುದರಲ್ಲಿಯೇ ಕಳೆಯುತ್ತಿತ್ತು. ಜಾನಕಿಯ ಜತೆಯಲ್ಲಿ

ಮದುವೆಯಾದ ಹೆಣ್ಣುಮಕ್ಕಳಿಗೆಲ್ಲಾ ಅತ್ತೆಯ ಮನೆಯಿಂದ ಶ್ರಾವಣ ಪಟ್ಟೆ ಬಂದಾಗಿತ್ತು. ಸುಂದರಮ್ಮ ಹಗಲೂ ರಾತ್ರಿ ಬೀಗರಿಗೋಸ್ಕರ ಎದುರು ನೋಡುತ್ತಿದ್ದಂತೆಯೇ ಶ್ರಾವಣಮಾಸ ಕಳೆದುಹೋಯಿತು.

ಅದುವರೆವಿಗೂ ಕಿಂಚಿತ್ ಆಸೆಯಿಂದ ತಡೆದುಹಿಡಿದಿದ್ದ ದುಃಖವನ್ನು ಮಾತಿನ ರೂಪದಲ್ಲಿ ಗಂಡನಮೇಲೆ ಹರಿಯಬಿಟ್ಟರು ಸುಂದರಮ್ಮ: "ನಿಮ್ಮ ಹಟ ನೋಡಿಕೊಂಡಿರೇ ಹೊರತು ಹೆಣ್ಣುಮಗುವಿನ ಗತಿ ಏನಾಗುತ್ತದೆಯೆಂಬ ಜ್ಞಾನ ನಿಮಗಿಲ್ಲದೆಹೋಯಿತು ಆ ಸಾವಿರ ರೂಪಾಯಿ ಅವರ ಮುಖಕ್ಕೆ ಹೊಡೆದು ಬನ್ನಿ ಅಂತ ಗಿಣಿಗೆ ಹೇಳಿದ ಹಾಗೆ ಹೇಳಿದೆ. ಕೇಳಿದಿರಾ? ನನ್ನ ಮಾತೊಂದರೆ ನಿಮಗೆಲ್ಲಿ ಲಕ್ಷ್ಯ? ಓದೂ-ಬರಹ ಇಲ್ಲದ ಈ ಹಳ್ಳಿಗಾಡಿನವರ ಸಂಬಂಧ ನಮಗೆ ಬೇಡ ಅಂದರೆ ಕೇಳಿದಿರಾ? 'ಓದು ಇಲ್ಲದಿದ್ದರೇನು, ಸಂಪ್ರದಾಯವುಳ್ಳ ಮನೆತನ. ಗೌರವಸ್ಥರು ಮೂರು ತಲೆಮಾರಿನವರೆಗೂ ತಿನ್ನುವಷ್ಟು ಆಸ್ತಿ ಇದೆ. ಹುಡುಗಿ ಸುಖ ಪಡುತ್ತಾಳೆ' ಅಂದಿರಿ. ಈಗ ನೋಡುತ್ತಿದೀರಲ್ಲಾ, ಈ ದುಡ್ಡಿದ್ದೋರಿಗಿರೋಷ್ಟು ಕಾರ್ಪಣ್ಯ ಬೇರೆ ಯಾರಿಗಿರುತ್ತೆ ಅಂತ. ಏನೋ ಮಾತಿಗೆ ಮಾತು ಬಂತು. ಅಂದುಕೊಂಡೆವು. ಹಾಗಂತ ಮಗೂನ ಸಂಸಾರಕ್ಕೆ ಕಿಚ್ಚಿಡುತ್ತಾರೇನು? ಅವರಿಗೆ ಮಾತ್ರ ಹೆಣ್ಣು ಮಕ್ಕಳಿಲ್ಲವೇ? ನನ್ನ ಮಗಳ ಉಸಿರು ಬಡಿದು ಅವರು ಮಾತ್ರ ಸುಖವಾಗಿ ಇರುತ್ತಾರೇನು?

"ಇಷ್ಟಕ್ಕೂ ಯಾರನ್ನೋ ಅಂದು ಏನು ಪ್ರಯೋಜನ? ಶನಿ ನಮ್ಮ ನಾಲಗೆಯ ಮೇಲೆ ಕುಳಿತು ಹಾಗೆ ಮಾತನಾಡಿಸಿತಷ್ಟೆ. ಹೆಣ್ಣು ಕೊಟ್ಟವರು ತಗ್ಗಿ ನಡೆದಿದ್ದರೆ ಏನು ಕಡಿಮೆಯಾಗುತ್ತಿತ್ತು?"

ಸುಂದರಮ್ಮ ಇದೇ ಧೋರಣೆಯಲ್ಲಿ ಮಾತನಾಡತೊಡಗಿದ್ದರು.

ಮೂರು ತಿಂಗಳಿಂದ ರಮಣಯ್ಯನವರು ಪ್ರಯತ್ನಪೂರ್ವಕವಾಗಿ ಧರಿಸಿದ್ದ ಬಿಂಕದ ಮುಖವಾಡ ಸುಂದರಮ್ಮನವರ ಮಾತಿನಿಂದ ಕಳಚಿ ಕೊಂಡಿತು. ಜಾನಕಿಯ ಬಾಳು ಏನಾಗುತ್ತದೆಯೋ ಎಂಬ ಚಿಂತೆ ಅವರ ನಿದ್ರಾಹಾರಗಳನ್ನು ದೂರಮಾಡಿತ್ತು. ಮೇಲೆ ಧೈರ್ಯದ ಮಾತುಗಳನ್ನಾಡು ತ್ತಿದ್ದರೂ, ಗಂಡಿನವರು ಹೊಸಿಲುದಾಟಿದ ಕ್ಷಣದಿಂದ ಅವರಿಗೆ ಮನಶ್ಶಾಂತಿ ಇಲ್ಲದಾಗಿತ್ತು. ಸುಂದರಮ್ಮನವರಿಗೆ ತಿಳಿಯದಂತೆ ಕ್ಷಮೆ ಬೇಡುತ್ತಾ ಬೀಗರಿಗೆ ಎರಡುಮೂರು ಕಾಗದ ಸಹ ಬರೆದಿದ್ದರು. ತಮಗೆ ತಿಳಿದವರ ಮುಖಾಂತರ ರಾಯಭಾರ ನಡೆಸಿದ್ದರು. ಯಾವುದೂ ಫಲಿಸಿರಲಿಲ್ಲ. ತಮ್ಮ ಹುಡುಗನಿಗೆ ಮದುವೆಯೇ ಆಗಲಿಲ್ಲವೆಂದೂ, ತಮಗೆ ಬೀಗರೇ ಇಲ್ಲವೆಂದರು. ಕೋರ್ಟಿಗೆ

ಹೋದರೆ ಈ ಮಾತು ಸುಳ್ಳಾಗಬಹುದು. ಆದರೆ ಅದರಿಂದ ಸಮಸ್ಯೆ ಪರಿಷ್ಕಾರ ವಾಗುವುದಿಲ್ಲ.

ಅವರು ಕೇಳಿದ ಸಾವಿರರೂಪಾಯಿ ಅವರ ಕೈಯಲ್ಲಿ ಬಿದ್ದ ಹೊರತು ಜಾನಕಿಯ ಬಾಳು ಸುಗಮವಾಗುವುದಿಲ್ಲವೆಂದು ರಮಣಯ್ಯನವರಿಗೆ ಸ್ಪಷ್ಟ ವಾಗಿ ತಿಳಿಯಿತು. ಆಸ್ತಿಯೆಲ್ಲಾ ಮದುವೆಗಾಗಿ ಪರಹಸ್ತ ಸೇರಿತ್ತು. ಇನ್ನು ಉಳಿದಿದ್ದ ಆ ಒಂದು ಹೆಂಚಿನ ಮನೆಯನ್ನೂ ಅಡವಿಟ್ಟು ಸಾವಿರದೈನೂರು ರೂಪಾಯಿ ಸಾಲ ತಂದರು. ದಸರಾ ಹಬ್ಬಕ್ಕೆ ಅಳಿಯನನ್ನು ಕರೆತರ ಬೇಕೆಂದೂ, ಅವರ ಬೇಡಿಕೆಗಳನ್ನು ಸಕ್ರಮವಾಗಿ ನೆರವೇರಿಸುತ್ತೇನೆಂದೂ ವಿನಯಪೂರ್ವಕವಾಗಿ ಕಾಗದ ಬರೆದು ಹಿರಿಯನಾದ ಶ್ರೀಹರಿಯ ಕೈಯಲ್ಲಿ ಕಳುಹಿಸಿದರು.

ಅಳಿಯನ ಮುಡಿಪು ಸಾವಿರ ರೂಪಾಯಿ ತೆಗೆದಿಟ್ಟು ಮಿಕ್ಕ ಹಣದಲ್ಲಿ ಬೀಗರಿಗೆ ಮನೆಯವರಿಗೆ ಬಟ್ಟೆ ತೆಗೆದರು. ಸುಂದರಮ್ಮ ಹಬ್ಬ ಇನ್ನೂ ಎರಡು ದಿನ ಇದೆಯೆನ್ನುವಾಗಲೇ ಲಾಡು, ಕಾರಾಶೇವು, ಚಕ್ಕುಲಿ, ಬೇಸಿನ್‌ಲಾಡು ಮಾಡಿಟ್ಟರು. ಅಂತಹ ಬಿಡುವಿಲ್ಲದ ಸಮಯದಲ್ಲೂ ತಮ್ಮ ಮನೆಗೆ ಬೀಗರು ಬರುತ್ತಾರೆಂಬ ಸುದ್ದಿಯನ್ನು ನೆರೆಹೊರೆಯವರಿಗೆ ಹೇಳಿ ಬರಲು ಮರೆಯಲಿಲ್ಲ. ಸಾವಿರದೈನೂರು ರೂಪಾಯಿಯ ಸಾಲ ತಲೆಯಮೇಲೆ ಬಿದ್ದರೂ, ಜಾನಕಿಯ ಸಂಸಾರ ನೆಟ್ಟಗಾಗುತ್ತದೆಯಲ್ಲಾ ಎಂದಾಕೆ ಹರ್ಷಚಿತ್ತರಾಗಿದ್ದರು.

ಬೀಗರು ಬರುವ ದಿನ ಎರಡು ಜಟಕಾ ತೆಗೆಸಿಕೊಂಡು ಸ್ಟೇಷನ್ನಿಗೆ ಹೋದರು ರಮಣಯ್ಯನವರು. ಪ್ರಕಾಶ ಕೂಡಾ ಭಾವನನ್ನು ನೋಡುವ ಆತುರದಿಂದ ತಂದೆಯೊಂದಿಗೆ ಹೊರಟ.

ಸಂಧ್ಯಾದೀಪ ಹಚ್ಚುತ್ತಾ, "ದೇವರೇ ಈ ನಾಲ್ಕು ದಿನ ಪ್ರಶಾಂತವಾಗಿ ಕಳೆಯುವಂತೆ ಅನುಗ್ರಹಿಸು" ಎಂದು ಬೇಡಿಕೊಂಡರು, ಸುಂದರಮ್ಮ.

ತನ್ನ ತಂದೆ ಅವರು ಕೇಳಿದ ಸಾವಿರರೂಪಾಯಿ ಅಳಿಯನಿಗೆ ಲಂಚ ಕೊಟ್ಟು ಕರೆತರುತ್ತಿದ್ದಾರೆಂಬ ವಿಷಯ ಜಾನಕಿಗೆ ತಿಳಿಯದಂತೆ ರಹಸ್ಯವಾಗಿ ಇಟ್ಟಿದ್ದರು ಜಾನಕಿ ಅಭಿಮಾನದಿಂದ ಏನಾದರೂ ಅಂದುಬಿಡುವಳೇನೋ, ಬೀಗರು ಮತ್ತೆ ಕೋಪಿಸಿಕೊಳ್ಳುವರೇನೋ ಎಂದವರ ಭಯ.

ಮದುವೆಯ ದಿನ ರಾತ್ರಿ ತಾನು ರಾಜಾರಾಯನೊಂದಿಗೆ ಅಂದ ಮಾತ್ರ ಗಳನ್ನು ನೆನಪಿಗೆ ತಂದುಕೊಂಡು ವ್ಯಥೆಪಟ್ಟಳು, ಜಾನಕಿ. ಆತನ ಮನಸ್ಸೇ ನೆಂಬುದನ್ನರಿಯದೆ ತಾನು ಅಷ್ಟು ದೂರ ಮಾತನಾಡಬಾರದಾಗಿತ್ತು. ಅದರಲ್ಲೂ ಮುಖ್ಯವಾಗಿ 'ನಮ್ಮ ತಂದೆಗೇ ದುಡ್ಡಿದ್ದರೆ ನಿನಗಿಂತಹ ಉತ್ತಮ

ನನ್ನ ಮದುವೆಯಾಗುತ್ತಿದ್ದೆ' ಎಂದು ಅನ್ನಬಾರದಿತ್ತು. ಯಾವ ಗಂಡಸಿಗಾದರೂ ನೋವನ್ನುಂಟುಮಾಡುವ ಮಾತು ಅದು. ಆದರೆ....ತಾನಷ್ಟು ಪೌರುಷದಿಂದ ಮಾತನಾಡಿದ್ದರಿಂದಲೇ ಈ ದಿನ ವಿಷಯವನ್ನು ಕುರಿತು ಕೂಲಂಕುಷವಾಗಿ ಆಲೋಚಿಸುವ ಜ್ಞಾನ ಆತನಲ್ಲಿ ಹುಟ್ಟಿತೇನೋ! ಹಾಗಿದ್ದಲ್ಲಿ ನಡೆದದ್ದೆಲ್ಲಾ ಒಳ್ಳೆಯದಕ್ಕೇ ಎಂದುಕೊಳ್ಳಬಹುದು. ಎಂದು ತನ್ನನ್ನು ತಾನು ಸಮಾಧಾನಪಡಿಸಿಕೊಂಡಳು.

ಪುಟ್ಟ ನಾದಿನಿ ಶಾಂತ, ತನ್ನ ಹೊಸ ಲಂಗಾ, ಜಾಕೆಟ್ ತೊಟ್ಟು ಭಾವನಿಗೋಸ್ಕರ ಬೀದಿ ಬಾಗಿಲಲ್ಲಿಯೇ ಎದುರು ನೋಡುತ್ತಿದ್ದಳು. ಆ ದಿನ ಮನೆಯಲ್ಲಿ ಎಲ್ಲರ ಆಲೋಚನೆಗಳ ಕೇಂದ್ರವಾಗಿದ್ದ ಹೊಸ ಅಳಿಯ ಮಾತ್ರ ಇನ್ನೂ ಬಂದಿರಲಿಲ್ಲ. ಕತ್ತಲು ಬೆಳಕಿನ ಸ್ಥಾನವನ್ನು ಆಕ್ರಮಿಸುತ್ತಿದ್ದ ವೇಳೆಯಲ್ಲಿ ಮನೆಯ ಮುಂದೆ ನಿಂತ ಬಂಡಿಯಿಂದ ಮೆಲ್ಲನೆ ಇಳಿದ ಪ್ರಕಾಶ.

"ಭಾವ ಬಂದರೇನೋ" ಆತುರದಿಂದ ಪ್ರಶ್ನಿಸಿದಳು ಶಾಂತ.

"ಇಲ್ಲ" ಮೆಲ್ಲನೆ ಜವಾಬು ಹೇಳಿದ ಪ್ರಕಾಶ.

"ಅಪ್ಪ ಎಲ್ಲಿ?" ಪ್ರಕಾಶನ ಮಾತು ಕೇಳಿ ಮುಂಬಾಗಿಲಿಗೆ ಬಂದ ಜಾನಕಿ ಪ್ರಶ್ನಿಸಿದಳು.

"ಸಾಮಿಯೋರು ಗಾಡಿಯಲ್ಲವ್ರಮ್ಮ. ಚಿಕ್ಕಸಾಮಿಯೋರಿದ್ರೆ ಕರೀರಿ. ಇಳಿಸಾಕೆ ಸಾಯ ಬತ್ತಾರೆ. ಸ್ಟೇಷನ್ನಿನಾಗೆ ಸಾಮಿಯೋರು ತಲೆ ತಿರುಗಿ ಬಿದ್ದುಬಿಟ್ರು. ಈಗ ಕೊಂಚ ವಾಸಿ...."

ಗಾಡಿಯವನ ಮಾತು ಪೂರೈಸುವ ಮೊದಲೇ ಮನೆಯವರೆಲ್ಲಾ ಗಾಡಿಯ ಬಳಿ ಸೇರಿದ್ದರು.

ರಮಣಯ್ಯನವರು ಎಲ್ಲರ ಕಡೆಗೂ ಒಮ್ಮೆ ನೋಡಿದರು. ಜಾನಕಿಯ ಮೇಲೆ ಅವರ ದೃಷ್ಟಿ ಬಿದ್ದೊಡನೆ ಅವರ ಕಣ್ಣಿನಲ್ಲಿ ನೀರು ತುಂಬಿ ಬಂತು. ತೆಳ್ಳಗೆ, ಎತ್ತರವಾಗಿ, ಸೊಂಪಾದ ಲತೆಯಂತಿದ್ದಳು ಜಾನಕಿ. ಬಣ್ಣ ಒಂದು ಸುತ್ತು ಕಡಿಮೆಯಾದರೂ ಕಳೆ ತುಂಬಿದ ಮುಖ ಅವಳದು. ಪ್ರಪಂಚದಲ್ಲಿ ಏನನ್ನೋ ಅರಸಲೆಂಬಂತೆ ಚಂಚಲವಾದ ಹೊಳಪುಗಣ್ಣು. ಕಿರುನಗೆಯನ್ನು ಹಿಡಿದಿರಿಸಿದ ಕೆಂಪುತುಟಿ. ಸಂತೋಷದಲ್ಲೂ, ವಿಪತ್ತಿನಲ್ಲೂ ಒಂದೇ ಸಮನಾಗಿ ತಲೆಯೆತ್ತಿ ನಿಲ್ಲಬಲ್ಲ ದೃಢವಾದ-ಮಾಟವಾದ ಕೊರಳು. ಇದು ಜಾನಕಿಯ ರೂಪ.

ಆ ದಿನ ಶುಭ್ರವಾದ ಬಿಳಿಯ ಸೀರೆಯನ್ನುಟ್ಟಿದ್ದಳು. ಜಾನಕಿ ಸೀರೆಯ ಅಂಚಿನ ಬಣ್ಣದ ಜಾಕೆಟ್ ತೊಟ್ಟು, ಕನಕಾಂಬರ, ಮರುಗಮಾಲೆ ಕಟ್ಟಿ

ಮುಡಿದಿದ್ದಳು. ಅಭ್ಯಂಗನ ಮಾಡಿದ್ದರಿಂದ ಮುಂಗುರುಳು ಹಣೆಯಮೇಲೆ ನಾಟ್ಯವಾಡುತ್ತಿತ್ತು.

ರಮಣಯ್ಯನವರಿಗೆ ಆ ದಿನ ಮಗಳ ಮುಖ ಅಪರೂಪ ಸೌಂದರ್ಯ ದಿಂದ ವಿರಾಜಿಸುತ್ತಿರುವಂತೆ ಕಾಣಿಸಿತು. ಅಷ್ಟರಲ್ಲಿಯೇ ಮನಸ್ಸಿನಲ್ಲಿ ಮುಳ್ಳು ಚುಚ್ಚಿದಂತಾಯಿತು.

"ಮಗೂ ನಿನ್ನ ಬದುಕನ್ನು ನಾನೇ ಕೈಯಾರೆ ಹಾಳುಮಾಡಿದೆ ನಲ್ಲಮ್ಮಾ!" ಎಂದು ಕಣ್ಣೀರಿಟ್ಟರು

"ಹಾಗನ್ನಬೇಡಪ್ಪಾ. ಅವರ ಮೂರ್ಖತೆಗೆ ನೀನೇನು ಮಾಡುತ್ತಿ?" ಮೆಲುದನಿಯಲ್ಲಿ ನುಡಿದಳು ಜಾನಕಿ.

"ಅಷ್ಟು ಬೇಸರಪಟ್ಟುಕೋಬೇಡಿ ಅಪ್ಪಾ. ಈ ರೈಲು ತಪ್ಪಿತೇನೋ. ಬೆಳಿಗ್ಗೆ ಇನ್ನೊಂದು ರೈಲಿದೆ. ಅದರಲ್ಲಿ ಬರಬಹುದು" ಎಂದ ಶ್ರೀಹರಿ.

ತಂದೆಯ ಮನಸು ಸದ್ಯಕ್ಕಾದರೂ ಸ್ವಲ್ಪ ನೆಮ್ಮದಿಗೊಳ್ಳಲೆಂದು ಹಾಗೆ ಹೇಳಿದನೇ ಹೊರತು, ಅವರು ಬರುತ್ತಾರೆಂಬ ನಂಬಿಕೆ ಅವನಿಗೂ ಇರಲಿಲ್ಲ. ಆ ದಿನ ಕರೆಯಲು ಹೋದಾಗಲೇ ಅವರ ಮಾತಿನಲ್ಲೇನೋ ಮೋಸವಿದ್ದಂತೆ ತೋಚಿತ್ತು. ಹಣ ಖರ್ಚಾಗಲಿ, ನಾಲ್ಕು ಜನದಲ್ಲಿ ಅಪಹಾಸ್ಯಕ್ಕೀಡಾಗಲಿ ಎಂದು ಹೀಗೆ ಮಾಡಿರಬೇಕೆಂದುಕೊಂಡ.

ರಮಣಯ್ಯನವರನ್ನು ಮೆಲ್ಲನೆ ಎಬ್ಬಿಸಿ ಮನೆಯೊಳಕ್ಕೆ ಕರೆದುಕೊಂಡು ಹೋದರು. ಒಂದುಗಂಟೆಯ ಹಿಂದೆ ಸಂತೋಷ ಸಂಭ್ರಮಗಳಿಂದ ತುಂಬಿ ತುಳುಕಾಡುತ್ತಿದ್ದ ಮನೆ ಹಠಾತ್ತಾಗಿ ಬೆಳಕನ್ನು ಕಳೆದುಕೊಂಡಿತ್ತು. ಯಾರ ಮುಖದಲ್ಲಿಯೂ ಕಳೆಯಿರಲಿಲ್ಲ. ಎದುರು ನೋಡುತ್ತಿದ್ದ ಬೀಗರು ಬಾರದಿದ್ದುದೂ, ರಮಣಯ್ಯನವರು ಹಾಸಿಗೆ ಹಿಡಿದು ಮಲಗಿದ್ದೂ ಸುಂದರಮ್ಮ ನವರಿಗೆ ಹುಚ್ಚು ಹಿಡಿಸಿತ್ತು.

ಅತ್ತಿಗೆ ಬಡಿಸಿದ ಊಟಮಾಡಿ, ಶಾಂತ-ಪ್ರಕಾಶರು ಪುಸ್ತಕಗಳನ್ನು ಮುಂದೆ ಹಾಕಿಕೊಂಡು ಕುಳಿತರು. ಆ ರಾತ್ರಿ ದೊಡ್ಡವರು ಯಾರೂ ಅಡಿಗೆ ಮನೆಯ ಕಡೆ ಸುಳಿಯಲಿಲ್ಲ. ಮಾಡಿದ ಅಡಿಗೆ ಮುಚ್ಚಿಟ್ಟು ಎಲ್ಲರಿಗೂ ಕಾಫಿ ತಂದುಕೊಟ್ಟಳು ಕನಕ. ಅತ್ತಿಗೆಯ ಕೈಯಿಂದ ಕಾಫಿ ಗ್ಲಾಸನ್ನು ತೆಗೆದು ಕೊಂಡು ತಂದೆ ಮಲಗಿದ್ದ ಕೋಣೆಯೊಳಕ್ಕೆ ಹೋದಳು ಜಾನಕಿ. ರಮಣಯ್ಯ ನವರು ಗೋಡೆಯ ಕಡೆ ಮುಖ ತಿರುಗಿಸಿ ಮಲಗಿದ್ದರು.

"ಅಪ್ಪಾ, ಸ್ವಲ್ಪ ಕಾಫಿ ಕುಡಿಯೋರಂತೆ, ಈ ಕಡೆ ತಿರುಗಿ" ಎಂದಳು ತಂದೆಯ ಪಕ್ಕದಲ್ಲಿ ಕುಳಿತುಕೊಳ್ಳುತ್ತಾ ಜಾನಕಿ.

ತನ್ನ ಕಣ್ಣೀರನ್ನು ಮಗಳು ನೋಡದಂತೆ ಒರೆಸಿಕೊಳ್ಳುತ್ತಾ, ಬಹಳ ಕಷ್ಟದಿಂದ ಈ ಕಡೆ ತಿರುಗಿದರು ರಮಣಯ್ಯನವರು. ಒಂದೆರಡು ತೊಟ್ಟು ಕಣ್ಣೀರು ಇನ್ನೂ ಕೆನ್ನೆಯ ಮೇಲೆ ನಿಂತೇ ಇತ್ತು.

"ಏನಪ್ಪಾ ಇದು ನಿಮಗೇನಾದರೂ ಹುಚ್ಚೇ? ಈಗ ಏನಾಯಿತೆಂದು ಈ ಕಣ್ಣೀರು?" ಎಂದಳು ತನ್ನ ಸೀರೆಯ ಸೆರಗಿನಿಂದ ತಂದೆಯ ಕಣ್ಣೊರೆಸುತ್ತ.

"ಅವರು ಬರೀ ಮೂರ್ಖರಮ್ಮಾ. ಹಣಕ್ಕೋಸ್ಕರ ಎಂಥ ಪಾಪಕ್ಕೂ ಹೇಸೋರಲ್ಲ. ಅವರ ವಿಷಯಗಳೇನೂ ತಿಳಿಯದೆಯೇ ನನ್ನ ಮುದ್ದಿನ ಕಣಿ ಯನ್ನು ಅವರ ಕೈಯಲ್ಲಿಟ್ಟೆನಲ್ಲಮ್ಮಾ! ಅಷ್ಟೇ ಅಲ್ಲ....ಅವರು ಮೂರ್ಖ ರೂಂತ ತಿಳಿದೂ ಸಹ ಅವರಿಗಿಂತ ಮೂರ್ಖರಾಗಿ ಪ್ರವರ್ತಿಸಿದೆನಲ್ಲಮ್ಮಾ? ಎಲ್ಲಾ ವಿಧದಲ್ಲೂ ನಿನಗನ್ಯಾಯ ಮಾಡಿದ ಪಾಪಿಯಮ್ಮ ನಾನು" ಎಂದರು ಮಗಳ ತಲೆ ಸವರುತ್ತಾ ರಮಣಯ್ಯನವರು.

ಎಂದೂ ಇಲ್ಲದ್ದು ತಂದೆ ಇಷ್ಟು ನಿರಾಶೆಯಿಂದ ಏಕೆ ಮಾತನಾಡು ತ್ತಿದಾರೆಂದು ಜಾನಕಿಗೆ ಅರ್ಥವಾಗಲಿಲ್ಲ. ಎಂತಹ ಪರಿಸ್ಥಿತಿಯಲ್ಲಾದರೂ ಧೈರ್ಯವಾಗಿ ನಿಂತು 'ಮುಂದೇನು?' ಎಂದು ಆಲೋಚಿಸುವುದವರ ಸ್ವಭಾವ. ಬಹುಶಃ ಆರೋಗ್ಯ ಕೆಟ್ಟಿರುವುದರಿಂದಾಗಿ ಹಾಗೆ ಮಾತನಾಡುತ್ತಿದಾರೇನೋ ಎಂದಂದುಕೊಂಡಳು.

"ಹೋಗಲಿ ಬಿಡಪ್ಪಾ. ಅವರು ಕೇಳಿದಷ್ಟು ಹಣ ಕೊಟ್ಟು ನೀವು ನನ್ನನ್ನು ಅತ್ತೆಮನೆಗೆ ಕಳುಹಿಸಿದರೂ ಅಂಥವರ ಮನೆಯಲ್ಲಿ ನಾನೇನು ಸುಖ ಪಡಬಲ್ಲೆ? ನೀನು ಇದನ್ನು ಕುರಿತು ಇನ್ನೇನು ಆಲೋಚಿಸದೆ ನಿದ್ದೆ ಮಾಡಪ್ಪ ಬೆಳಗಾಗೋ ವೇಳೆಗೆ ಅವರೇ ಬರುತ್ತಾರೋ ಕಾಗದ ಬರುತ್ತೋ ನೋಡೋಣ. ಆಗ ಆಲೋಚಿಸೋಣ" ಎಂದು ತಂದೆಯನ್ನು ಸಮಾಧಾನ ಮಾಡಿ ಅಲ್ಲಿಂದ ಹೊರಟುಹೋದಳು.

* * *

ದಿನಗಳು ವಾರಗಳಾಗಿ, ವಾರಗಳು ತಿಂಗಳುಗಳಾಗಿ ಮಾರ್ಪಡುತ್ತಿದ್ದರೂ ಜಾನಕಿಯ ಅತ್ತೆಯಮನೆಯವರ ಅಭಿಪ್ರಾಯವೇನೆಂಬುದು ತಿಳಿಯಲೇ ಇಲ್ಲ. ರಮಣಯ್ಯನವರ ಆರೋಗ್ಯವೂ ಸರಿಯಾಗಲಿಲ್ಲ. ಅಳಿಯನನ್ನು ಸಂತೋಷ ಪಡಿಸಲೆಂದು ಸಾಲ ತಂದ ಹಣ ಮಾವನ ಔಷಧಿಗಳಿಗೆ ಖರ್ಚಾಗತೊಡಗಿತ್ತು ತನಗೆ ತಿಳಿದ ಡಾಕ್ಟರನ್ನು ಕರೆತಂದು ತೋರಿಸಿದ ಶ್ರೀಹರಿ. ಆತ ಔಷಧಿ ಬದಲಾಯಿಸಿ ಕೊಡುತ್ತಲೇ ಇದ್ದರು. ಆದರೆ ಗುಣಮಾತ್ರ ಕಾಣಬೇ ಇಲ್ಲ.

"ಇದು ಮನೋವ್ಯಾಧಿ, ಇದಕ್ಕೆಲ್ಲಿಯ ಮದ್ದು?" ಎಂದರು ಕೆಲವರು.

"ಏಕೆ? ಏನು?" ಎಂದು ಕೇಳತೊಡಗಿದರು, ಬಂದವರೆಲ್ಲಾ.

"ಬೀಗರನ್ನು ಎದುರುಗೊಳ್ಳಲು ಸ್ಟೇಷನ್ನಿಗೆ ಹೋದವರು ಅಲ್ಲಿಯೇ ತಲೆ ತಿರುಗಿ ಬಿದ್ದರು. ಆಗಿನಿಂದ ಹೀಗೇ ಇದೆ. ಎದ್ದರೆ ತಲೆ ತಿರುಗುತ್ತೆ. ಏನು ತಿಂದರೂ ದಕ್ಕುವುದಿಲ್ಲ. ದಿನದಿನಕ್ಕೆ ಕೃಶವಾಗುತ್ತಿದಾರೆ. ಕಾಯಿಲೆ ಏನೆಂದು ಯಾರಿಂದಲೂ ಹೇಳಲಾಗುತ್ತಿಲ್ಲ. ಇದೆಲ್ಲಾ ನಮ್ಮ ಕರ್ಮ. ಮುಖ್ಯ ನಮ್ಮ ಗ್ರಹಚಾರ ಚೆನ್ನಾಗಿಲ್ಲ. ಅತ್ತೆಯ ಮನೆಯಲ್ಲಿ ಸುಖವಾಗಿ ಸಂಸಾರ ಮಾಡಿಕೊಂಡಿರಬೇಕಾದ ಹುಡುಗಿ ಎದೆಯ ಮೇಲಿನ ಬೆಂಕಿಯಂತಾಗಿದಾಳೆ. ಇವರು ನೋಡಿದರೆ ಹೀಗೆ ಮಲಗಿಬಿಟ್ಟಿದ್ದಾರೆ. ನನಗೆ ಕೈಕಾಲೇ ಆಡುತ್ತಿಲ್ಲ" ಎಂದು ಕಣ್ಣೀರಿಡುತ್ತಿದ್ದರು ಸುಂದರಮ್ಮ.

ಹೀಗೆಯೇ ಒಂದು ವರ್ಷ ಕಳೆದು ಹೋಗಿತ್ತು. ರಮಣಯ್ಯನವರ ಪರಿಸ್ಥಿತಿಯಲ್ಲಿ ಬದಲಾವಣೆಯೇನೂ ಬಾರದಿದ್ದರೂ ಮನೆಯಲ್ಲಿನ ಆರ್ಥಿಕ ಪರಿಸ್ಥಿತಿ ಮಾತ್ರ ತಲೆಕೆಳಗಾಗಿತ್ತು. ಶ್ರೀಹರಿಯ ಸಂಬಳ ಸೂರಿಪ್ಪತ್ತು ರೂಪಾಯಿ ಮಾತ್ರ ಆ ಕುಟುಂಬ ನಿರ್ವಹಣೆಗೆ ಆಧಾರವಾಗಿತ್ತು. ಸಂಸಾರ ನಿರ್ವಹಣೆ, ಮಕ್ಕಳ ಓದು ಎಲ್ಲಾ ಅದರಲ್ಲಿಯೇ ಆಗಬೇಕಾಗಿತ್ತು. ತಂದೆಯ ಸಲಹೆಯ ಮೇರೆಗೆ ಜಾನಕಿ ಟೈಪು ಷಾರ್ಟ್‌ಹ್ಯಾಂಡ್ ಪರೀಕ್ಷೆಗೆ ಕಟ್ಟಿದಳು. "ಈ ಪರೀಕ್ಷೆ ಪಾಸಾಗಿ, ಯಾವುದಾದರೂ ಕೆಲಸ ಸಿಕ್ಕಿದರೆ ನಿಮ್ಮಣ್ಣನಿಗೆ ಸ್ವಲ್ಪ ಸಹಾಯವಾಗಿರುತ್ತೀಯಮ್ಮ" ಎಂದರು ತಂದೆ.

ರಮಣಯ್ಯನವರು ಹಾಸಿಗೆ ಹಿಡಿದನಂತರ ಅವರು ಕಾಯಿಲೆ ಮಲಗಿರುವ ವಿಷಯವನ್ನೂ, ಮನೆಯ ಪರಿಸ್ಥಿತಿಯನ್ನೂ ಕುರಿತು ಬೀಗರಿಗೆ ನಾಲ್ಕೈದು ಕಾಗದ ಹೋಗಿತ್ತು. ಒಂದು ಕಾಗದಕ್ಕೂ ಜವಾಬು ಬಂದಿರಲಿಲ್ಲ. ಶರೀರದ ರುಗ್ಣತೆಯೊಂದಿಗೆ ಮನೋವ್ಯಾಧಿಯೂ ಸೇರಿ ದಿನದಿನಕ್ಕೂ ಅವರ ಆರೋಗ್ಯ ಕ್ಷೀಣಿಸಲಾರಂಭಿಸಿತ್ತು. ಬಾಯಿಂದ ಮಾತು ಹೊರಡುವುದೇ ಕಷ್ಟವಾಗಿದ್ದರೂ ಜಾನಕಿಯನ್ನು ನೋಡಿದೊಡನೆಯೇ 'ನಿನಗನ್ಯಾಯ ಮಾಡಿದೆನಮ್ಮಾ, ಕ್ಷಮಿಸು' ಎಂದು ಗೋಣಗಿಕೊಳ್ಳುತ್ತಿದ್ದರು.

"ಹಾಗನ್ನಬೇಡಿ ಅಪ್ಪಾ. ನೀವು ನನಗೆ ಒಳಿತನ್ನೇ ಮಾಡಿದಿರಿ. ಅವರು ಕೇಳಿದಷ್ಟು ಕೊಟ್ಟು ನನ್ನನ್ನು ಸಾಗಹಾಕಿದ್ದರೆ ಮಾನವತೆ ಲೋಪಿಸಿದ ಆ ಮನುಷ್ಯರ ಮಧ್ಯೆ ನಾನು ಉಸಿರುಕಟ್ಟಿ ಸಾಯುತ್ತಿದ್ದೆ. ಹೀಗಾಗಿದ್ದೂ ನನ್ನ ಒಳ್ಳೇದಕ್ಕೇ ಅಪ್ಪಾ" ಎಂದು ತಂದೆಯನ್ನು ಸಮಾಧಾನಪಡಿಸುತ್ತಿದ್ದಳು ಜಾನಕಿ.

ತಾಯಿಯನ್ನೂ, ನಾಲ್ಕು ಜನ ಒಡಹುಟ್ಟಿದವರನ್ನೂ, ಎರಡು ಸಾವಿರ ಸಾಲದಿಂದ ಕುಗ್ಗಿದ ಮನೆಯನ್ನೂ ಶ್ರೀಹರಿಗೆ ಒಪ್ಪಿಸಿ ಒಂದು ದಿನ ರಾತ್ರಿ ಕಣ್ಣು ಮುಚ್ಚಿದರು ರಮಣಯ್ಯನವರು. ಕೊನೆಯಸಲ ಕಣ್ಣು ಮುಚ್ಚು ವವರೆಗೂ ಅವರ ಕರುಣಾಪೂರಿತ ದೃಷ್ಟಿ ಜಾನಕಿಯ ಮೇಲೆಯೇ ಇತ್ತು. 'ನನಗಾಗಿ ನೀವು ಕೊರಗಬೇಡಿ. ನನಗೆ ನೀವೇನೂ ಅನ್ಯಾಯ ಮಾಡಲಿಲ್ಲ' ಎಂದು ಜಾನಕಿ ತನ್ನ ನೋಟದಿಂದಲೇ ವ್ಯಕ್ತಪಡಿಸುತ್ತಿದ್ದಳು. ಎಲ್ಲಾ ಚಿಂತೆ ಗಳಿಂದಲೂ ವಿಮುಕ್ತರಾಗಿ ಆತ ಹೊರಟುಹೋದಮೇಲೆ ತಂದೆಯ ಮನಸ್ಸನ್ನು ತೀವ್ರವಾಗಿ ಗಾಯಪಡಿಸಿದ ಕಾರಣವನ್ನು ನೆನೆನೆನೆದು ಶೋಕಿಸತೊಡಗಿದಳು ಜಾನಕಿ.

* * *

ನೆರೆಹೊರೆಯ ಮನೆಗಳಲ್ಲಿ ದೀಪ ಬೆಳಗುತ್ತಿತ್ತು. ನೆಲ ಇನ್ನೂ ತಣ್ಣ ಗಾಗಿರಲಿಲ್ಲ. ಬಿಸಿಲಿನ ಬೇಗೆಗೆ ಕಾದ ಗೋಡೆ, ನೆಲಗಳಿಂದ ಹಬೆ ಹೊರ ಹೊಮ್ಮುತ್ತಿತ್ತು. ದಕ್ಷಿಣದಿಂದ ಬೀಸಿ ಬರುತ್ತಿದ್ದ ಗಾಳಿ ಸಹ ಕಾವಿನಿಂದಲೇ ಕೂಡಿತ್ತು.

"ಇಂಥಾ ಬಿಸಿಲನ್ನ ಹುಟ್ಟಿದಾಗಿನಿಂದ ಕಾಣೆವು" ಎಂದರು ವೃದ್ಧರು. ವರಸೆಯಾಗಿ ನಾಲ್ಕು ಬೇಸಗೆಗಳಲ್ಲಿ ಅದರ ದರ್ಶನ ಮಾಡಿದ್ದರೂ ಪ್ರತಿ ವರ್ಷವೂ ಅದೇ ಮಾತಾಡುತ್ತಿದ್ದರು. ಬೆಳಗಾದರೆ ಬರೀ ಹೊಟ್ಟೆ ಅಂದಂತೆ. ಸದಾ ಹೊಸದೇ ಈ ಮಾತು.

ದಿನಾ ಮಾಡುವ ಕೆಲಸಗಳಿಗೇ ಹೊಸ ಆಚ್ಛಾದನೆ ಹೊದಿಸುತ್ತಾ ಹೊಸ ಅನುಭವಗಳನ್ನು ಆಘ್ರಾಣಿಸುತ್ತಾ ಆನಂದಿಸುವುದೇ ಬದುಕು. ಹತ್ತು ತಿಂಗಳ ವಯಸಿನಿಂದ ಉಣ್ಣುತ್ತಿದ್ದರೂ, ಆಹಾರಕ್ಕೋಸ್ಕರ ಮನುಷ್ಯ ಹಗಲೂ ರಾತ್ರಿ ಕಷ್ಟಪಡುತ್ತಲೇ ಇರುತ್ತಾನೆ. ಬೇಸರವಿಲ್ಲದೆ ಆ ಹೊತ್ತಿಗಾಗಿ ಎದುರು ನೋಡು ತ್ತಲೂ ಇರುತ್ತಾನೆ. ಇದಕ್ಕೆ ಮಾನವನಲ್ಲಿರುವ ಹಳತಿನಲ್ಲಿರುವ ಹೊಸತನ್ನು ಊಹಿಸಿ ಆನಂದಿಸುವ ಮನಸ್ತತ್ವವೇ ಕಾರಣ. ಈ ದಿನ ನಿನ್ನೆಗಿಂತಾ ಭಿನ್ನ ವಾಗಿರುವುದೆಂದು ಆಶಿಸಿ ಎದುರು ನೋಡುವ ಸಹನೆ ಮಾನವನಿಗಿಲ್ಲದೆ ಹೋಗಿ ದ್ದರೆ ನಮ್ಮ ದೇಶದ ಜನಗಣನೆಯ ಲೆಕ್ಕಗಳಲ್ಲಿ ಅಂಕೆಗಳ ಸ್ಥಾನ ಬಹಳ ಮಟ್ಟಿಗೆ ಇಳಿಯುತ್ತಿದ್ದುವೆಂಬುದರಲ್ಲಿ ಸಂದೇಹವೇ ಇಲ್ಲ.

ಆ ವಿಧವಾದ ಆಸೆಯಿಂದಲೇ ಬೀಗರ ಮನೆಗೆ ಹೋಗಿದ್ದ ಮಗನ ಬರವಿ ಗೋಸ್ಕರ ಎದುರು ನೋಡುತ್ತಿದ್ದರು ಸುಂದರಮ್ಮ. ಗಂಡನನ್ನು ಕಳೆದು

ಕೊಂಡ ಆಕೆಗೆ ಮಕ್ಕಳೇ ಆಧಾರ. ಅವರೆಲ್ಲಾ ಮಕ್ಕಳು ಮರಿಯೊಂದಿಗೆ ಸುಖ ವಾಗಿರಬೇಕೆಂಬುದೇ ಅವರ ಆಕಾಂಕ್ಷೆ.

ಆಸೆಯಿಂದಲೇ ಚಿಂತೆ ಉದ್ಭವಿಸುತ್ತದೆ. ನೆರವೇರದ ಕೋರಿಕೆಗಳೇ ಚಿಂತೆಗೆ ಕಾರಣವಾಗುತ್ತವೆ. ಮನುಷ್ಯ ಇದಕ್ಕೆ ವಶವಾದನೆಂದರೆ ಬಾಳಿನಾದ್ಯಂತ ವ್ಯಥೆಯನ್ನು ಮೂಟೆ ಕಟ್ಟಿಕೊಂಡಂತೆಯೇ. ಆ ಆಸೆ ನೆರವೇರಿದರೆ ಸರಿ ಎಂದುಕೊಳ್ಳುವುದರಲ್ಲಿಯೂ ಅರ್ಥವಿಲ್ಲ. ಸಮುದ್ರದಲ್ಲಿಯ ಅಲೆಗಳಂತೆ ಒಂದು ತೀರಿದರೆ ಅದರ ಸ್ಥಾನವನ್ನು ಮತ್ತೊಂದು ಆಕ್ರಮಿಸುತ್ತಿತ್ತು.

ಈಗ ಸುಂದರಮ್ಮನವರ ಸದ್ಯದ ಕೋರಿಕೆ ಜಾನಕಿಯನ್ನು ಸುಲಕ್ಷಣವಾಗಿ ಅತ್ತೆಯ ಮನೆಗೆ ಕಳುಹಿಸಬೇಕೆನ್ನುವುದೊಂದೇ. ಇದು ತೀರುವವರೆಗೂ ಮತ್ತೊಂದು ಕೋರಿಕೆಗೆ ಆಕೆಯ ಮನಸಿನಲ್ಲಿ ಸ್ಥಾನವಿಲ್ಲದಷ್ಟು ದೊಡ್ಡದಾಗಿ ಆಕ್ರಮಿಸಿಕೊಂಡಿತ್ತು—ಆ ಜವಾಬ್ದಾರಿ.

ಮುಂಬಾಗಿಲಲ್ಲಿ ಕುಳಿತು ದೀಪಕ್ಕೆ ಎಣ್ಣೆ ಹಾಕುತ್ತಿದ್ದ ಜಾನಕಿ ಸಹ ಅಣ್ಣನಿಗೋಸ್ಕರವೇ ಎದುರುನೋಡುತ್ತಿದ್ದಳು. ಎರಡುಮೂರು ವರ್ಷಗಳಿಂದ ಉಯ್ಯಾಲೆಯಾಡುತ್ತಿದ್ದ ಈ ಸಮಸ್ಯೆ ಇಂದಿಗೆ ತೀರಿಹೋಗಬೇಕೆಂದು ಅವಳು ಆಶಿಸುತ್ತಿದ್ದಳು. ಆತ ತನ್ನ ಕೊರಳಿನಲ್ಲಿ ತಾಳಿ ಕಟ್ಟುತ್ತಿದ್ದಾಗ ತನ್ನ ಬದುಕು ಈ ರೀತಿಯ ಅವಮಾನ, ಪರಿಹಾಸಗಳಿಗೆ ಗುರಿಯಾಗಬಹುದೆಂದು ಅವಳು ಎಣಿಸಿರಲಿಲ್ಲ. ಮದುವೆಯಾಗಿ ಅತ್ತೆಯ ಮನೆಯಲ್ಲಿ ಕಾಲಿಟ್ಟ ಎಷ್ಟೋ ಮಂದಿ ಹೆಣ್ಣುಮಕ್ಕಳಲ್ಲಿ ತಾನೂ ಒಬ್ಬಳಾಗಿ ಕಾಲ ಕಳೆದು ಹೋಗುತ್ತದೆಯೆಂದು ಅವಳು ಭಾವಿಸಿದ್ದಳು. ಅದಕ್ಕಿಂತ ಹೆಚ್ಚಾಗಿ ಬದುಕಿನಲ್ಲಿ ಪ್ರತ್ಯೇಕತೆಯನ್ನು ಆಶಿಸುವ ಅವಕಾಶವಾಗಲೀ, ಆಶೆಯಾಗಲೀ ಅವಳಿಗೆ ಆಗ ಇರಲಿಲ್ಲ.

ಆದರೆ ಅವಳ ದುರದೃಷ್ಟದಿಂದಾಗಿ ಕೊರಳಲ್ಲಿ ತಾಳಿ ಬೀಳುತ್ತಿದ್ದಂತೆಯೇ ಅವಳ ವೈವಾಹಿಕಜೀವನ ಸಿಕ್ಕುಸಿಕ್ಕಾದ ದಾರದಂತಾಗಿತ್ತು. ಆ ಸಿಕ್ಕು ದಿನ ದಿನಕ್ಕೆ ಬಿಡಿಸಲಾರದಂತಾಗಿ ಕುಳಿತಿತ್ತು. ಆ ಕಗ್ಗಂಟು ಬಿಡಿಸಲಾಗುವುದೋ ಇಲ್ಲ ಹಾಗೆಯೇ ಕುಳಿತುಬಿಡುವುದೋ ಎಂಬುದನ್ನು ನಿರ್ಧರಿಸುವ ದಿನ ಅದು ಎಂಬಂತೆ ಜಾನಕಿ ಅಣ್ಣನಿಗೋಸ್ಕರ ಕಾಯುತ್ತಿದ್ದಳು.

ಮನೆಯ ತುಂಬಾ ಕತ್ತಲು ಆವರಿಸುತ್ತಿದ್ದರೂ ಜಾನಕಿ ದೀಪ ಹಚ್ಚಿರಲಿಲ್ಲ. "ದೀಪ ಹಚ್ಚದೆ ಕತ್ತಲಲ್ಲಿ ಏನು ಮಾಡುತ್ತಿದೀಯ?" ಎಂದು ಮಗಳನ್ನು ಪ್ರಶ್ನಿಸಿದರು ಸುಂದರಮ್ಮ.

"ಲಾಂತರು ಒರೆಸುತ್ತಿದೇನಮ್ಮಾ. ಈ ರೇಷನ್ ಎಣ್ಣೆ ಎಂಥದೋ ಕಾಣೆ. ಬತ್ತಿ ಕಪ್ಪುಕಟ್ಟಿ ಚಿಮಣಿಯೆಲ್ಲಾ ಮಸಿಕಟ್ಟುತ್ತಿದೆ. ಎಷ್ಟು ಒರೆಸಿದರೂ

ಬೆಳ್ಳಗಾಗುತ್ತಿಲ್ಲ" ಎಂದಳು ಜಾನಕಿ ಬೆಂಕಿಪೊಟ್ಟಣ ಕೈಗೆ ತೆಗೆದುಕೊಳ್ಳುತ್ತ.

"ಅರ್ಧ ಗಂಟೆಯಿಂದ ಅಲ್ಲಿ ಕುಳಿತಿದೀಯಲ್ಲಾ. ಇನ್ನೂ ಚಿಮಣಿ ಒರೆಸಿದ್ದಾಗಲಿಲ್ಲವೇ? ಸಂಜೆ ಬೇಗ ದೀಪ ಹಚ್ಚಿಡಬೇಕು ಅನ್ನೋ ಜ್ಞಾನಾನೂ ಇರೊಲ್ಲ—ಈಗಿನ ಕಾಲದವರಿಗೆ" ಎಂದರು ಸುಂದರಮ್ಮ ಬೇಸರದಿಂದ.

"ಹೋಗಲಿ ಬಿಡಮ್ಮಾ. ಈಗೇನು ಮುಳುಗಿ ಹೋಗಿದ್ದು, ಎಷ್ಟು ನಿಧಾನವಾಗಿ ಹಚ್ಚಿದರೆ ಅಷ್ಟು ಎಣ್ಣೆ ಉಳಿದಂತೆಯೇ ತಾನೆ?" ಎಂದಳು ಜಾನಕಿ ನಗುತ್ತಾ.

"ಆಹಾಹಾ, ಒಳ್ಳೆ ಮಾತಾಡ್ತಿ ಕಣೆ. ನಮ್ಮ ಬುದ್ಧಿ ಹೀಗೆ ವಕ್ರವಾಗಿ ರೋದರಿಂದಲೇ ಶನಿದೇವತೆ ನಮ್ಮ ನೆತ್ತಿಯ ಮೇಲೆ ಪೀಠ ಹಾಕಿದಾಳೆ. ಇನ್ನು ನಮ್ಮ ಅದೃಷ್ಟಕ್ಕೆ ಎಣೆಯೇ ಇಲ್ಲ. ನಾನು ಹೇಳ್ತಿದೀನಿ ನೋಡು. ಅವನು ಜೋಲುಮೋರೆ ಹಾಕಿಕೊಂಡು ಬರ್ತಾನೆ."

'ಅದೃಷ್ಟಕ್ಕೆ ನಮ್ಮ ಮೇಲೇಕನ್ನಾ ದ್ವೇಷ? ಒಂದು ವಿಧದಲ್ಲಿ ಅಲ್ಲ ದಿದ್ದರೆ ಮತ್ತೊಂದು ವಿಧದಲ್ಲಿ ನಮ್ಮನ್ನು ವರಿಸುತ್ತದೆ' ಎಂದು ಹೇಳಬೇಕೆಂದು ಕೊಂಡಳು ಜಾನಕಿ. ತನಗೆ ಬಾಲವಿಹಾರದಲ್ಲಿ ಕೆಲಸ ಸಿಕ್ಕಿರುವ ವಿಷಯವನ್ನು ಹೇಳಬೇಕೆನಿಸಿತ್ತು ಅವಳಿಗೆ. ಆದರೆ ಆ ದಿನ ಅಣ್ಣ ತರುವ ಸಮಾಚಾರದ ಮೇಲೆ ತಾನು ಕೆಲಸ ಮಾಡುವುದೂ, ಬಿಡುವುದೂ ಆಧಾರಪಟ್ಟಿದೆಯಾದುದ ರಿಂದ ಕಾದು ನೋಡೋಣವೆಂದು ಸುಮ್ಮನಾದಳು.

ಜಾನಕಿ ಹಚ್ಚಿಕೊಟ್ಟ ದೀಪ ತೆಗೆದುಕೊಂಡು ಸುಂದರಮ್ಮ ಅಡಿಗೆಮನೆ ಯೊಳಕ್ಕೆ ಕಾಲಿಡುತ್ತಿದ್ದಂತೆಯೇ ಬೀದಿಯ ಬಾಗಿಲಿನಿಂದ ಶ್ರೀಹರಿ ಮನೆ ಯೊಳಕ್ಕೆ ಕಾಲಿರಿಸಿದ. ಸುಂದರಮ್ಮ ಕೈಲಿದ್ದ ದೀಪ ಅಲ್ಲಿಯೇ ಇರಿಸಿ ಬೇಗ ಬೇಗ ಮುಂದೆ ಬಂದರು. "ಏನಾಯಿತೋ ಮಗೂ, ಹಣ್ಣೋ ಕಾಯೋ?" ಎಂದರು ಆತುರದಿಂದ.

ಶ್ರೀಹರಿ ತಾಯಿಯ ಕಡೆಗೊಮ್ಮೆ, ತಂಗಿಯ ಕಡೆಗೊಮ್ಮೆ ನಿಸ್ಸಹಾಯ ದೃಷ್ಟಿ ಬೀರಿ, "ಶನಿ ನಮ್ಮ ತಲೆಯ ಮೇಲೆ ಕುಳಿತಿರುವಾಗ ಹೋದ ಕೆಲಸ ಹಣ್ಣಾಗುವುದೂ ಉಂಟೇನಮ್ಮಾ, ಕಾಯೇ" ಎಂದ.

"ಏನಂದರೋ ಮತ್ತೆ." ಸುಂದರಮ್ಮ ದೈನ್ಯದಿಂದ ಪ್ರಶ್ನಿಸಿದರು.

"ಏನಂತಾರೆ? ನಮ್ಮ ಸಂಬಂಧ ಬೇಡವಂತೆ ಅವರಿಗೆ. ನಮ್ಮ ಹುಡುಗಿ ಯೊಂದಿಗೆ ಸಂಸಾರ ಮಾಡುವುದಕ್ಕಿಂತ ಬ್ರಹ್ಮಚಾರಿಯಾಗಿರೋದೇ ಒಳ್ಳೇ ದಂತೆ ಆತನಿಗೆ."

"ನಾವೇನು ವಿಷ ಹಾಕಿದೆವೇ ಅವರಿಗೆ? ಕಾಲುತೊಳೆದು ಹುಡುಗೀನ

ಕೊಟ್ಟಿದ್ದೇ ತಪ್ಪಾಯಿತೇ?"

ಶ್ರೀಹರಿ ತಾಯಿಯ ಮಾತಿಗೆ ಉತ್ತರ ಹೇಳಲಿಲ್ಲ. ಒಂದು ಕ್ಷಣ ಜಾನಕಿಯ ಕಡೆ ರೆಪ್ಪೆಹಾಕದೆ ನೋಡಿ, "ಮದುವೆಯ ದಿನ ರಾತ್ರಿ ನೀನು ಸ್ಟೇಷನ್ನಿಗೆ ಹೋಗಿದ್ದೆಯಾ?" ಎಂದು ಪ್ರಶ್ನಿಸಿದ.

"ಅತ ಹೇಳಿದರೆ?" ಜಾನಕಿ ಮೆಲುದನಿಯಲ್ಲಿ ನಿಧಾನವಾಗಿ ಕೇಳಿದಳು.

"ಯಾರೋ ಒಬ್ಬರು ಹೇಳಿದರು. ಏಕೆ ಹೋಗಿದ್ದೆ?"

"ಆತನ ತಲೆಯಲ್ಲಿ ಬರೀ ಮಣ್ಣು ತುಂಬಿದೆಯೋ, ಇಲ್ಲಾ ಇನ್ನೇನಾದರೂ ಇದೆಯೋ ನೋಡಿ ಬರೋಣಾಂತ ಹೋಗಿದ್ದೆ."

"ಜಾನಕಿ, ಎಂಥ ಮಾತಾಡ್ತೀಯೇ?" ಸುಂದರಮ್ಮ ಗದರಿಸಿದರು.

"ಹೌದಮ್ಮಾ, ಈ ಮಾತು ಕೇಳೋಣಾಂತಲೇ ಹೋಗಿದ್ದು, ಅವರ ತಂದೆ ಹೇಳಿದ್ದಕ್ಕೆಲ್ಲಾ ಮೂಗಬಸವನಂತೆ ತಲೆ ಅಲ್ಲಾಡಿಸೋದೊಂದೇ ಗೊತ್ತೋ ಅಥವಾ ಸ್ವತಹ ಆಲೋಚಿಸುವ ಶಕ್ತಿ ಏನಾದರೂ ಇದೆಯೋ ಕೇಳೋಣಾಂತ ಹೋದೆ. ಈ ವಿಷಯದಲ್ಲಿ ಏನಾದರೂ ನಿರ್ಣಯ ಮಾಡುವ ಮುನ್ನ ಸ್ವಲ್ಪ ಆಲೋಚಿಸಿ ಮಾಡಿ, ಅಂತ ಹೇಳಿಬಂದೆ. ತಪ್ಪೇನು?"

"ತಪ್ಪೇ ಎಂದು ಮೆಲ್ಲಗೆ ಕೇಳ್ತೀಯಾ? ಅದಕ್ಕೆ ಅವರು ಇಲ್ಲದ್ದು ಸಲ್ಲದ್ದು ಸೇರಿಸಿ ನಿನ್ನ ತಂಗಿ ಕುಲಟೆ ಎಂದರು. ಅಂತಹ ಹುಡುಗಿ ನಮ್ಮ ಮನೆಯಲ್ಲಿದ್ದರೆ ನಮ್ಮ ವಂಶಕ್ಕೇ ಅಪ್ರತಿಷ್ಟೆ ಅಂದರು. ಅವಳಿಗೆ ರಾತ್ರಿ ಅಲೆದಾಟ ಅಭ್ಯಾಸವೇನೋ ಆ ದಿನ ನಮ್ಮ ಹುಡುಗ ಕಣ್ಣಿಗೆ ಬಿದ್ದ. ಕತ್ತಲೆಯಲ್ಲಿ ಗುರ್ತು ಸಿಗಲಿಲ್ಲಾಂತ ಕಾಣುತ್ತೆ. ಸಿಕ್ಕ ಮೇಲೆ ವಿಧಿಯಿಲ್ಲದೆ ನೀತಿ ವಾಕ್ಯಗಳನ್ನ ಹೇಳಿ ಹೊರಬಿದ್ದಿದಾಳೆ ಅಂದರು. ಇನ್ನು ನಾನು ಬಾಯಿಂದ ಹೇಳಲಾರದ್ದು, ನೀವು ಕೇಳಲಾರದ್ದು ಎಷ್ಟೋ...." ಅವಮಾನದಿಂದ ತಲೆ ತಗ್ಗಿಸಿದ ಶ್ರೀಹರಿ.

ಸುಂದರಮ್ಮ ಯಾವ ಭಾವನೆಯನ್ನೂ ವ್ಯಕ್ತಗೊಳಿಸದೆ ಮೌನವಾಗಿ ನಿಂತ ಮಗಳ ಕಡೆ ನೋಡಿದರು "ಗಂಡ ಬಿಟ್ಟು ತನ್ನ ಬಾಳು ಹಾಳಾಯಿತಲ್ಲಾ ಎಂಬ ದುಃಖ ಇಲ್ಲವೇ ಇವಳಿಗೆ? ಅಳಲೊಲ್ಲಳೇಕೆ? ಈ ಕಾಲದ ಹುಡುಗರ ಅಹಂಕಾರ ಇವರನ್ನು ಏನು ಮಾಡುತ್ತದೆಯೋ ದೇವರೇ?" ಎಂದು ಹಲುಬಿದರು.

ಅಕಸ್ಮಾತ್ತಾಗಿ ಶ್ರೀಹರಿ ತಂಗಿಯ ಭುಜ ಹಿಡಿದು ಅಲುಗಿಸುತ್ತಾ, "ಜಾನಕಿ, ನಿನ್ನ ಬಾಳು ಹಸನಾಗಲು, ನನ್ನ ಮರ್ಯಾದೆ ಉಳಿಯಲು ಒಂದು ಕೆಲಸ ಮಾಡಬಲ್ಲೆಯಾ?" ಎಂದ.

"ಏನದು?" ನಿರ್ಲಿಪ್ತಳಾಗಿ ಕೇಳಿದಳು ಜಾನಕಿ.

"ನಾನು ನಿಮ್ಮ ಅತ್ತೆಮನೆಯನ್ನು ಬಿಟ್ಟು ಬರುತ್ತಿದ್ದಾಗ ಆ ಬೀದಿಯ ಕೊನೆಯಲ್ಲಿ ನಿಮ್ಮ ಚಿಕ್ಕತ್ತೆಯ ಸೊಸೆ ಕಾಣಿಸಿದಳು. ವಿಷಯ ಕೇಳಿ ತಿಳಿದು ಕೊಂಡು ತುಂಬಾ ವ್ಯಥೆಪಟ್ಟಳು. ನಿನ್ನ ಸಂಸಾರ ನಿಲ್ಲಲು ಒಂದು ಸಲಹೆ ಹೇಳಿ ದಳು. ಆಲೋಚಿಸಿ ನೋಡಿದರೆ ಹಾಗೆ ಮಾಡುವುದು ಒಳ್ಳೆಯದೆಂದೇ ನನಗೂ ಅನ್ನಿಸುತ್ತಿದೆ."

"ಏನದು?"

"ನಿನ್ನನ್ನು ಕರೆದುಕೊಂಡು ಹೋಗಿ ಅವರ ಮನೆಯಲ್ಲಿ ಬಿಡುವುದು. ನಾಲ್ಕು ದಿನ ಮನಸ್ಸು, ಮೈ ನಿನ್ನದಲ್ಲಾ ಅಂದುಕೊಂಡರೆ ಅನಂತರ ಎಲ್ಲಾ ಸರಿಹೋಗುತ್ತದೆಯಂತೆ. ಆಕೆಯ ಸಂಸಾರಾನೂ ಹಾಗೆಯೇ ಸರಿಹೋಯಿ ತಂತೆ. ಮೇಲಕ್ಕೆ ಹಠಮಾರಿಗಳ ಹಾಗೆ ಕಂಡರೂ, ಜನ ಒಳ್ಳೇವರೇ ಕಠಿಣರಲ್ಲ ಎಂದಳಾಕೆ."

"ಛೀ!" ಜಿಗುಪ್ಸೆಯಿಂದ ಕಂಪಿಸಿದಳು ಜಾನಕಿ.

ಮಗಳ ಮುಖಭಾವವನ್ನು ಪರಿಶೀಲಿಸಿ ನೋಡಿದರು ಸುಂದರಮ್ಮ. ಪ್ರಪಂಚದಲ್ಲಿ ಎಂತಹ ಹೇಯವಾದ ವಸ್ತುವನ್ನು ಕಂಡರೂ ಎಂತಹ ಅಸಭ್ಯ ವಾದ ಮಾತನ್ನು ಕೇಳಿದರೂ ಮನುಷ್ಯ ಅದಕ್ಕಿಂತ ಹೆಚ್ಚು ಜಿಗುಪ್ಸೆ ವ್ಯಕ್ತ ಪಡಿಸಲಾರ" ಎಂದುಕೊಂಡರು.

ಮಗ ಹೇಳಿದ ಮಾತೂ ಅಷ್ಟು ತೆಗೆದುಹಾಕುವಂತಹದೇನೂ ಅಲ್ಲ. ಹುಡುಗಿ ಕಣ್ಣೆದುರಿಗಿದ್ದರೆ ಅವರ ಹಠ ಕಡಿಮೆಯಾಗಬಹುದು. ಹೆಣ್ಣುಮಕ್ಕಳು ಎಂದಾದರೂ ಅತ್ತೆಯ ಮನೆಗೆ ಹೋಗಬೇಕಾದವರೇ. ಬೇಡವಾದ ಈ ರಗಳೆ ಇನ್ನೂ ಹೆಚ್ಚಾಗದೆ ಹೋಗಿಬರುವುದೇ ಉತ್ತಮವೆನಿಸಿತು.

"ಏನಂತೀಯೇ ಜಾನಕಿ? ಅಣ್ಣ ಹೇಳಿದ ಹಾಗೆ ಒಂದುಸಲ ಹೋಗಿ ಬರಬಾರದೇನೆ?" ಎಂದರು.

"ನಾನು ಹೋಗುವುದಿಲ್ಲ" ನಿಶ್ಚಲಳಾಗಿ ಉತ್ತರ ಹೇಳಿದಳು ಜಾನಕಿ.

"ಏಕೆ ಹೋಗೊಲ್ಲ. ಎಲ್ಲಾ ಅತಿಯಾಯ್ತು ನಿಂದು! ಸದಾಕಾಲ ತೌರುಮನೇಲಿ ಕೂತಿರ್ತೀಯೇನು? ಹೆಣ್ಣಿಗೆ ಹೊಡೆದರೂ ಬಡಿದರೂ ಗಂಡನೇ ಗತಿ. ಅತ್ತೆಯ ಮನೆಯಲ್ಲಿದ್ದರೇನೇ ಅಂದಚಂದ. ಅವರು ಮಾತ್ರ ಮನುಷ್ಯ ರಲ್ಲವೇನು? ನಿನ್ನನ್ನು ಕೊಂದು ತಿನ್ನೊಲ್ಲ ಬಿಡು. ಒಂದು ಮಾತು ಅನ್ನಿಸಿ ಕೊಳ್ಳದೆ ಒಂದು ಪೆಟ್ಟು ತಿನ್ನದೆ ಯಾರಿಗೆ ಮಾತ್ರ ದಿನ ಕಳೆಯುತ್ತೆ?"

"ಏಕೆ ಹೋಗೊಲ್ಲ ಅಂತ ಕೇಳ್ತೀದೀಯ ಅಮ್ಮಾ? ಆತನನ್ನು ಮದುವೆ

ಯಾಗಿದ್ದು ಪೆಟ್ಟುತಿನ್ನಲು, ಕತ್ತೆಯಂತೆ ದುಡಿದು ಅವರು ಹಾಕುವ ತುತ್ತು ತಿನ್ನೋಕಲ್ಲ. ಅಷ್ಟು ಮಟ್ಟಿಗೆ ಚಾಕರಿ ಎಲ್ಲಿ ಮಾಡಿದರೂ ನನ್ನ ಹೊಟ್ಟೆ ತುಂಬುತ್ತೆ. ಹೆಣ್ಣು ಮದುವೆಯಾಗುವುದು ಹೊಟ್ಟೆಯಪಾಡಿಗಲ್ಲ, ಅವಮಾನ, ಕಷ್ಟಗಳನ್ನು ಸಹಿಸಿ ಕೆಲವು ಮಂದಿ ಹೆಂಗಸರು ಸಂಸಾರ ಬಿಡಲಾರದೆ ಕಟ್ಟಿ ಕೊಂಡಿರೋದು ಕೇವಲ ತುತ್ತು ಅನ್ನಕ್ಕಾಗಿ ಅಲ್ಲ. ಈ ವಿಷಯವನ್ನು ಗಂಡಸರೂ ತಿಳಿದುಕೊಂಡು ತಮ್ಮ ಅಹಂಭಾವನೆಯನ್ನು ಒಂದಿಷ್ಟು ಕಡಿಮೆ ಮಾಡಿಕೊಂಡು ಹೆಂಗಸರನ್ನು ಗೌರವದಿಂದ, ಅವರೂ ಮನುಷ್ಯರೇ ಎಂಬ ಭಾವನೆಯಿಂದ ಕಾಣುವುದನ್ನು ಕಲಿತರೆ ಒಳ್ಳೆಯದು."

ಮದುವೆಯಾದ ಹೆಣ್ಣು ಅತ್ತೆಯ ಮನೆಗೆ ಹೋಗುವ ವಿಷಯದಲ್ಲಿ ಗೌರವ–ಅಗೌರವಗಳ ವಿಷಯ ಏನಿದೆಯೋ ಸುಂದರಮ್ಮನವರಿಗೆ ಅರ್ಥವಾಗ ಲಿಲ್ಲ. ಗಂಡನ ರಕ್ಷಣೆಯಲ್ಲಿರುವುದಕ್ಕಿಂತ ಹೆಣ್ಣಿಗೆ ಬೇಕಾದ ಗೌರವ ಮರ್ಯಾದೆ ಬೇರೇನಿದೆಯೆನ್ನಿಸಿತು.

ತಂಗಿಯ ಮಾತು ಕೇಳಿ ನಿರುತ್ತರನಾದ ಶ್ರೀಹರಿ ಅಷ್ಟರಲ್ಲಿಯೇ ಚೇತರಿಸಿಕೊಂಡು "ಜಾನಕಿ, ಇದು ಆವೇಶಕ್ಕೂ ಹಠಕ್ಕೂ ಸಮಯವಲ್ಲಮ್ಮಾ. ಸ್ವಲ್ಪ ನಿಧಾನವಾಗಿ ಆಲೋಚಿಸು" ಎಂದ.

"ಇದರಲ್ಲಿ ಇನ್ನೂ ಆಲೋಚಿಸಬೇಕಾದ್ದು ಏನಿದೆಯಣ್ಣಾ. ಮನ ಸ್ಫೂರ್ತಿಯಾಗಿಯೇ ಹೇಳುತ್ತಿದೇನೆ. ಅವರು ಹೇಳಿದಂತೆ ಒಂದು ಮಾತನ್ನು ನಾನೂ ಒಪ್ಪುತ್ತೇನೆ. ಇಷ್ಟವಿಲ್ಲದ ಹೆಂಡತಿಯೊಂದಿಗೆ ಸಂಸಾರ ಮಾಡುವುದ ಕ್ಕಿಂತ ಬ್ರಹ್ಮಚಾರಿಯಾಗಿರುವುದು ಸುಖ ಎಂದಲ್ಲವೇ? ಹೆಣ್ಣಿಗೂ ಅದು ಅನ್ವಯಿಸುತ್ತದೆ. ನಾಲ್ಕು ದಿನ ಮನಸ್ಸು–ದೇಹ ನನ್ನದಲ್ಲ ಅಂದುಕೊಳ್ಳಲು ನಾನೇನು ಜಡ ಪದಾರ್ಥವೆ? ಅಣ್ಣಾ! ಎಂದಾದರೂ ನನಗೆ ಅಲ್ಲಿಗೆ ಹೋಗ ಬೇಕಾದ ಪರಿಸ್ಥಿತಿ ಬಂದಲ್ಲಿ ನನ್ನಿಷ್ಟಕ್ಕೆ ನಾನು ಹೋಗಬಲ್ಲೆ. ನೀನು ಬಿಟ್ಟು ಬರಬೇಕಾದ ತೊಂದರೆ ಕೊಡುವುದಿಲ್ಲ. ಹಗ್ಗದಿಂದ ಕಟ್ಟಿ ಎಳೆದುಕೊಂಡು ಹೋಗಿ ಬಿಟ್ಟುಬರಲು ನಾನೇನು ಈ ಮನೆಯಲ್ಲಿ ಹುಟ್ಟಿದ ಹಸುವಿನ ಕರುವಲ್ಲ. ನೀವು ಹಣ ಕೊಟ್ಟು ಕೊಂಡ ಗುಲಾಮಳಂತೂ ಅಲ್ಲವೇ ಅಲ್ಲ." ಮಾತು ಪೂರ್ತಿಯಾಗುವ ಮೊದಲೇ ಸರ್ರನೆ ರೂಮಿನೊಳಕ್ಕೆ ಹೊರಟುಹೋದಳು ಜಾನಕಿ.

ತಾಯಿಯ ಕಡೆ ನೋಡಿದ ಶ್ರೀಹರಿ.

"ಆ ಆವೇಶ ಕಡಿಮೆಯಾದಹೊರತು ಅವಳಿಗೇನೂ ಹೇಳಿ ಪ್ರಯೋಜನ ವಿಲ್ಲ" ಎಂದರು ಸುಂದರಮ್ಮ.

ಈ ಪರಿಸ್ಥಿತಿಯಲ್ಲಿ ತನ್ನ ಕೆಲಸದ ವಿಷಯ ಹೇಳಿ ಪ್ರಯೋಜನವಿಲ್ಲ ಎನಿಸಿತು ಜಾನಕಿಗೆ. ಸಮಯ ಬಂದಾಗ ಹೇಳಿದರಾಯಿತು ಎಂದುಕೊಂಡಳು. ಆದರೆ ಮೂರನೇ ದಿನವೇ ಅಣ್ಣನಿಗೆ ಈ ವಿಷಯ ತಿಳಿದುಹೋಗಿತ್ತು.

"ಓಹೋ, ಈ ಆಸರೆ ನೋಡಿಕೊಂಡೇನು ಅಷ್ಟು ಧೈರ್ಯ ನಿನಗೆ?" ಎಂದ.

"ಹೆಣ್ಣುಮಕ್ಕಳು ಕೆಲಸ ಮಾಡುವುದೆಂದರೇನೆ? ನಮ್ಮ ವಂಶದಲ್ಲಿಯೇ ಇಲ್ಲವಲ್ಲೇ? ನಿನಗೆಲ್ಲಿ ಬಂತೇ ಈ ಹಾಳು ಬುದ್ಧಿ? ನಿಮ್ಮ ಅತ್ತೆ ಮನೆಯವರಿಗೆ ತಿಳಿದರೆ ಎಷ್ಟು ಅವಮಾನ?" ಎಂದು ಕಣ್ಣೀರಿಡುತ್ತಾ ಕೂಗಾಡಿದರು ಸುಂದರಮ್ಮ.

"ನಾನು ನಾಲ್ಕು ಜನರಲ್ಲಿ ಮರ್ಯಾದೆಯಿಂದ ಬದುಕುತ್ತಿದೇನೆ. ನನ್ನ ಮರ್ಯಾದೆ ತೆಗೆದೆಯಲ್ಲಮ್ಮ. ಬೀದಿಯಲ್ಲಿ ಇನ್ನು ತಲೆಯೆತ್ತಿ ಓಡಾಡು ವಂತಿಲ್ಲವಲ್ಲಾ. ಮದುವೆಯಾದ ಹುಡುಗಿ ನಿನಗೆ ಈ ಹಾಳುಬುದ್ಧಿ ಎಲ್ಲಿ ಬಂತು?" ಎಂದ ಅಣ್ಣ.

"ನೀನು ತಲೆತಗ್ಗಿಸುವಂತಹ ಕೆಲಸ ನಾನೇನೂ ಮಾಡಲಿಲ್ಲಣ್ಣ. ಈ ಇಪ್ಪತ್ತನೆಯ ಶತಮಾನದ ಉತ್ತರಭಾಗದಲ್ಲಿ ನೀನೀಮಾತು ಆಡುತ್ತಿರುವುದೇ ಆಶ್ಚರ್ಯ" ಎಂದಳು ಜಾನಕಿ.

ತಂಗಿ ಕೆಲಸ ಮಾಡುವುದು ಶ್ರೀಹರಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆವಳು ಪ್ರತಿಭಟಿಸಿ ಕೆಲಸಮಾಡಿಯೇ ಮಾಡುತ್ತೇನೆಂದು ನಿಶ್ಚಯಿಸಿಕೊಂಡುದರಿಂದ ವಿಧಿಯಿಲ್ಲದೆ ಬಾಯಿಮುಚ್ಚಿಕೊಂಡಿದ್ದನಷ್ಟೆ. ಸಮಯ ಸಿಕ್ಕಿದಾಗಲೆಲ್ಲಾ ಗೊಣಗುತ್ತಲೇ ಇದ್ದ. ಕೆಲಸ ಹೆಚ್ಚಾಗಿದ್ದು ಜಾನಕಿ ಮನೆಗೆ ಬರುವುದು ಸ್ವಲ್ಪ ಸಾವಕಾಶವಾದರೂ ಸಾಕು. ಅದನ್ನು ಸಕಾರಣವಾಗಿ ನಿರೂಪಿಸಬೇಕಾಗು ತ್ತಿತ್ತು. ಎಷ್ಟು ಹೇಳಿದರೂ, "ಹೆಣ್ಣು ಓಡಾಡಿ ಕೆಟ್ಟಳೆಂಬ ನಾಣ್ಣುಡಿಯೇ ಇದೆಯಲ್ಲಾ" ಎಂದು ಹಂಗಿಸುತ್ತಿದ್ದ.

"ಹೊರಗೆ ಕಾಲಿಡದೆ ಮನೆಯಲ್ಲಿಯೇ ಕುಳಿತು ಕೆಟ್ಟವರಿಲ್ಲವೇನಣ್ಣಾ?" ಎಂದು ವಾದಿಸುತ್ತಿದ್ದಳು ಜಾನಕಿ.

"ನೋಡಿದೆಯಾ, ಹೇಗೆ ಮಾತಿಗೆ ಮಾತು ಹೇಳೋದನ್ನ ಕಲಿತಿದೀಯಾಂತ. ಇದಕ್ಕೆ ಮುಂಚೆ ಎಂದಾದರೂ ಎದುರು ವಾದಿಸುತ್ತಿ ದ್ದೆಯಾ?" ಎಂದು ದಬಾಯಿಸುತ್ತಿದ್ದ ಶ್ರೀಹರಿ.

"ಸರಿಯಾದ ಮಾತಾಗಿದ್ದರೆ ಇಂದೂ ಎದುರು ಜವಾಬು ಹೇಳುವ ಆವಶ್ಯಕತೆಯಿರುವುದಿಲ್ಲ ಅಣ್ಣಾ" ಎನ್ನುತ್ತಿದ್ದಳು ಜಾನಕಿ.

ಏನಾದರೂ ಸರಿ, ಯಾರು ಏನಂದುಕೊಂಡರೂ ಸರಿ, ತಾನು ಕೆಲಸ ಮಾತ್ರ ಬಿಡಬಾರದೆಂದು ನಿಶ್ಚಯಿಸಿಕೊಂಡಳು ಜಾನಕಿ. ತಾಯಿಯ ಕಣ್ಣೀರಾಗಲೀ, ಅಣ್ಣನ ಆರ್ಭಟವಾಗಲೀ, ನೆರೆಹೊರೆಯವರ ಅವಹೇಳನೆಯಾಗಲೀ ಯಾವುವೂ ಆಕೆಯನ್ನು ತನ್ನ ನಿಶ್ಚಯದಿಂದ ಹಿಂತಿರುಗಿಸಲಾರದಾದುವು. ಜಾನಕಿ ತನ್ನ ಮೊದಲ ತಿಂಗಳ ಸಂಬಳ ತೆಗೆದುಕೊಂಡ ದಿನವೇ ಅವಳು ಅಂತಹ ನಿಶ್ಚಯಕ್ಕೆ ಬರಲು ಕಾರಣವಾದ ಸಂಘಟನೆ ನಡೆಯಿತು.

ಸಾಯಂಕಾಲ ಮನೆಗೆ ಬರುವ ವೇಳೆಗೆ ಹಿರಿಯ ತಮ್ಮ ಸಾಂಬಶಿವ ಮುಖ ಚಿಕ್ಕದು ಮಾಡಿಕೊಂಡು ಕುಳಿತಿದ್ದುದು ಕಾಣಿಸಿತು. ತನ್ನ ಮನಸ್ಸಿನಲ್ಲಿಯ ಚಿಂತೆಯನ್ನು ಮೇಲೆ ಕಾಣಿಸದಂತೆ ಬಚ್ಚಿಟ್ಟುಕೊಳ್ಳುವುದರಲ್ಲಿ ನಿಸ್ಸೀಮನೆಂದು ತಾನಂದುಕೊಳ್ಳುತ್ತಿರುವ ಸಾಂಬು ಆ ರೀತಿ ಕುಳಿತಿರುವುದನ್ನು ನೋಡಿ ಜಾನಕಿ ಆಶ್ಚರ್ಯಪಟ್ಟಳು.

"ಏನೋ ಸಾಂಬು, ಏನಾಯಿತು?" ಎಂದಳು ಹತ್ತಿರ ನಿಂತು.

"ಏನಿಲ್ಲಕ್ಕಾ" ಎಂದ ಸಾಂಬು.

"ಹೇಳೋ ಪರವಾಗಿಲ್ಲ. ನನ್ನೊಂದಿಗೆ ಹೇಳೋಕೇನು? ಅಣ್ಣ ಏನಾದರೂ ಅಂದನೇ?" ಎಂದಳು.

ಸಾಂಬು ಮಾತನಾಡಲಿಲ್ಲ.

"ಏನೋ ಇದು. ಅಷ್ಟುಮಾತ್ರ ನಿನ್ನ ಕಷ್ಟ–ಸುಖ ಹಂಚಿಕೊಳ್ಳೋಕೆ ನಾನು ಕೆಲಸಕ್ಕೆ ಬರೊಲ್ಲವೇನೋ. ಯಾಕೋ ನನ್ನನ್ನ ಅಷ್ಟು ದೂರವಾಗಿ ನೋಡುತ್ತಿ?" ಎಂದಳು ಜಾನಕಿ ನೊಂದುಕೊಳ್ಳುತ್ತಾ.

"ಹಾಗನ್ನ ಬೇಡಕ್ಕಾ. ಹೇಳೋಕೇನಿಲ್ಲ. ನಾಳೆ ಫೈನಿನೊಂದಿಗೆ ಫೀಸು ಕಟ್ಟಲು ಕಡೆಯ ದಿನ. ಏನು ಮಾಡೋದೂಂತ ಆಲೋಚಿಸುತ್ತಿದೀನಿ."

"ಅಣ್ಣನಿಗೆ ಹೇಳಿದೆಯಾ?"

"ಹತ್ತುದಿನಗಳ ಹಿಂದೇನೇ ಹೇಳಿದ್ದೆ. ಈವತ್ತು ಮತ್ತೆ ನೆನಪು ಮಾಡಿದೆ."

"ಏನಂದ?"

"ಆಗನಿಂದ ಪ್ರಯತ್ನ ಮಾಡ್ತಿದೀನಿ. ಏನೂ ಪ್ರಯೋಜನವಾಗಲಿಲ್ಲ. ಏನು ಮಾಡಬೇಕೋ ತೋಚುತ್ತಿಲ್ಲ ಎಂದ. ಅವನು ಮಾತ್ರ ಎಲ್ಲಿಂದ ತರ್ತಾನೆ ಬಿಡು. ಎಲ್ಲರೂ ಕೂತು ತಿನ್ನೋರು ತಾನೇ" ಎಂದಂದು ಕೂಡಲೇ ತನ್ನ ತಪ್ಪನ್ನು ಗ್ರಹಿಸಿ, "ನಿನ್ನ ಹೊರತು" ಎಂದ ಅಕ್ಕನ ಕಡೆ ನೋಡಿ

"ಇನ್ನು ಮುಂದಿನ ವಿಷಯ ಹೇಗೋ ಕಾಣೆ. ಇದುವರೆವಿಗೂ ನಾನೂ

ಅಷ್ಟೇ ತಾನೇ?" ಎಂದಳು ಜಾನಕಿ ನಗುತ್ತಾ.

"ಸರಿ ಬಿಡು, ಇನ್ನೂ ನಾಳೆ ಟೈಮಿದೆಯಲ್ಲಾ. ಹೇಗೋ ಕಟ್ಟಿದ ರಾಯಿತು. ನೀನು ಸುಮ್ಮನೆ ಮನಸಿಗೆ ಹಚ್ಚಿಕೊಳ್ಳಬೇಡ" ಎಂದು ತಮ್ಮನನ್ನು ಸಂತಯಿಸಿದಳು.

ಒಂದು ದಿನ ಟ್ರೆಂ ಕೊಡುತ್ತಾರೇನೋ ಕೇಳೋಣವೆಂದು ಹೋದ ಶ್ರೀಹರಿ ಹಣ ಕಟ್ಟಿದ ವಿಷಯವನ್ನು ಕ್ಯಾಷಿಯರಿಂದ ತಿಳಿದುಕೊಂಡು ಒಂದು ಕ್ಷಣ ಡಂಗಾದ.

"ಯಾರು ಬಂದು ಹಣ ಕಟ್ಟಿದರು?" ಎಂದು ಕೇಳಿದ.

"ಯಾರೋ ಹುಡುಗಿ."

ಆ ಹುಡುಗಿ ಯಾರೆಂಬುದು ಕ್ಷಣಮಾತ್ರದಲ್ಲಿ ಅರ್ಥವಾಯಿತು ಶ್ರೀಹರಿಗೆ. ಮನಸ್ಸಿನಲ್ಲೇ ತಾರೀಖುಗಳನ್ನು ಲೆಕ್ಕಹಾಕಿ, 'ಓಂಗಳಾಯಿತು' ಎಂದುಕೊಂಡ. 'ನನ್ನ ಬದುಕು ಇಷ್ಟು ಹೀನವಾಯಿತೆ' ಎಂದು ವ್ಯಥೆಪಟ್ಟ. ಕೆಲಸಮಾಡಬೇಡವೆಂದು ತಾನು ಅಡ್ಡಿಮಾಡುತ್ತಿರುವ ತನ್ನ ತಂಗಿಯ ಮೊದಲ ತಿಂಗಳ ಸಂಬಳವನ್ನು ತನ್ನ ಆವಶ್ಯಕತೆಗೋಸ್ಕರ ಉಪಯೋಗಿಸಬೇಕಾಗಿ ಬಂದುದಕ್ಕಾಗಿ ಮನಸ್ಸಿನಲ್ಲಿಯೇ ಕುಗ್ಗಿಹೋದ.

ಸಂತೋಷದಿಂದ ಹಿಗ್ಗುತ್ತಾ ಮನೆಗೆ ಬಂದ ಸಾಂಬಶಿವ ಮನೆಯ ಬಾಗಿ ಲಲ್ಲಿಯೇ ಜಾನಕಿಯನ್ನು ನೋಡಿ, "ನೀನು ಹಣ ಕಟ್ಟಿದೆಯಾ?" ಎಂದ ಆನಂದದಿಂದ.

"ಹೌದುಕಣೋ. ನಿನ್ನೆ ತಾನೇ ನನ್ನ ಸಂಬಳ ಬಂತು. ಸ್ವಲ್ಪ ಅಡ್ವಾನ್ಸಾಗಿ ತಗೊಂಡೆ" ಎಂದಳು ಜಾನಕಿ. ಇದರಲ್ಲಿ ವಿಶೇಷವೇನೂ ಇಲ್ಲ ಎಂಬಂತೆ.

ಅಕ್ಕನಿಗೆ ಎಷ್ಟೋ ವಿಧವಾಗಿ ತನ್ನ ಕೃತಜ್ಞತೆಗಳನ್ನು ಹೇಳಬೇಕೆಂದು ಕೊಂಡಿದ್ದ ಸಾಂಬಶಿವ. ಆದರೆ ಅವನ ಬಾಯಿಂದ ಒಂದು ಮಾತೂ ಹೊರ ಬರಲಿಲ್ಲ. ಹೆಂಗಸರು ಕೆಲಸ ಮಾಡುವುದು ಎಷ್ಟು ಒಳ್ಳೆಯದೆಂಬುದನ್ನು ಕುರಿತು ವಾದಿಸಬೇಕೆಂದುಕೊಂಡ. ಆದರೆ ಎಲ್ಲಿಂದ ಪ್ರಾರಂಭಿಸಬೇಕೋ ಎಲ್ಲಿ ಮುಗಿಸಬೇಕೋ ಅವನಿಗರ್ಥವಾಗಲಿಲ್ಲ.

ಅಕ್ಕನ ಎರಡೂ ಕೈಗಳನ್ನು ಹಿಡಿದುಕೊಂಡು, "ಅಕ್ಕಾ" ಎಂದ. ಅವನ ಕಣ್ಣು ತುಂಬಿಬಂದಿತ್ತು.

ತನಗಿಂತಲೂ ಎರಡು ವರ್ಷ ಚಿಕ್ಕವನಾದರೂ ಚಿಕ್ಕಣ್ಣನೆಂಬಂತೆ ತನ ಗಿಂತಾ ಕೊಂಚ ಎತ್ತರವಾಗಿ ಸುಂದರವಾಗಿದ್ದ ತಮ್ಮನ ಕಡೆ ಪ್ರೀತಿಯಿಂದ

ನೋಡಿದಳು ಜಾನಕಿ. ಹುಡುಗಿಯ ಕೆನ್ನೆಯಂತೆ ಮೃದುವಾಗಿ ಗುಲಾಬಿಬಣ್ಣ ದಿಂದ ನುಣುಪಾಗಿದ್ದ ಅವನ ಕೆನ್ನೆಯ ಮೇಲಿಂದ ಎರಡು ಹನಿ ಕಣ್ಣೀರು ಜಾರಿ ಕೆಳಗೆ ಬಿತ್ತು.

ಕೊಂಚ ಹಾಸ್ಯ ಮಾಡಿದರೂ ಅವನ ಕೆನ್ನೆ ಕೆಂಪಾಗುತ್ತಿತ್ತು. ಅದನ್ನು ಬಚ್ಚಿಡಲೋಸುಗ ತಲೆತಗ್ಗಿಸುತ್ತಿದ್ದ ತಮ್ಮನನ್ನು ನೋಡಿ ಇಷ್ಟು ನಾಚಿಕೆ ಯಾದರೆ ಹೇಗೆ ಎಂದುಕೊಳ್ಳುತ್ತಿದ್ದಳು ಜಾನಕಿ.

"ಕೆನ್ನೆ ಹಿಂಡಿದರೆ ಹಾಲು ಸುರಿಯುತ್ತದೆ" ಎಂದು ಹಾಸ್ಯಮಾಡು ತ್ತಿದ್ದಳು ಅತ್ತಿಗೆ ಕನಕಲಕ್ಷ್ಮಿ.

"ಅಷ್ಟು ಮೃದುವಾಗಿ ಮುಟ್ಟಿದರೆಯೇ ಕೆಂಪಾಗುತ್ತಿದ್ದರೆ ಯಾವ ಹುಡುಗೀನೂ ನಿನ್ನ ಕಡೆ ನೋಡೋಲ್ಲ ಕಣಣ್ಣ. ಗಂಡಸು ಅಂದಮೇಲೆ ರೂಪ ದೊಂದಿಗೆ ಸ್ವಲ್ಪ ಗಡುಸಾಗಿ ಗಂಭೀರವಾಗಿರಬೇಕು" ಎನ್ನುತ್ತಿದ್ದ ಪ್ರಕಾಶ.

"ಹೋಗಲಿ ಬಿಡೋ. ಚಿಕ್ಕಣ್ಣನನ್ನ ಯಾವ ಹುಡುಗೀನೂ ವರಿಸದಿದ್ದರೆ ಅಷ್ಟೇಹೋಯಿತು. ಆದರೆ ಐದಡಿ ಎತ್ತರಾನೂ ಇಲ್ಲದ ಪ್ರಕಾಶರಾಯರ ಕುಂಬಳಕಾಯಿ ಆಕಾರ ನೋಡಿ ಹುಡುಗಿಯರೆಲ್ಲಾ ಅವರ ಹಿಂದೆ ಬೀಳುತ್ತಾ ರೇನು?" ಎನ್ನುತ್ತಿದ್ದಳು ಶಾಂತ.

ಯಾರು ಏನೆಂದರೂ ತುಟಿ ಎರಡು ಮಾಡದೆ ಅಲ್ಲಿಂದ ಜಾರಿಕೊಳ್ಳು ತ್ತಿದ್ದ ಸಾಂಬಶಿವ.

ಎತ್ತರವಾಗಿ ಬೆಳೆದ ತಮ್ಮನ ಕಣ್ಣೀರನ್ನು ನೋಡಿ ಜಾನಕಿಗೆ ಚಿಕ್ಕಂದಿ ನಲ್ಲಿ 'ಅಕ್ಕಾ, ಅಮ್ಮ ಹೊಡೆದಳು' ಎಂದು ದೂರಿಡುತ್ತಿದ್ದ ತಮ್ಮನ ನೆನಪಾ ಯಿತು. ಈ ದಿನ ಸಹ ಅದೇ ವಿಧವಾಗಿ ಪ್ರೀತಿಯಿಂದ ಅವನ ಕಣ್ಣೀರನ್ನು ತನ್ನ ಸೆರಗಿನಿಂದ ಒರೆಸುತ್ತಾ, "ಛೆ, ಕಣ್ಣೀರಿಡಬಹುದೇನೋ ಸಾಂಬೂ" ಎಂದಳು.

ಶ್ರೀಹರಿಯಿಂದ ಮೊದಲೇ ಈ ವಿಷಯ ಸುಂದರಮ್ಮನವರಿಗೆ ತಿಳಿದಿತ್ತು. ಒಂದು ನಿಮಿಷ ಆಕೆಯ ಹೃದಯ ಸಂತೋಷದಿಂದ ಉಬ್ಬಿತು. ಆ ಚಿಕ್ಕ ಕೋಣೆಯ ತುಂಬಾ ತಣ್ಣನೆಯ ಗಾಳಿ ಹಿತವಾಗಿ ಬೀಸಿ ಬಂದಂತೆನಿಸಿ ತೃಪ್ತಿ ಯಿಂದ ನಿಟ್ಟುಸಿರುಬಿಟ್ಟರು. ಆದರೆ ಅದು ಕ್ಷಣಮಾತ್ರವೇ. ಮರುಕ್ಷಣದಲ್ಲಿ ಗೌರವ ಮರ್ಯಾದೆಗಳಿಗಾಗಿ ತುಡಿದುಕೊಳ್ಳುವ ಮಾಮೂಲು ಸುಂದರಮ್ಮ ನಾಗಿದ್ದರಾಕೆ.

"ಏನೋಮ್ಮ, ಈ ಕಾಲದಲ್ಲಿ ಯಾವುದು ಒಳ್ಳೇದೋ, ಯಾವುದು ದೋ ಗೊತ್ತಾಗುವಂತೆಯೇ ಇಲ್ಲ. ದೊಡ್ಡವರು ಒಳ್ಳೇದು ಅಂದು

ಕೊಂಡದ್ದನ್ನು ಹುಡುಗರು ಖಂಡಿಸುತ್ತಾರೆ. ಈಗಿನ ಕಾಲದ ಹುಡುಗರು ದೊಡ್ಡವರಿಗೆ ಕಬ್ಬಿಣದ ಕಡಲೆಯಾಗಿ ಕುಳಿತಿದಾರೆ. ನೋಡಿಯೂ ನೋಡದಂತೆ ಕಣ್ಣು ಮುಚ್ಚಿಕೊಂಡು ಕಾಲ ಕಳೆಯಬೇಕಾದ ಸ್ಥಿತಿ ಬಂದಿದೆ—ನಮ್ಮಂಥ ವರಿಗೆ. ಏನಂದುಕೊಂಡು ಏನು ಪ್ರಯೋಜನ? ಎಲ್ಲಾ ದೇವರ ನಿರ್ಣಯು" ಎಂದು ತಮ್ಮನ್ನು ತಾವು ಸಮಾಧಾನಪಡಿಸಿಕೊಂಡರು, ಸುಂದರಮ್ಮ.

"ನೇರಾಗಿ ತನ್ನನ್ನೇನು ಅನ್ನದಿದ್ದರೂ ತನ್ನನ್ನು ಕುರಿತೇ ಆ ಟೀಕೆ ಎಂದು ಜಾನಕಿ ಗ್ರಹಿಸಿದಳು. ತಾಯಿಯ ಧೋರಣೆಯಲ್ಲಿ ಆದ ಬದಲಾವಣೆ ಕಂಡು ಅವಳ ಮನಸು ಹಗುರವಾಯಿತು.

ಎಂಥ ವಿಷಯವನ್ನಾದರೂ ಜನ ನಾಲ್ಕು ದಿನ ಮಾತ್ರವೇ ಆಡಿಕೊಳ್ಳು ತ್ತಾರೆ. ಅಂಥಾದ್ದರಲ್ಲಿ ಜಾನಕಿಯ ಕೆಲಸದ ವಿಷಯ ಏನು ಮಹಾ!

ಮೊದಮೊದಲು ಅಣ್ಣನೊಂದಿಗೇ ಊಟಮಾಡಿ ಕೆಲಸಕ್ಕೆ ಹೋಗುತ್ತಿದ್ದ ಮಗಳನ್ನು ನೋಡಿ ಸುಂದರಮ್ಮ ಕಣ್ಣೊರೆಸಿಕೊಳ್ಳದ ದಿನ ಇರಲಿಲ್ಲ. "ಹಾಯಾಗಿ ಸಂಸಾರ ಮಾಡಿಕೊಂಡು, ಮಕ್ಕಳ ತಾಯಿಯಾಗಿ ಸುಖವಾಗಿರ ಬೇಕಾದ ವಯಃಸಿನಲ್ಲಿ ಈ ಕೆಲಸ ಎಲ್ಲಿ ಬರೆದಿತ್ತೋ ನಿನ್ನ ಹಣೆಯಲ್ಲಿ" ಎನ್ನು ತ್ತಿದ್ದರು.

ಸಾಯಂಕಾಲ ದಣಿದು ಮನೆಗೆ ಬರುತ್ತಿದ್ದ ಮಗಳನ್ನು ನೋಡಿ, "ಗಂಡಸರೊಂದಿಗೆ ನಾವೂ ಸರಿಸಮಾನ ಅಂತ ಸ್ಕೆ ಎಂದು ಕೆಲಸಕ್ಕೆ ಹಾಜ ರಾದರೆ ಆಯಿತೇನು? ಅವರಿಗಿರೋಶಕ್ತಿ ಇರಬೇಡವೇನು? ಮುಖ ನೋಡು ಬಾಡಿ ಹೇಗಾಗಿದೇಂತ! ಕೈಕಾಲು ತೊಳೆದುಕೊಂಡು ಬಾ, ಕುಡಿಯೋಕ್ಕೇ ನಾದರೂ ಕೊಡುತ್ತೀನಿ" ಎಂದು ಸಿಟ್ಟು ಬೆರೆತ ಪ್ರೀತಿಯಿಂದ ಹೇಳುತ್ತಿದ್ದರು.

ಆರ್ಥಿಕವಾಗಿ ಸ್ವಲ್ಪ ಸಹಾಯವೆನ್ನಿಸಿದರೂ ಶ್ರೀಹರಿಗೆ ಜಾನಕಿ ಕೆಲಸ ಮಾಡುವುದು ಇಷ್ಟವಿರಲಿಲ್ಲ. ಮನೆಯಲ್ಲಿ ಏತಕ್ಕಾದರೂ ಜಾನಕಿ ಹಣಕೊಟ್ಟ ದಿನ, ತನ್ನ ನಿಸ್ಸಹಾಯತೆಯನ್ನು ಎತ್ತಿ ತೋರಿಸಿದಂತೆನಿಸುತ್ತಿತ್ತು.

"ನಮ್ಮ ಮನೆಯಲ್ಲಿ ಹುಟ್ಟಿದ ಹೆಣ್ಣುಮಗಳಿಗೆ ಮೂರು ಜನ ಅಣ್ಣ ತಮ್ಮಂದಿರಿದ್ದೂ ಒಂದು ತುತ್ತು ಅನ್ನಹಾಕಲಾರೆನೇ? ನಿನ್ನ ಹೊಟ್ಟೆಗಾಗಿ ನೀನೇನೂ ದುಡಿಯಬೇಕಾಗಿಲ್ಲ. ಅತ್ತೆಯ ಮನೆಗೆ ಹೋಗದಿದ್ದರೆ ಬೇಡ. ಮನೆಯಲ್ಲಿ ಅಮ್ಮನಿಗೆ ಸಹಾಯವಾಗಿರು" ಎನ್ನುತ್ತಿದ್ದ ಶ್ರೀಹರಿ.

"ಅಮ್ಮನಿಗೆ ಸಹಾಯಮಾಡಲು ಅತ್ತಿಗೆ ಇದಾಳಣ್ಣಾ. ನಿನಗೆ ಸಹಾಯ ಮಾಡಲು ನನಗೆ ಅವಕಾಶ ಕೊಡು. ಒಂದೇ ರಕ್ತವನ್ನು ಹಂಚಿಕೊಂಡು ಹುಟ್ಟಿದ ನನಗೆ ನಿನ್ನ ಕಷ್ಟ-ಸುಖಗಳಲ್ಲಿಯೂ ಪಾಲಿರಲಿ" ಎನ್ನುತ್ತಿದ್ದಳು

ಜಾನಕಿ.

"ನಿಂಗೇನಪ್ಪ ಒಳ್ಳೇ ಚಾನ್ಸ್. ಹಾಯಾಗಿ ಸಂಪಾದಿಸೋ ತಂಗಿ ಇದಾಳೆ ಮನೇಲಿ. ಅಂಥಾ ಅದೃಷ್ಟ ಎಲ್ಲರಿಗೂ ಇರುತ್ತೇನು?" ಎನ್ನುತ್ತಿದ್ದರು ಸಹೋದ್ಯೋಗಿಗಳು—ವ್ಯಂಗ್ಯವಾಗಿ.

'ಅದೃಷ್ಟವೋ, ದುರದೃಷ್ಟವೋ ಈ ಸಂಪ್ರದಾಯ ಜಾನಕಿಯೊಂದಿಗೇ ನಿಲ್ಲಬೇಕು. ಶಾಂತನಿಗೆ ಒಳ್ಳೇ ಕಡೆ ಗಂಡು ನೋಡಿ ಮದುವೆ ಮಾಡಿಬಿಡಬೇಕು' ಎಂದುಕೊಂಡ ಶ್ರೀಹರಿ.

* * *

ಶಾಂತನಿಗೆ ವರನೋಡಲು ಪಕ್ಕದೂರಿಗೆ ಹೋಗಿಬಂದ ಶ್ರೀಹರಿ ಕತ್ತಲಲ್ಲಿಯೇ ತಡವರಿಸುತ್ತಾ ಮನೆಯೊಳಕ್ಕೆ ಹೆಜ್ಜೆಯಿಟ್ಟ.

"ಅಮ್ಮಾ, ಕನಕಾ, ಜಾನಕೀ ಎಲ್ಲಿದೀರಿ? ಮನೇಲಿ ದೀಪ ಹಚ್ಚದೆ, ಬಾಗಿಲು ಹಾರುಹೊಡೆದು ಏನು ಮಾಡುತ್ತಿದೀರಿ?" ಗಟ್ಟಿಯಾಗಿ ಕೂಗಿದ ಶ್ರೀಹರಿ.

ಎಲ್ಲರಿಗಿಂತ ಮೊದಲು ಜಾನಕಿ ಹಳೆಯ ನೆನಪಿನ ಸುಳಿಯೊಳಗಿನಿಂದ ಹೊರಬಂದಳು. ಮರೆಯಬೇಕೆಂದು ಎಷ್ಟು ಪ್ರಯತ್ನಿಸಿದರೂ ಬೆನ್ನು ಬಿಡದೆ ಅಂಟಿಕೊಂಡಿರುತ್ತವೆ ಹಳೆಯ ಜ್ಞಾಪಕಗಳು. ಬಾಳಿನ ಹಾದಿಯನ್ನೇ ಬದಲಾಯಿಸುವಂಥ ಸಂಘಟನೆಯಾಗಿದ್ದಲ್ಲಿ ಮತ್ತಷ್ಟು ಬಿಗಿಯಾಗಿ ಅಂಟಿಕೊಳ್ಳುತ್ತದೆ. ಜಾನಕಿ ಆ ನೆನಪುಗಳನ್ನು ಪಕ್ಕಕ್ಕೆ ತಳ್ಳಿ ಅಣ್ಣನ ಬಳಿ ಬಂದಳು.

"ಬಂದೆಯಾ ಅಣ್ಣಾ, ನಾಳೆ ಬರುತ್ತೀ ಅಂದುಕೊಂಡಿದ್ದೆವು ನಾವು" ಎಂದಳು.

"ಅದಿರಲಿ, ಮನೇಲಿ ಯಾರೂ ಕಾಣುತ್ತಿಲ್ಲ, ಎಲ್ಲಿ ಹೋದರು? ದೀಪನಾದರೂ ಹಚ್ಚದೆ ಕೋಣೆಯಲ್ಲಿ ನೀನೇನು ಮಾಡುತ್ತಿದ್ದೆ?"

"ಮಲಗಿದ್ದೆ ಹಾಗೇ ನಿದ್ದೆ ಹತ್ತಿಬಿಟ್ಟಿದೆ. ನೀನು ಕೂಗಿದಾಗಲೇ ಎಚ್ಚರವಾಗಿದ್ದು. ಅಮ್ಮ-ಅತ್ತಿಗೆ ಹಿತ್ತಲಲ್ಲಿರಬೇಕು" ಎನ್ನುತ್ತಾ ಬೆಂಕಿಪೊಟ್ಟಣ ತೆಗೆದುಕೊಂಡು ದೀಪ ಹಚ್ಚಿದಳು.

"ಯಾರೇ ಬಂದದ್ದು?" ಎನ್ನುತ್ತಾ ಬಂದರು ಸುಂದರಮ್ಮ.

"ಅಣ್ಣ ಬಂದಾವಮ್ಮಾ."

"ಕನಕಾ, ಮಗು ಬಂದನಂತೆ. ಕಾಲಿಗೆ ನೀರು ತಾಮ್ಮಾ" ಎಂದು ಸೊಸೆಗೆ ಹೇಳಿ ಮಗನ ಬಳಿ ಕುಳಿತರು ಸುಂದರಮ್ಮ.

"ಅಣ್ಣಾ, ನಾನು ಪರೀಕ್ಷೇಲಿ ಪಾಸಾಗಿದೀನಿ" ಎಂದಳು ಶಾಂತ ಉತ್ಸಾಹದಿಂದ.

"ಪ್ರಕಾಶಂದು ಏನಾಯಿತು?" ಶ್ರೀಹರಿ ಶಾಂತಳ ಕಡೆ ನೋಡದೆಯೇ ಪ್ರಶ್ನಿಸಿದ.

ಶಾಂತಳ ಮುಖ ಚಿಕ್ಕದಾಯಿತು.

ಪರೀಕ್ಷೆ ಪಾಸಾದ ಹುಡುಗಿಯನ್ನು ಅಭಿನಂದಿಸದೆ ಪ್ರಕಾಶನ ರಿಸಲ್ಟ್ ಕುರಿತು ಮಾತನಾಡಿದ್ದು ಹಿಡಿಸಲಿಲ್ಲ ಜಾನಕಿಗೆ.

"ಅವನ ಮೇಲೆ ನಾವೇನೂ ಆಸೆ ಇಟ್ಟುಕೊಳ್ಳಲಿಲ್ಲವಲ್ಲಣ್ಣ. ಕಷ್ಟ ಪಟ್ಟು ಓದಿ ಶಾಂತ ಪಾಸಾಗಿದಾಳೆ. ನಂಗೆ ತುಂಬಾ ಸಂತೋಷವಾಗಿದೆ."

"ಶಾಂತ ಪಾಸಾಗಿದ್ದು ನನಗೂ ಸಂತೋಷಾನೇ. ಆದರೆ ನೋಡು, ಅವನು ಗಂಡುಹುಡುಗ. ದುಡಿದು ಬದುಕಬೇಕಾದವ. ಅದಕ್ಕೆ ನನಗೆ ಅವನನ್ನು ಕುರಿತು ಆತುರ, ಅಷ್ಟೆ. ಶಾಂತನಿಗೆ ಎರಡು ಕಡೆ ಸಂಬಂಧ ನೋಡಿ ಬಂದಿದೀನಿ. ಅದರಲ್ಲಿ ಯಾವುದು ಕೂಡಿಬಂದರೂ ಸಾಕು, ಈ ವರ್ಷ ಮದುವೆ ಮಾಡಿಬಿಡೋಣ ಅಂತಿದೀನಿ....ಅಂಥಾದ್ದರಲ್ಲಿ...."

"ಪಾಸಾದರೂ, ಬಿಟ್ಟರೂ ಒಂದೇ" ಮನೆಯೊಳಕ್ಕೆ ಕಾಲಿಡುತ್ತಾ ಅಣ್ಣನ ಮಾತನ್ನು ಪೂರ್ತಿಮಾಡಿದ ಪ್ರಕಾಶ.

"ಇಷ್ಟು ಹೊತ್ತೂ ಎಲ್ಲಿ ಅಲೀತಾ ಇದ್ದೆಯೋ?" ಸುಂದರಮ್ಮ ಕೇಳಿದರು.

"ಪರೀಕ್ಷೆ ಡುಂಕಿ ಹೊಡೆದಿದ್ದೀ ಅಲ್ಲವೆ ನೇರಾಗಿ ಮನೆಗೆ ಬರೋಕೂ ಆಗಲಿಲ್ಲವೇನು?"

"ಪಾಸಾಗಿದ್ದರೆ ನೇರಾಗಿ ಮನೆಗೇ ಬರುತ್ತಿದ್ದೆ. ಇಲ್ಲಿ ಬಂದು ಮಾಡೋದೇನಿದೆ? ಪಾಸಾದ ಸ್ನೇಹಿತರಿಗೆ ಕಂಗ್ರಾಟ್ಸ್ ಹೇಳಿ ಬರೋಣಾಂತ ಹೋಗಿದ್ದೆ. ಈ ವರ್ಷ ರಿಸಲ್ಟ್ಸ್ ತುಂಬಾ ಚೆನ್ನಾಗಿದೆ. ಹೆಚ್ಚು ಕಡಿಮೆ ನನಗೆ ತಿಳಿದವರೆಲ್ಲಾ ಪಾಸಾಗಿದಾರೆ."

"ನಾಚಿಕೆ ಇಲ್ಲದೆ ಹೇಳಕೊಳ್ಳೋದು ನೋಡು" ಎಂದಳು ಶಾಂತ.

"ಮಿಥ್ಯೆ ನಂಗೇಕೆ ನಾಚಿಕೆ. ಭಾವೀ ಮದುವಣಗಿತ್ತಿ ನಿನಗಿರಬೇಕು. ಅಂದಹಾಗೆ ಕೇಳೋದೇ ಮರೆತೆ. ಅಣ್ಣಾ, ಹೋದ ಕೆಲಸ ಏನಾಯಿತು?"

"ಹ್ಞೂ. ನಾನೇನೀಗ ಮದುವೆ ಮಾಡಿಕೊಳ್ಳೊಲ್ಲ. ಕಾಲೇಜಿಗೆ ಸೇರ್ತೀನಿ. ನಿನ್ನಹಾಗೆ ಒಂದೊಂದು ಕ್ಲಾಸು ಮೂರು ಮೂರು ವರ್ಷ ಓದಬೇಕಾಗಿಲ್ಲವಲ್ಲಾ. ಅಣ್ಣ ನನ್ನನ್ನ ಓದಿಸ್ತಾನೆ. ಅಕ್ಕನ ಹಾಗೆ ನಾನೂ ಕೆಲಸ

ಮಾಡ್ತೀನಿ" ಎಂದಳು ಅಣ್ಣನ ಕಡೆ ನೋಡುತ್ತ.

"ಅಲ್ಲವೇ ಮತ್ತೆ? ಹಾಗೇ ಆಗಲ್ಲಮ್ಮ. ನೀವು ಹೆಣ್ಣುಮಕ್ಕಳು ಕೆಲಸ ಮಾಡಿ ನಮ್ಮನ್ನು ಪೋಷಿಸಿ. ನಾವು ಹೀಗೇ ಬೀದಿ ಅಲೆಯುತ್ತಾ ಕಾಲಕಳೀತೀವಿ" ಎಂದ ಶ್ರೀಹರಿ ಪ್ರಕಾಶನ ಕಡೆ ನೋಡುತ್ತ.

"ನನ್ನನ್ನ ಕುರಿತೇ ನೀನು ಹಾಗಂತಿದೀಯಾಂತ ನನಗೆ ಗೊತ್ತಣ್ಣ. ನೀನನ್ನೋದೂ ನಿಜಾನೇ. ಈಗ ಈ ಊರಲ್ಲಿ ನನಗೆ ತಿಳಿಯದ ಬೀದಿ ಇಲ್ಲ. ನೋಡದ ಮುಖ ಇಲ್ಲ. ಈ ಪರಿಚಯಗಳನ್ನು, ಈ ಅವಕಾಶವನ್ನೂ ಹೇಗಾದರೂ ಉಪಯೋಗಿಸಿಕೊಳ್ಳಬಹುದೇನೋಂತ ಆಲೋಚಿಸುತ್ತಾ ಇದೀನಿ."

"ಆಲೋಚಿಸಪ್ಪಾ, ಆಲೋಚಿಸು—ಭಿಕ್ಷೆ ಬೇಡಿ ತಿನ್ನೋಕೆ ಕೆಲಸಕ್ಕೆ ಬರುತ್ತೆ ಈ ಬೀದಿ ಅಲೆಯೋ ಕೆಲಸ" ಎಂದ ಶ್ರೀಹರಿ ಕೋಪದಿಂದ.

"ಅಣ್ಣಾ, ಒಂದು ಮಾತು ಹೇಳಲೇನು? ನನ್ನ ಕಂಠದಲ್ಲಿ ಪ್ರಾಣವಿರುವವರೆಗೂ ಒಬ್ಬರ ಮುಂದೆ ಕೈ ಚಾಚಿ ಬೇಡೋದಿಲ್ಲ. ನನ್ನ ತಲೆಗೆ ವಿದ್ಯೆ ಹತ್ತಲಿಲ್ಲ ನಿಜ. ಆದರೆ ನನ್ನ ತೋಳಿನಲ್ಲಿ ಬಲವಿದೆ. ನೀವು ನಿಮ್ಮ ಬುದ್ಧಿಶಕ್ತಿಯಿಂದ ಸಂಪಾದಿಸಿದರೆ ನಾನು ನನ್ನ ದೇಹ ಪರಿಶ್ರಮದಿಂದ ಬದುಕಬಲ್ಲೆ."

"ಏನು ಮಾಡುತ್ತೀಯೋ, ಇಟ್ಟಿಗೆ ಹೊರುತ್ತೀಯಾ? ರೈಲ್ವೆ ಸ್ಟೇಷನ್ನಿನಲ್ಲಿ ಕೂಲಿ ಕೆಲಸ ಮಾಡ್ತೀಯಾ?"

"ಏನಾದರೂ ಮಾಡುತ್ತೀನಣ್ಣ. ಬದುಕೋದಿಕ್ಕೆ ಯಾಚಕವೃತ್ತಿಯ ಹೊರತಾಗಿ ಏನು ಮಾಡಿದರೂ ತಪ್ಪಿಲ್ಲಾಂತ ನನ್ನ ಅಭಿಪ್ರಾಯ. ಕಾಯಕಷ್ಟ ಅವಮಾನಕರವಲ್ಲ ಅಂತ ಎಲ್ಲರಿಗೂ ಅರ್ಥವಾದರೆ ನಮ್ಮ ದೇಶದಲ್ಲಿ ನಿರುದ್ಯೋಗ ಸಮಸ್ಯೆ ಬಹಳ ಮಟ್ಟಿಗೆ ಪರಿಷ್ಕಾರವಾಗುತ್ತೆ."

"ಅಲ್ಲವೇ ಮತ್ತೆ? ಅಂಥಾ ಸಮಸ್ಯೆಗಳ ಪರಿಷ್ಕಾರಕ್ಕೇ ಅಂತಲೇ ನಿನ್ನಂಥಾ ಮೇಧಾವಿಗಳನ್ನ ಸೃಷ್ಟಿಸಿದಾನೆ ಭಗವಂತ.

ಪ್ರಕಾಶ ತನ್ನ ಕ್ರಾಪಿನಲ್ಲಿ ಕೈಯಾಡಿಸಿ ಸವರಿಕೊಳ್ಳುತ್ತಾ, "ಅಣ್ಣಾ, ನೀನು ತಮಾಷೆಗೆ ಅಂತಿದೀಯಾ, ಆದರೆ ಈ ತಲೇಲಿ ಎಂತೆಂಥಾ ಅದ್ಭುತ ಆಲೋಚನೆಗಳು ಹುಟ್ಟುತ್ತಿರುತ್ತವೆ, ಅಂತೀಯ! ಒಂದು ಓದಿನ ವಿಷಯ ಕೇಳಬೇಡ" ಎಂದ.

ಪ್ರಕಾಶನ ಮಾತಿಗೆ ಎಲ್ಲರೂ ನಕ್ಕರು. ಶ್ರೀಹರಿ ಸಹ ನಕ್ಕು "ಹೋಗೋ ತಲೆಹರಟೆ, ಈ ವರ್ಷನಾದರೂ ಚೆನ್ನಾಗಿ ಓದಿ ಪಾಸಾಗೋ ಪ್ರಯತ್ನ ಮಾಡು" ಎಂದ.

"ಅಣ್ಣಾ, ದಯವಿಟ್ಟು ಅದನ್ನು ಮಾತ್ರ ಹೇಳಬೇಡ. ಈ ಓದು ನನ್ನ

ತಲೆಗೆ ಹಚ್ಕೊಳ್ಳಲ್ಲ. ನಾನಾಗಲೇ ಪ್ಲಾನುಹಾಕಿದೀನಿ. ಕೆಲವು ದಿನಗಳಲ್ಲಿಯೇ ಸಂಪಾದನೆ ಪ್ರಾರಂಭಿಸ್ತೀನಿ."

"ನಿನ್ನ ಮುಖ ನೋಡಿ ನಿನಗೆ ಕೆಲಸ ಕೊಡೋ ದಡ್ಡರು ಯಾರಪ್ಪಾ?"

"ಒಬ್ಬರು ಕೊಡೋದೇನು ಬಂತು? ನಾವೇ ಸೃಷ್ಟಿಸಿದರೆ ಆಯಿತು."

"ನಿಜವೇನೋ ಪ್ರಕಾಶಾ?" ಅದುವರೆವಿಗೂ ಬಿಟ್ಟಕಣ್ಣು ಬಿಟ್ಟಂತೆ ನಿಂತು ಪ್ರಕಾಶನ ಮಾತುಗಳನ್ನು ಕೇಳುತ್ತಿದ್ದ ಕನಕ ಪ್ರಶ್ನಿಸಿದಳು.

"ಮತ್ತೆ ಏನೂಂದ್ಕೊಂತಾ ಇದೀರತ್ತಿಗೇ. ಇನ್ನು ಪ್ರಕಾಶ ಸಂಪಾದನೆಗಾರ ಆದಾಂತಲೇ ಲೆಕ್ಕ. ಜೇಬಿನಲ್ಲಿ ದುಡ್ಡು ಗಲಗಲಾ ಅನ್ನುತ್ತೆ."

"ನಿಜಾನೇನೋ?" ನಂಬಲಾರದೆ ಮತ್ತೆ ಕೇಳಿದಳು ಕನಕ.

"ನಿಮಗೆ ಅನುಮಾನ ಏಕತ್ತಿಗೇ? ನಾನೆಂದಾದರೂ ನಿಮ್ಮೊಂದಿಗೆ ಸುಳ್ಳು ಹೇಳಿದೇನೆಯೇ?"

ಪುಟ್ಟ ಮೈದುನ ಚಿಕ್ಕ ವಯಸ್ಸಿನಲ್ಲಿಯೇ ಸಂಪಾದನಾಪರನಾಗುತ್ತಿದಾನೆಂದು ಕೇಳಿ ಕನಕಳ ಸಂತೋಷಕ್ಕೆ ಪಾರವಿಲ್ಲದಂತಾಯಿತು. "ನೋಡಿದಿರಾ ಅತ್ತೆ, ಇನ್ನೂ ಹುಡುಗ ಅಂದುಕೊಳ್ತಿರೋ ಪ್ರಕಾಶ ಆಗಲೇ ಎಷ್ಟು ದೊಡ್ಡವನಾಗಿಬಿಟ್ಟಾಂತ. ಅಣ್ಣನಿಗಿಂತ ಮುಂಚೆ ತಾನೇ ಸಂಪಾದಿಸ್ತಾನಂತೆ. ಹೇಗೆ ಸಂಪಾದಿಸ್ತಾನೋ ಏನೋ ನೋಡಬೇಕು. ಅದಕ್ಕೇ ಹೇಳ್ತಾರೆ ಕುಳ್ಳರಿಗೆ ಕೊಳ್ಳದಷ್ಟು ಬುದ್ಧಿ ಅಂತ. ಅತ್ತೆ, ನಾನೊಂದು ಮಾತು ಹೇಳ್ತೀನಿ ಕೇಳಿ. ನೀವು ಪ್ರಕಾಶನ್ನ ಕುರಿತು ಏನೂ ಚಿಂತೆ ಮಾಡಬೇಕಾಗಿಲ್ಲ. ಹೇಗೋ ಹಾಗೆ ತನ್ನ ಬದುಕು ತಾನು ನೋಡಿಕೊಳ್ಳಬಲ್ಲ."

"ಭೇಷ್, ಅತ್ತಿಗೆ ಭೇಷ್, ಅಕ್ಷರ ಲಕ್ಷ ಬೆಲೆ ಬಾಳುವಂಥಾ ಮಾತಾಡಿದಿರಿ. ನನ್ನ ಹತ್ತಿರ ಹಣ ಇದ್ದಿದ್ದರೆ ನಿಮಗೆ ಕನಕಾಭಿಷೇಕ ಮಾಡಿಸ್ತಾ ಇದ್ದೆ. ನಾನೇ ಕವಿಯಾಗಿದಿದ್ದರೆ ನಿಮ್ಮನ್ನು ನಾಯಿಕೆಯನ್ನಾಗಿ ಮಾಡಿ ಕಾವ್ಯ ರಚಿಸುತ್ತಿದ್ದೆ. ದುರದೃಷ್ಟ, ಆ ಎರಡೂ ಇಲ್ಲ ನನ್ನಲ್ಲಿ" ಎಂದ ಪ್ರಕಾಶ ಚಿಂತಾಕ್ರಾಂತನಂತೆ ಮುಖ ಮಾಡಿ.

"ಆಹಾ! ಅಪರ ಭೋಜರಾಜ, ಅವತಾರ ತಾಳಿದಾನೆ ಅತ್ತಿಗೆಗೆ ಅಕ್ಷರ ಲಕ್ಷ ಕೊಟ್ಟು ಕನಕಾಭಿಷೇಕ ಮಾಡಿಸ್ತಾನಂತೆ. ನಿನ್ನಲ್ಲಿ ಬಿದ್ದ ತಂಗಿ, ಎರಡು ದಿನದಿಂದ ಮಲ್ಲಿಗೆ ಹೂ ತಾರೋ ಅಂತಿದೀನಿ, ಅದಕ್ಕೆ ಗತಿ ಇಲ್ಲ" ಎಂದು ಚುಚ್ಚಿ ನುಡಿದಳು ಶಾಂತ.

"ಒಂದೆರಡು ದಿನ ತಾಳೇ ಶಾಂತಾ. ನೀನು ಬೇಕೂಂದಷ್ಟು ಮಲ್ಲಿಗೆ ಹೂ ದಿನಾ ತಂದುಕೊಡ್ತೀನಿ."

"ಹಾಗಾದರೆ ಹೂವೆಲ್ಲಾ ತಂಗಿಗೇನೋ, ನಮಗೂ ಉಂಟೋ?"

"ಯಾರಾದರೂ ನಿಮ್ಮ ನಂತರವೇ ಅತ್ತಿಗೇ." ಪ್ರಕಾಶ ಪ್ರೀತಿ, ಅಭಿಮಾನಗಳಿಂದ ಅತ್ತಿಗೆಯ ಕಡೆ ನೋಡುತ್ತಾ ನುಡಿದ.

"ನಂಗೆಲ್ಲಾ ಗೊತ್ತು ಬಿಡಪ್ಪಾ. ನಿಮ್ಮಾಕೆ ಬರೋವರೆಗೇನೇ ಈ ಮಾತೆಲ್ಲಾ" ಎಂದು ಛೇಡಿಸಿದಳು ಕನಕ.

* * *

ಯಾವ ವಿಷಯವನ್ನಾದರೂ ಹತ್ತು ನಿಮಿಷಗಳ ಕಾಲ ಸ್ಥಿರವಾಗಿ ಮನಸಿನಲ್ಲಿಟ್ಟುಕೊಳ್ಳಲಾರದ ಪ್ರಕಾಶ ಕಳೆದ ಒಂದು ತಿಂಗಳಿನಿಂದ ಒಂದು ವಿಷಯವನ್ನು ಕುರಿತು ದೀರ್ಘವಾಗಿ ಆಲೋಚಿಸಲಾರಂಭಿಸಿದ್ದ. ಮನೆಯಲ್ಲಿ ಯಾರೊಂದಿಗೂ ಆ ವಿಷಯವನ್ನು ಹೇಳಿರದಿದ್ದರೂ ಸ್ನೇಹಿತರೊಂದಿಗೆ ಹೇಳಿ ಸಲಹೆ ಕೇಳಿದ್ದ. ಕೆಲವರು ಪ್ರಕಾಶ ಹೇಳಿದ್ದನ್ನು ಕೇಳಿದ ಕೂಡಲೇ ನೋಡ ಬಾರದ ವಸ್ತುವನ್ನು ನೋಡಿದಂತೆ ಕೇಳಬಾರದ ಮಾತನ್ನು ಕೇಳಿದಂತೆ ತಿರಸ್ಕಾರದೃಷ್ಟಿ ಬೀರಿದರು. ಇನ್ನು ಕೆಲವರು ಎದುರಿಗೇ ಏನೂ ಅನ್ನದಿದ್ದರೂ "ಓದು ಹತ್ತದ ಮೇಲೆ ಇನ್ನೇನು ಮಾಡುತ್ತಾನೆ? ಅವನ ಹಣೇಲಿ ಈ ಥರಾ ಬರೆದಿದೇಂತ ನಮಗೆ ಮೊದಲೇ ಗೊತ್ತಿತ್ತು" ಎಂದು ಹಿಂದೆ ಆಡಿಕೊಂಡರು.

"ನಮ್ಮಿಷ್ಟ ಬಂದ ಹಾಗೆ ನಾವು ಬದುಕ್ತೀವಿ ಅನ್ನೋಕಾಗೊಲ್ಲಪ್ಪಾ, ಪ್ರಕಾಶ. ನಾಲ್ಕು ಜನರ ಮಧ್ಯೆ ಬದುಕ್ತಿರೋರು ನಾವು. ಒಂದು ಕೆಲಸ ಮಾಡೋ ಮುಂಚೆ ಎಷ್ಟೋ ವಿಷಯಗಳನ್ನ ಆಲೋಚಿಸಬೇಕಾಗುತ್ತದೆ. ನಿನ್ನ ವಿಷಯ ನಿನಗೊಬ್ಬನಿಗೇ ಸಂಬಂಧಿಸಿದ್ದಲ್ಲ. ನಿನ್ನ ಮನೆಯವರಿಗೆಲ್ಲಾ ಸಂಬಂಧಿಸಿದ್ದು. ಚೆನ್ನಾಗಿ ಆಲೋಚಿಸಿ ನಿರ್ಣಯಿಸಿಕೋ" ಎಂದು ಕೆಲವರು ಹಿತೈಷಿಗಳು ಸಲಹೆ ಕೊಟ್ಟರು.

ಶಾಂತ ಅಣ್ಣನೊಡನೆ ವಾದಿಸಿ, ಜಗಳವಾಡಿ ಕಾಲೇಜಿಗೆ ಸೇರಿದ್ದಳು. ಮನೆಯಲ್ಲಿ ಎಲ್ಲರೂ ಅವಳ ಕಡೆಯೇ ಮಾತನಾಡಿದುದರಿಂದಲೂ, ತಾನು ಬೇಡವೆಂದರೂ ಅವಕ್ಕೆ ಬೆಲೆ ಇರುವುದಿಲ್ಲವೆಂಬುದನ್ನರಿತು ಒಪ್ಪಿಕೊಂಡಿದ್ದ ಶ್ರೀಹರಿ. ಆದರೆ ಶಾಂತನಿಗೆ ವರನಿಶ್ಚಯವಾದಾಗ ಓದು ಅರ್ಧದಲ್ಲಾದರೂ ಸರಿ ನಿಲ್ಲಿಸಿಬಿಡಬೇಕೆಂದು ಷರತ್ತು ಹಾಕಿದ. ಅಕ್ಕನ ಸಲಹೆಯಂತೆ ಶಾಂತ ಅದಕ್ಕೆ ಒಪ್ಪಿಕೊಂಡಿದ್ದಳು. "ಈ ಕಾಲದಲ್ಲಿ ಮದುವೆ ಅಂದರೆ ಸುಮ್ಮನೆ ಆಯಿತೇ? ಎಷ್ಟು ಜನ ಕಾಲು ಹಿಡಿಯಬೇಕು. ಎಷ್ಟು ಹಣಹೊಂದಿಸಿಕೋಬೇಕು. ಅಣ್ಣ ಎಲ್ಲಾ ಹೊಂದಿಸಿಕೊಳ್ಳುವ ಹೊತ್ತಿಗೆ ನಿನ್ನ ಓದು ಹೇಗೂ ಪೂರ್ತಿಯಾಗುತ್ತೆ.

ಈಗ ಸುಮ್ಮನೆ ವಾದಿಸದೆ ಒಪ್ಪಿಕೋ" ಎಂದಿದ್ದಳು ಜಾನಕಿ.

ಮದುವೆ ಮಾರ್ಕೆಟ್ಟಿನಲ್ಲಿ ಮದುವೆ ಗಂಡಿನ ಬೆಲೆ ಆಕಾಶಕ್ಕೇರುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿ ತಂಗಿಗೆ ಹೊಟ್ಟೆಗಿಷ್ಟು ಹಾಕುವಷ್ಟು ಅರ್ಹತೆಯುಳ್ಳ ವರನನ್ನು ತರುವುದು ಅಷ್ಟೇನು ಸುಲಭವಾಗಿ ಕಾಣಲಿಲ್ಲ ಶ್ರೀಹರಿಗೆ. ಎಲ್ಲರನೂ ವ್ಯತಿರೇಕಿಸಿ ಶಾಂತಾಳ ಓದು ನಿಲ್ಲಿಸಿದರೆ ತನಗೆ ಬರೀ ನಿಂದೆಯೇ ಹೊರತು ಮತ್ತೇನೂ ಸಿಗಲಾರವೆಂದು ಶ್ರೀಹರಿಗೆ ಅರ್ಥವಾಗಿತ್ತು. ಹತ್ತುದಿನಗಳ ಹಿಂದೆ ಅವನು ನೋಡಿಬಂದ ಸಂಬಂಧ ಸಹ ವರದಕ್ಷಿಣೆ ಸಾಲದೆಂಬ ನೆಪದಿಂದ ಮುರಿದುಬಿದ್ದಿತು. ಹುಡುಗಿ ಎಷ್ಟು ರೂಪವತಿಯಾದರೂ ರೂಪ ನೋಡಿ ವರದಕ್ಷಿಣೆ ಕಡಿಮೆ ಮಾಡಿಕೊಳ್ಳುವಷ್ಟು ಮೂರ್ಖರು ಯಾರೂ ಇರುವುದಿಲ್ಲ ಎಂಬ ಸತ್ಯ ಮತ್ತೊಂದು ಬಾರಿ ಮನವರಿಕೆಯಾಗಿತ್ತು ಶ್ರೀಹರಿಗೆ.

"ಇನ್ನು ಶಾಂತಳ ಮದುವೆಯ ಬಗ್ಗೆ ಅವನಿಗಿದ್ದ ಆಶಾಕಿರಣ ಒಂದೇ. ಈ ಎರಡು ವರ್ಷ ಕಳೆದು ಸಾಂಬಶಿವ ಬಿ.ಎ. ಪಾಸಾದರೆ ವಕೀಲ ರಾಮರಾಯರು ಅವರ ಮಗಳನ್ನು ಕೊಟ್ಟು ಮದುವೆ ಮಾಡಿ ಅಳಿಯನನ್ನು ಬಿ.ಎಲ್.ಗೆ ಓದಿಸುತ್ತೇನೆಂದು ಹೇಳಿದ್ದರು. ಅವರು ಶಾಂತನ ಮದುವೆಗೆ ಒಂದಿಷ್ಟು ಸಹಾಯ ಮಾಡದೆ ಇರಲಾರರು. ಸಾಂಬು ಬಿ ಎಲ್. ಪಾಸಾಗಿ ವಕೀಲನಾದರೆ ಆ ಸಾಲ ತೀರಿಸುವುದೇನೂ ಕಷ್ಟವಾಗಲಾರದು. ಹೇಗೆ ಲೆಕ್ಕ ಹಾಕಿದರೂ ಶಾಂತನ ಮದುವೆ ಸಾಂಬು ಓದಿನೊಂದಿಗೆ ಗಂಟುಬಿದ್ದಿತು. ಆದ್ದರಿಂದ ಅದುವರೆವಿಗೂ ಶಾಂತ ಕಾಲೇಜಿಗೆ ಹೋಗಿಬರುತ್ತಿರಲಿ ಎಂದುಕೊಂಡ ಶ್ರೀಹರಿ.

ಮನೆಯವರೆಲ್ಲಾ ಎಷ್ಟು ಹೇಳಿದರೂ ಪ್ರಕಾಶ ತನ್ನ ಓದನ್ನು ಮುಂದುವರಿಸಲು ಇಷ್ಟಪಡಲಿಲ್ಲ. "ನನಗೆ ಓದು ಬೇಡವೋ ದೇವರೇ ಅಂದರೆ ಓದು ಅಂತೀರಲ್ಲಾ. ಶಾಂತ ಓದುತ್ತೀನಿ ಅಂದರೆ ನೂರೆಂಟು ಅಡ್ಡಿ ಹೇಳುತ್ತೀರಿ. ಎಂಥ ಮನುಷ್ಯರು ನೀವು?" ಎಂದ ಪ್ರಕಾಶ.

"ಶಾಂತ ಹೆಣ್ಣುಮಗು ಕಣೋ. ಓದಿದರೂ ಓದದಿದ್ದರೂ ಅವಳ ಬದುಕು ಸರಾಗವಾಗಿ ಕಳೆಯುತ್ತೆ. ನೀನು ಗಂಡು. ಓದಿಲ್ಲದೆ ಹೇಗೆ ಬಾಳುತ್ತೀಯಪ್ಪಾ" ಎಂದರು ಸುಂದರಮ್ಮ.

"ಅದೇ ಬೇಡಾನ್ನೋದು. ವಿದ್ಯೆಯಿಂದ ಏನಾದರೂ ಉಪಯೋಗ ಇದೆ ಅನ್ನೋದೇ ನಿಜವಾದರೆ ಅದು ಹೆಣ್ಣು-ಗಂಡು ಅನ್ನೋ ವ್ಯತ್ಯಾಸವಿಲ್ಲದೆ ಎಲ್ಲರಿಗೂ ಸಮಾನವಾಗಿ ವರ್ತಿಸುತ್ತೆ. ವಿದ್ಯೆ ಕೇವಲ ಕೆಲಸ ಮಾಡುವವರಿಗೋಸ್ಕರ ಅಂದುಕೊಂಡರೂ ಈ ಕಾಲದಲ್ಲಿ ಅದು ಹೆಣ್ಣುಮಕ್ಕಳಿಗೂ ಬೇಕೇ

ಬೇಕು ಅನ್ನೋಕೆ ಅಕ್ಕನೇ ಉದಾಹರಣೆ."

ಸುಂದರಮ್ಮ ಮನಸ್ಸಿನಲ್ಲಿಯೇ ನೊಂದುಕೊಂಡರು. ಎಲ್ಲರೂ ಶಾಂತ ನನ್ನು ಅಕ್ಕನೊಂದಿಗೆ ಹೋಲಿಸುವುದು ಆಕೆಗೆ ಸರಿಬರುತ್ತಿರಲಿಲ್ಲ. 'ಗಂಡ ಬಿಟ್ಟು ತೌರಿನಲ್ಲಿ ಕಾಲಕಳೆಯುತ್ತಿರುವ ಜಾನಕಿಯೊಂದಿಗೆ, ಹಾಯಾಗಿ ಮದುವೆಯಾಗಿ ಗಂಡನೊಂದಿಗೆ ಸುಖ ಸಂಸಾರ ಮಾಡಬೇಕಾದ ಶಾಂತನಿ ಗೆಂಥಾ ಹೋಲಿಕೆ?' ಎಂದುಕೊಂಡರು.

"ಹೋಗಲಿ ಬಿಡಮ್ಮ. ಅವನಿಗಷ್ಟು ಓದು ಬೇಡವೆನಿಸಿದ್ದರೆ ಬೇಡ. ಅವನ ಬದುಕು ಅವನು ಬದುಕಿದರೆ ಸರಿ. ಅವನ ಬಾಳನ್ನು ಅವನು ನೇರ ಮಾಡಿಕೊಳ್ತಿತ್ತೇನೆಂದರೆ ನಾವೇಕೆ ಅಡ್ಡಿ ಮಾಡೋಣ?" ಎಂದಳು ಜಾನಕಿ.

"ಅದೂ ಹೇಗೂ ಅವನ ಮುಖದಮೇಲೇ ಕಾಣುತ್ತಿದೆ. ರಟ್ಟೆಮುರಿಯ ಕೆಲಸಮಾಡಿ, ಬೆವರು ಹರಿಸಿ ಬದುಕಬೇಕಷ್ಟೆ" ಎಂದಳು ಶಾಂತ.

ಅದುವರೆವಿಗೂ ಬಿಸಿಲಿನಲ್ಲಿ ಸುತ್ತಿ ಬಂದಿದ್ದ ಪ್ರಕಾಶನ ಮುಖ ಕೆಂಪ ಗಾಗಿತ್ತು. ಹಣೆಯ ಮೇಲೆ ಬೆವರು ಸಾಲಿಟ್ಟಿತ್ತು.

"ನಿಜವೇನೇ ಶಾಂತಾ, ನನ್ನ ಬದುಕು ನನ್ನ ಮುಖದಮೇಲೆ ಕಾಣು ತ್ತಿದೆಯೇನು? ನಮ್ಮೆಲ್ಲರಿಗಿಂತ ಚಿಕ್ಕವಳು. ನಿನ್ನ ಮಾತು ನಿಜವಾಗಲಿ. ಇದೋ ಹೊರಟೆ. ಫೈಸಲ್ ಮಾಡಿಕೊಂಡೇ ಬರ್‍ತೀನಿ" ಎಂದು ನಗುತ್ತಾ ಉತ್ಸಾಹದಿಂದ ಹೊರಕ್ಕೆ ಓಡಿದ.

ಹಾಗೆ ಓಡಿದ ಓಟ ಸಿಗರೆಟ್, ಬೀಡಿ ಮಾರುತ್ತಿದ್ದ ಅಪ್ಪಣ್ಣನ ಚಿಲ್ಲರೆ ಅಂಗಡಿಯವರೆಗೂ ನಿಲ್ಲಲಿಲ್ಲ. "ಏನು ಸ್ವಾಮೇರು ಬಿಸಿಲಾಗೆ ಬಂದಿರಲ್ಲಾ, ಏನು ವಿಶೇಷ?" ಎಂದ ಅಪ್ಪಣ್ಣ.

"ಏನಿಲ್ಲ ಅಪ್ಪಣ್ಣಾ. ನಿನ್ನ ಹತ್ತಿರ ಸ್ವಲ್ಪ ಕೆಲಸ ಇದ್ದು ಬಂದೆ. ಈಗಾದರೆ ಗಲಾಟೆ ಹೆಚ್ಚಿರೋಲ್ಲ. ನಿಧಾನವಾಗಿ ಮಾತನಾಡಬಹುದೂಂತ. ಎಲ್ಲಿ ಸ್ವಲ್ಪ ನೀರು ಕೊಡು. ಮುಖ ತೊಳೆದುಕೊಂಡು ಬರ್‍ತೀನಿ" ಎಂದ ಪ್ರಕಾಶ.

ಅಪ್ಪಣ್ಣ ಅಲ್ಯೂಮಿನಿಯಂ ಡಬ್ಬಾದಲ್ಲಿ ಮಡಿಕೆಯಲ್ಲಿನ ನೀರನ್ನು ತುಂಬಿಕೊಟ್ಟ. ಬಳಲಿಕೆ ತೀರುವಂತೆ ಒಂದೆರಡು ಸಲ ಮುಕ್ಕಳಿಸಿ ಚೆನ್ನಾಗಿ ಮುಖ ತೊಳೆದುಕೊಂಡು ಬಂದ ಪ್ರಕಾಶ.

"ಸೋಡಾ ಕುಡೀತೀರಾ ಸಾವಿಾ. ಐಸ್ ಪೆಟ್ಟಿಗೇಲಿ ಮಡಗಿವ್ನಿ" ಎಂದ ಅಪ್ಪಣ್ಣ ಪೆಟ್ಟಿಗೆ ಮುಚ್ಚಳ ತೆಗೆಯುತ್ತ.

ಪ್ರಕಾಶನ ಕೈ ಜೇಬಿನೊಳಕ್ಕೆ ಹೋಗಿ ಹಿಂದಕ್ಕೆ ಬಂತು.

"ಬೇಡ ಅಪ್ಪಣ್ಣಾ. ಸ್ವಲ್ಪ ನೀರು ಕೊಡು" ಎಂದ.

"ದುಡ್ಡಿಗೇನಂತೆ ಸಾಮಿ. ನಾಳೆ ಕೊಡೋವಿರಂತೆ."

ಅಪ್ಪಣ್ಣ ಪೆಟ್ಟಿಗೆಯೊಳಗಿನಿಂದ ಸೋಡಾ ತೆಗೆದು ಮುಚ್ಚಳ ತೆಗೆದು ಕೊಟ್ಟ. ಅನಂತರ ಇಬ್ಬರೂ ಮಾತನಾಡಲಾರಂಭಿಸಿದರು. ಪ್ರಕಾಶ ತಾನು ಬಂದ ವಿಷಯ ಹೇಳಿದ.

"ಒಂದು ವಿಷಯದಲ್ಲಿ ನಿನ್ನ ಸಲಹೆ ಕೇಳೋಣಾಂತ ಬಂದೆ."

"ನನ್ನ ಹಾಸ್ಯ ಮಾಡ್ತಿದೀರಾ ಸಾಮಿ. ನೀವು ಓದ್ದೋರು. ತಮಗೆ ನಾವು ಸಲಹೆ ಕೊಡೋದಾ?"

"ಇದು ಓದಿಗೆ ಸಂಬಂಧಪಟ್ಟ ವಿಷಯ ಅಲ್ಲ ಅಪ್ಪಣ್ಣಾ. ಅನುಭವಕ್ಕೆ ಸಂಬಂಧಿಸಿದ್ದು. ಅದೂ ಅಲ್ಲದೆ ನಿನ್ನ ಸಹಾಯ ಕೂಡಾ ಬೇಕು" ಎಂದ ಪ್ರಕಾಶ.

"ಹೇಳಿ ಸಾಮಿ. ನಂಗೆ ತಿಳಿದದ್ದು ನಾನೂ ಹೇಳ್ತೀನಿ" ಎಂದ ಅಪ್ಪಣ್ಣ, ಸರಿಯಾಗಿ ಕುಳಿತುಕೊಳ್ಳುತ್ತ.

ಎಲ್ಲಿಂದ ಮೊದಲು ಮಾಡಬೇಕೋ ತೋಚಲಿಲ್ಲ ಪ್ರಕಾಶನಿಗೆ ಎಲ್ಲಿಂದ ಮೊದಲು ಮಾಡಿದರೂ ಕೊನೆಗೆ ಸೇರುವುದು ತಿಂಡಿ, ಹಣ, ಬದುಕು, ಅಲ್ಲಿಗೇ ತಾನೇ? ಅಲ್ಲಿಂದಲೇ ಪ್ರಾರಂಭಿಸೋಣ ಎಂದುಕೊಂಡ ಪ್ರಕಾಶ.

"ಆ ದಿನ ರೇಷನಿಂಗ್ ಷಾಪಿನಲ್ಲಿ, ದುಡ್ಡಿಲ್ಲದೆ...."

ಪ್ರಕಾಶ ಹೇಳುತ್ತಿದ್ದಷ್ಟು ಹೊತ್ತೂ ಅಪ್ಪಣ್ಣ ಮೌನವಾಗಿ ಕೇಳಿದ. ಅನಂತರ ಅದರಲ್ಲಿನ ಕಷ್ಟನಿಷ್ಠೂರಗಳನ್ನು ತನಗೆ ತೋರಿದಂತೆ ಆಲೋಚಿಸಿದ.

"ನೀವು ಹೇಳೋದೆಲ್ಲಾ ಚೆನ್ನಾಗೆ ಇದೆ. ನಮ್ಮಂಥೋರು ಏನು ಮಾಡಿದರೂ ಯಾರೂ ಏನೂ ಅನ್ನೋಲ್ಲ. ಆದರೆ ನಿಮ್ಮಂಥ ದೊಡ್ಡ ಮನೆತನಕ್ಕೆ ಸೇರಿದೋರು...."

"ಮನೆತನ ಕಟ್ಟಿಕೊಂಡೇನು ಮಾಡ್ತೀವಿ ಅಪ್ಪಣ್ಣಾ. ಹಾಗಂತ ನಮ್ಮನ್ನು ನಾವು ಮೋಸಮಾಡಿಕೊಳ್ಳೋದರ ಹೊರತು, ಬೇರೇನಿಲ್ಲ. ಆ ದಿನ ರೇಷನ್ ಷಾಪಿನಲ್ಲಿ ಅಂಗಡಿಯವನು ನಮ್ಮ ಮನೆತನ ನೋಡಿ ಅಕ್ಕಿ ಕೊಟ್ಟ ನೇನು? ನಾನು ಕೊಟ್ಟ ಹಣ ಎಣಿಸಿಕೊಂಡು ಅಕ್ಕಿ ಕೊಟ್ಟ. ಈ ಕಾಲದಲ್ಲಿ ಎಲ್ಲಾ ಧನಲಕ್ಷ್ಮಿ ಮಹಿಮೆ ಅಪ್ಪಣ್ಣಾ."

"ಅದು ಸರಿ, ಈಗ ನನ್ನನ್ನೇನು ಮಾಡೂಂತೀರಿ?"

ಅಪ್ಪಣ್ಣ ಮಾಡಬೇಕಾದ್ದನ್ನು ಹೇಳಿದ ಪ್ರಕಾಶ.

"ಹಾಗೇ ಆಗಲಿ ಸಾಮಿ. ನನ್ನ ಕೈಲಾದನ್ನ ನಾನೂ ಮಾಡ್ತೀನಿ." ಎಂದ ಅಪ್ಪಣ್ಣ.

ಅಪ್ಪಣ್ಣನಿಂದ ಭರವಸೆ ಪಡೆದ ಪ್ರಕಾಶ ಉತ್ಸಾಹದಿಂದ ಶಿಳ್ಳೆಹಾಕುತ್ತಾ ಹೊರಗೆ ಬಂದ. ಈ ದಿನ ಶಾಂತನಿಗೆ ಮಲ್ಲಿಗೆ ಹೂ ಕೊಳ್ಳಬೇಕೆನಿಸಿತು. ಅಷ್ಟರಲ್ಲಿ ಜೇಬು ಖಾಲಿ ಎಂಬ ವಿಷಯ ನೆನಪಾಗಿ ಹಿಂತಿರುಗಿ ಅಪ್ಪಣ್ಣನ ಬಳಿ ಇಪ್ಪತ್ತೈದು ಪೈಸೆ ತೆಗೆದುಕೊಂಡು,

"ನೋಡಾ ಹಣ, ಇದೂ ನಾಳೆ ಕೊಡ್ತೀನಿ ಅಪ್ಪಣ್ಣಾ" ಎಂದ.

"ಏನವಸರ ಬಿಡಿ ಸಾಮಿ" ಎಂದ ಅಪ್ಪಣ್ಣ.

"ಅಷ್ಟೇ ಅನ್ನು. ಇದೇ ನಿನ್ನ ಹತ್ತಿರ ಸಾಲಕ್ಕೆ ವಿಘ್ನೇಶ್ವರನ ಪೂಜೆ ಅಂದುಕೊಳ್ಳೋಣ" ಎಂದ ಪ್ರಕಾಶ ನಗುತ್ತಾ.

ದುಡ್ಡು ತೆಗೆದುಕೊಂಡು ಪ್ರಕಾಶ ಹೊರಟುಹೋದ.

'ಸ್ವಾಮೇರು ಒಳ್ಳೇವರು. ಚುರುಕುಬುದ್ಧಿ. ಆದ್ರೇನು, ಓದು ತಲೆಗೆ ಹತ್ತಲಿಲ್ಲ, ಪಾಪ' ಎಂದುಕೊಂಡ ಅಪ್ಪಣ್ಣ.

ಕೆಲವರೊಂದಿಗೆ ಸ್ನೇಹ ನಮಗೆ ತಿಳಿಯದಂತೆಯೇ ಬೆಸೆದುಕೊಳ್ಳುತ್ತದೆ. ಕೆಲವರೊಂದಿಗಿನ ಪರಿಚಯ ಎಷ್ಟು ಪ್ರಯತ್ನಿಸಿದರೂ ಮುಖ ಪರಿಚಯವಾಗಿಯೇ ಉಳಿಯುತ್ತದೆಯೇ ಹೊರತು ಸ್ನೇಹವಾಗಿ ಮಾರ್ಪಡುವುದಿಲ್ಲ. ಸ್ನೇಹ ಯಾವಾಗಲೂ ಸಮಾನವಯಸ್ಸರೊಂದಿಗೆ, ಸರಿಸಮಾನವಾದ ಅಂತಸ್ತಿನವರೊಂದಿಗೇ ಇರಬೇಕೆಂಬ ನಿಯಮವೇನಿಲ್ಲ. ಫಲವತ್ತಾದ, ಉತ್ತಭೂಮಿಯಲ್ಲಿ ಬಿದ್ದ ಬೀಜ ಮೊಳಕೆಯೊಡೆದು ಎಷ್ಟು ಚೆನ್ನಾಗಿ ಬೆಳೆಯುತ್ತದೆಯೋ, ಒಂದೊಂದು ಸಲ ಕಲ್ಲುಗುಡ್ಡಗಳ ಮಧ್ಯೆ ತನ್ನಷ್ಟಕ್ಕೆ ತಾನೇ ಬೆಳೆದ ಮೊಳಕೆ ಅದಕ್ಕಿಂತ ಸೊಂಪಾಗಿ ಬೆಳೆಯುವುದುಂಟು. ಹಾಗೆಂದು ಕಲ್ಲುಗುಡ್ಡಗಳ ಮಧ್ಯೆ ಬಿತ್ತನೆ ಹಾಕಬೇಕೆಂದಲ್ಲ.

ಸಮವಯಸ್ಕರ ಮಧ್ಯೆ ಸ್ನೇಹ ಬೆಳೆಯಲು ಬಹಳಷ್ಟು ಅವಕಾಶಗಳಿರುತ್ತವೆ. ಆ ವಯಸಿನಲ್ಲಿ ಶ್ರೀಮಂತರು ಬಡವರು ಎಂಬ ವ್ಯತ್ಯಾಸವಿಲ್ಲದೆ ಎಲ್ಲರ ಆಲೋಚನೆಗಳೂ, ಆಶಯಗಳೂ ಒಂದೇ ರೀತಿ ಇರುತ್ತವೆ. ಕೆಲವರ ಕೋರಿಕೆಗಳು ನೆರವೇರುತ್ತವೆ ಕೆಲವರ ಕೋರಿಕೆಗಳು ನೆರವೇರುವುದಿಲ್ಲ, ಅಷ್ಟೇ ವ್ಯತ್ಯಾಸ.

ಈ ತರಹದ ಹೋಲಿಕೆ ಅಪ್ಪಣ್ಣ-ಪ್ರಕಾಶರ ಮಧ್ಯೆ ಇಲ್ಲದಿದ್ದರೂ ಅವರಿಬ್ಬರ ಪರಿಚಯ ಸ್ನೇಹವಾಗಿ ಮಾರ್ಪಟ್ಟಿತ್ತು. ಅಪ್ಪಣ್ಣನನ್ನು ಪ್ರಕಾಶ ವಿಚಿತ್ರ ಪರಿಸ್ಥಿತಿಯಲ್ಲಿ ಮೊದಲಸಲ ನೋಡಿದ್ದ.

ಸಾಧಾರಣವಾಗಿ ಪೇಟೆಯ ಕೆಲಸ ಪ್ರಕಾಶನೇ ಮಾಡುತ್ತಿದ್ದ. ಆ ದಿನ ಯಾವುದೋ ಕಾರಣದಿಂದ ಪ್ರಕಾಶ ಸ್ಕೂಲಿನಿಂದ ಬರುವುದು ಲೇಟಾಗಿತ್ತು

ಸುಂದರಮ್ಮ ರಾತ್ರಿಗೆ ಅಕ್ಕಿ ಇಲ್ಲ ಎಂದು ಹೇಳಿದ್ದರಿಂದ ಸಾಂಬಶಿವ ಕಾರ್ಡ್, ಚೀಲ ತೆಗೆದುಕೊಂಡು ಪೇಟೆಗೆ ಹೋದ. ಆಗ ಜಾನಕಿ ಇನ್ನೂ ಕೆಲಸ ಮಾಡುತ್ತಿರಲಿಲ್ಲ. ತಿಂಗಳ ಕೊನೆಯಲ್ಲಿ ಮನೆಯಲ್ಲಿ ಸಾಮಾನೂ ಮುಗಿದಿರುತ್ತಿತ್ತು ಹಣವೂ ಇರುತ್ತಿರಲಿಲ್ಲ. ಆ ನಾಲ್ಕುದಿನ ಸಾಲಸೋಲ ಮಾಡಿ ಹೇಗೋ ಕಾಲಹಾಕುತ್ತಿದ್ದರು ಸುಂದರಮ್ಮ. ಒಂದಿಷ್ಟು ಅಕ್ಕಿಯಾದರೂ ಇದ್ದರೆ ಹೇಗೋ ಕಾಲಕಳೆಯುತ್ತದೆಯೆಂದು ನೆರೆಮನೆಯಿಂದ ದುಡ್ಡು ಸಾಲ ತಂದು ಸಾಂಬಶಿವನ ಕೈಲಿಟ್ಟರು ಸುಂದರಮ್ಮ.

ಅರ್ಧ ಮೈಲಿಯವರೆಗೂ ವ್ಯಾಪಿಸಿದ್ದ ಕ್ಯೂನಲ್ಲಿ ಅಂಗಡಿಗೆ ಫರ್ಲಾಂಗ್ ದೂರದಲ್ಲಿ ತನಗೆ ಸ್ಥಳ ಸಿಕ್ಕಿದಕ್ಕೆ ಸಂತೋಷಿಸಿದ ಸಾಂಬಶಿವ. ಅಂಗಡಿ ಬಾಗಿಲು ಮುಚ್ಚುವುದರೊಳಗಾಗಿ ಅಕ್ಕಿ ಸಿಕ್ಕಿದವರಿಗೆ ಪರವಾಗಿಲ್ಲ. ಮಿಕ್ಕವರು ಮಾರನೆಯ ದಿನದವರೆಗೂ ಅಲ್ಲಿಯೇ ಜಾಗರಣೆ ಮಾಡಬೇಕಾದ್ದೇ. ಬೆಳಗ್ಗೆ ಎದ್ದು ನಿಲ್ಲಲೂ ಶಕ್ತಿಯಿಲ್ಲದವರು ಕುಸಿದು ಕೂತರೆ, ಹಿಂದಿನವರು ಅವರನ್ನು ನೂಕಿ ಮುಂದಕ್ಕೆ ಹೋಗಲು ಹಿಂದೆಗೆಯುತ್ತಿರಲಿಲ್ಲ. ಹಸಿವಿನ ಬಾಧೆ ಅಂಥಾದ್ದು ಮತ್ತೆ.

ಹಣವಿಲ್ಲದೆ ಕೆಲವರು ಹಸಿವಿನಿಂದ ಬಳಲುತ್ತಿದ್ದರೆ, ಹಣವಿದ್ದೂ ಕಾಳು ದೊರಕದೆ ಉಪವಾಸ ಇರುವವರು ಕೆಲವರು. ಇಷ್ಟು ಪ್ರಯಾಸಪಟ್ಟು ಅಕ್ಕೀ ಕಾಳು ತೆಗೆದುಕೊಂಡು ಹೋದರೆ, ಎಲೆಯಲ್ಲಿ ಬಡಿಸಿದ ಅನ್ನ ನೋಡಿ ಕಣ್ಣಲ್ಲಿ ನೀರು ಬರುತ್ತಿತ್ತು. ಅದು ಕುಮರೆ ತಿನ್ನುವ ಹುರುಳಿಯ ಕಾಳೋ, ಅಕ್ಕಿಯೋ ಎಂಬ ಅನುಮಾನ ಬರುತ್ತಿತ್ತು—ತಿನ್ನುವವರಿಗೆ.

ಆ ಅಕ್ಕಿ ತರಲೂ ಸಾಹುಕಾರನ ಕೃಪಾಕಟಾಕ್ಷ ಬೇಕಿತ್ತು. ತನಗೆ ಬೇಕಾದವರಿಗೆ ಹಿಂದಿನ ಬಾಗಿಲಿಗೆ ಕರೆದು ಬೇಗ ಕೊಟ್ಟು ಕಳುಹಿಸುತ್ತಿದ್ದ. ಮಿಕ್ಕವರು ದಿನಗಟ್ಟಳೆ ನಿಲ್ಲಬೇಕಾದ್ದೇ. ಶ್ರೀಮಂತರಿಗೆ ಸಲಾಂ ಹೊಡೆಯುತ್ತಾ ಬಡವರನ್ನು ಕಡೆಗಣ್ಣಿನಿಂದ ಕಾಣುತ್ತಿದ್ದ. ಆ ಪ್ರದೇಶಕ್ಕೆಲ್ಲಾ ಅವನೇ ರಾಜ. ಅವನ ಆಜ್ಞೆಯನ್ನು ಎಲ್ಲರೂ ಪಾಲಿಸಬೇಕಾದ್ದೇ.

ನೇರವಾಗಿ ಮುಖದ ಮೇಲೆ ಬೀಳುತ್ತಿದ್ದ ಬಿಸಿಲಿಗೆ ಕೈ ಅಡ್ಡ ಇಟ್ಟು, ತನ್ನ ಸರದಿಗೋಸ್ಕರ ಕಾಯುತ್ತಾ ನಿಂತ ಸಾಂಬಶಿವ. ತನ್ನ ಮುಂದಿದ್ದ ವ್ಯಕ್ತಿ ಹೊರಟುಹೋದ ನಂತರ ರೇಷನ್ ಕಾರ್ಡು ಹಣ ಬೆಂಚಿನ ಮೇಲಿಟ್ಟ. ಶೆಟ್ಟಿ ಕಾರ್ಡಿನ ಕಡೆ ಸಾಂಬಶಿವನ ಕಡೆ ನೋಡುತ್ತ "ಆ ಕುಳ್ಳ ಹುಡುಗನ ಅಣ್ಣನೆ ನೀವು?" ಎಂದು ಕೇಳಿದ.

"ಹೌದು" ಎಂದ ಸಾಂಬಶಿವ.

"ಹೋದ ಸಲ ಸಾಲ ತೆಗೆದುಕೊಂಡು ಹೋದಿರಲ್ಲಾ, ದುಡ್ಡೆಲ್ಲಿ?"

"ಇಲ್ಲವಲ್ಲಾ, ನಾವು ಹಾಗೆ ಬಾಕಿ ಇಡೋಲ್ಲ. ನೀವು ಯಾರನ್ನು ಕುರಿತು ಹೇಳುತ್ತಿದೀರೋ?"

"ಏನು ಸೋಮಿ. ನಂಗಷ್ಟು ಗುರ್ತಿಲ್ಲವೇನೇ ಯಾಪಾರ ಮಾಡ್ತಿದೀನಿ ಅಂತೀರಾ? ಆ ಕುಳ್ಳಗೆ, ಕೆಂಪಗೆ, ಕಾಕಿನಿಕ್ಕರು ಆಕ್ಕೊಂಡಿರ್ತಾರಲ್ಲಾ, ಅವಯ್ಯನ ಎಸರೇನು? ಬಾಯಲ್ಲೇ ಇದೆ ಬರವೊಲ್ಲದು...."

ಶೆಟ್ಟಿ ಹೇಳಿದ ವರ್ಣನೆ ಪ್ರಕಾಶನಿಗೆ ಸರಿ ಹೋಗುವಂತಿತ್ತು. ಆದರೆ ಪ್ರಕಾಶ ದುಡ್ಡೇಕೆ ಕೊಡಲಿಲ್ಲ? ಹಣ ಏನಾಯಿತು? ಹೋದ ಸಲ ರೇಷನ್ ತರಲು ಹೋದಾಗ ಅಣ್ಣ ಪ್ರಕಾಶನ ಕೈಗೆ ದುಡ್ಡು ಕೊಟ್ಟು ಕಳುಹಿಸಿದ್ದನ್ನು ಕಣ್ಣಾರೆ ಕಂಡಿದ್ದ ಸಾಂಬಶಿವ. ಮನೆಯಲ್ಲೇನೂ ಹೇಳಲಿಲ್ಲವಲ್ಲಾ ಎಂದು ಆಲೋಚಿಸುತ್ತಿದ್ದ ಸಾಂಬಶಿವ.

ಪ್ರಕಾಶನ ಹೆಸರನ್ನು ನೆನಪು ಮಾಡಿಕೊಳ್ಳಲು ಒದ್ದಾಡುತ್ತಿದ್ದ ಶೆಟ್ಟಿಯನ್ನು,

"ಪ್ರಕಾಶನೇ?" ಎಂದು ಕೇಳಿದ.

"ಆ, ಅದೇ ಎಸರು, ಆ ಪೆಕಾಶ ನಿಮ್ಮ ತಮ್ಮ ಅಲ್ಲವೆ?"

"ಹೌದು, ಆದರೆ ಅವನು ದುಡ್ಡೇಕೆ ಕೊಡಲಿಲ್ಲ?"

"ಅದು ನಂಗೆಂಗೆ ತಿಳೀತೈತೆ ಸಾಮಿ."

ಈ ಸಂಭಾಷಣೆ ಸಾಂಬಶಿವನಿಗೆ ಬೇಕಾಗಿರಲಿಲ್ಲ. ಹಿಂದೆ ನಿಂತಿದ್ದವರಿಗಂತೂ ಮತ್ತಷ್ಟು ಬೇಸರ ತರಿಸುವಂತಿತ್ತು.

"ಬೇಗ ಆಕ್ಕಿ ತಗೊಂಡು ಹೋಗಯ್ಯಾ. ನಾವಿಲ್ಲಿ ಎಷ್ಟು ಹೊತ್ತು ಕಾಯೋದು?" ಎಂದು ಹಿಂದಿನಿಂದ ನಾಲ್ಕಾರು ಕಂಠಗಳು ಕೂಗಿದವು.

"ನಾನಿಷ್ಟೇ ತಂದದ್ದು. ಸಾಲದ ವಿಷಯ ನನಗೆ ಗೊತ್ತಿಲ್ಲ" ಎಂದ ಸಾಂಬಶಿವ ಮುಖ ಚಿಕ್ಕದು ಮಾಡಿಕೊಂಡು.

ಸಾಂಬಶಿವ ಇಂತಹುದರಲ್ಲಿ ಪಳಗಿದ ಕೈಯಲ್ಲ. ವ್ಯಾಪಾರಮಾಡಿ ವಸ್ತು ಕೊಳ್ಳುವುದರಲ್ಲಾಗಲೀ, ಸಾಮಾನು ತರುವುದಾಗಲೀ ಅವನಿಂದಾಗದ ಕೆಲಸ. ಅದರಲ್ಲೂ ಸಾಲಕೊಡೆಂದು ಕೇಳಬೇಕಾದರೆ ಅವನ ಪ್ರಾಣವೇ ಹೋದಂತೆ ಆಗುತ್ತಿತ್ತು.

ತನ್ನ ಕಾಲೇಜು, ಓದು ಇವೆರಡರ ಹೊರತು ಮತ್ತೇನೂ ತಿಳಿಯದು ಅವನಿಗೆ. ಕಾಲೇಜಿಗೆ ಹೊರಟಾಗ ತಗ್ಗಿಸಿದ ತಲೆ ಮತ್ತೆ ಕಾಲೇಜಿನಲ್ಲೇ ಮೇಲೆತ್ತುತ್ತಿದ್ದ. ಅಭ್ಯಾಸಬಲದಿಂದ ತಲೆತಗ್ಗಿಸಿಕೊಂಡು ಒಂದೇ ದಾರಿಯಲ್ಲಿ

ಹೋಗುತ್ತಿರುವಾಗ ಎದುರಿಗೆ ಬಂದವರಿಗೆ ಡಿಕ್ಕಿ ಹೊಡೆದು ಅವರಿಂದ ಛೀಮಾರಿ ಹಾಕಿಸಿಕೊಳ್ಳುವುದೂ ಉಂಟು. ಎಂದಾದರೂ ಕಾಲೇಜಿನಲ್ಲಿ ತಲೆಯೆತ್ತಿದರೆ "ಅರೆ, ಸಾಂಬೂ, ಕಾಲ ಕೆಳಗೆ ಇರುವೆ ಸಾಯುತ್ತೆ ಕಣೋ. ಕೆಳಗೆ ನೋಡಿಕೊಂಡು ಓಡಾಡು" ಎಂದು ಹುಡುಗರು ಗೇಲಿಮಾಡುತ್ತಿದ್ದರು.

"ಅವನ ಕೊರಳ ನರ ಕಡಿದುಹೋಗಿದೆ ಕಣೋ. ಅದಕ್ಕೇ ಸದಾ ಕೆಳಕ್ಕೆ ಬಾಗಿರುತ್ತೆ. ಪಾಪ, ಅವನೇನು ಮಾಡಬಲ್ಲ?" ಎಂದು ಕೆಲವರು ಕೃತ್ರಿಮ ಸಹಾನುಭೂತಿ ತೋರಿಸುತ್ತಿದ್ದರು.

"ಅದಲ್ಲ ಕಣ್ರೋ. ಕಣ್ಣೆತ್ತಿ ನೋಡಿದರೆ ಕಾಂತಾಮಣಿಯರು ಹಿಂದೆ ಬೀಳ್ತಾರೇಂತ ಭಯ?"

ಯಾರು ಏನಂದರೂ ಸಾಂಬಶಿವ ಕಿವಿಯಮೇಲೆ ಹಾಕಿಕೊಳ್ಳುತ್ತಿರಲಿಲ್ಲ.

"ಅದಕ್ಕೇನು ಬಿಡಿ ಸೋಮಿ" ಎಂದು ಹಣ ಗಲ್ಲಾಪೆಟ್ಟಿಗೆಯಲ್ಲಿ ಹಾಕಿದ ಸೆಟ್ಟಿ.

ಅಕ್ಕಿ ಕೊಡುತ್ತಾನೆಂಬ ಉದ್ದೇಶದಿಂದ ಚೀಲ ಹಿಡಿದ ಸಾಂಬಶಿವ.

"ಇನ್ನೂ ಬಹಳ ಹೊತ್ತಿದೆ. ಮನೆಗೆ ಹೋಗಿ ದುಡ್ಡು ತನ್ನಿ" ಎಂದು ಪಕ್ಕದವನ ಕಾರ್ಡಿಗೆ ಕೈಚಾಚಿದ ಸೆಟ್ಟಿ.

ಈ ದುಡ್ಡನ್ನು ಸರಿಮಾಡಲು ತಾಯಿ ಎಷ್ಟು ಕಷ್ಟಪಟ್ಟಿದ್ದರೋ ಸಾಂಬಶಿವ ನೋಡಿದ್ದ. ಮತ್ತೆ ಈಗ ಹಣ ಬೇಕೆಂದರೆ ಎಲ್ಲಿಂದ ಬರುತ್ತೆ? ಇನ್ನು ಮನೆಯಲ್ಲಿ ಎಲ್ಲರೂ ಉಪವಾಸ ಇರಬೇಕಾದ್ದೇ ಎಂದುಕೊಂಡ ಸಾಂಬಶಿವ. ಕೋಪ ಎನ್ನುವುದನ್ನೇ ಅರಿಯದ ಸಾಂಬಶಿವನಿಗೆ ಆ ನಿಮಿಷದಲ್ಲಿ ತಮ್ಮನ ಮೇಲೆ ಸಿಕ್ಕಾಪಟ್ಟೆ ಕೋಪ ಬಂದಿತ್ತು. ತಿನ್ನುವುದಕ್ಕಿಲ್ಲದೆ ಮನೆಯಲ್ಲಿ ಎಲ್ಲರೂ ಹಸಿದುಕೊಂಡಿರುವಾಗ ರೇಷನ್‌ಗೆ ಕೊಡಬೇಕಾದ ದುಡ್ಡನ್ನು ಸಿನಿಮಾಕ್ಕೋ, ಸಿಗರೇಟಿಗೋ ಖರ್ಚುಮಾಡಿದ ತಮ್ಮನಮೇಲೆ ಅವನಿಗಷ್ಟು ಸಿಟ್ಟು ಬಂದಿತ್ತು. ಮನೆಗೆ ಹೋಗಿ ಅವನಿಗೆ ಸ್ವಲ್ಪ ಜೋರಾಗಿ ಬುದ್ಧಿ ಹೇಳಬೇಕು. ಸ್ವಲ್ಪಾನೂ ಬಾಧ್ಯತೆ ಅನ್ನೋದೇ ತಿಳಿಯದೆಹೋದರೆ ಹೇಗೆ? ಎಂದುಕೊಂಡ.

ಸಾಂಬಶಿವ ಅವಮಾನದಿಂದಲೂ, ನಿರಾಶೆಯಿಂದಲೂ ಹಿಂತಿರುಗುವಷ್ಟರಲ್ಲಿ ಪ್ರಕಾಶ ಓಡುತ್ತಾ ಬಂದು ಅಣ್ಣನ ಕೈಯಿಂದ ರೇಷನ್‌ಕಾರ್ಡು, ಚೀಲ ತೆಗೆದುಕೊಂಡ. ಅಣ್ಣನ ಮುಖ ನೋಡಿದ ಕೂಡಲೇ ಏನು ನಡೆದಿದೆಯೆಂಬುದನ್ನು ಗ್ರಹಿಸಿದ.

"ನಾನು ಅಕ್ಕಿ ತರ್ತೀನಣ್ಣ. ನೀನು ಮನೆಗೆ ಹೋಗು. ಈ ಬಿಸಿಲು ನಿನಗಾಗೊಲ್ಲ. ತಲೆನೋವು ಬರುತ್ತಷ್ಟೆ" ಎಂದ ಪ್ರಕಾಶ. ಮತ್ತೆ ಸಾಂಬಶಿವ ನನ್ನು ಮಾತನಾಡಗೊಡದೆ ಪ್ರಕಾಶ ಕಾರ್ಡು, ಚೀಲ ಕಿತ್ತುಕೊಂಡು ಮುಂದಕ್ಕೆ ಹೋದ. ನೂಕುನುಗ್ಗಲಿನಲ್ಲಿ ಸಾಂಬಶಿವ ಹಿಂದೆಬಿದ್ದ.

"ಏನಯ್ಯಾ, ಒಳ್ಳೆ ಆಸಾಮಿೂನೇ. ನಿಂಗಲ್ಲವಾ ಹೇಳೋದು? ನಿಮ್ಮಣ್ಣ ಕೊಟ್ಟ ದುಡ್ಡು ಹಳೆಬಾಕೀಗೆ ಸರಿಹೋಯ್ತು. ದುಡ್ಡುಮಡಗಿ ಅಕ್ಕಿ ತಗೋ, ನಾನು ಕೊಡೊಲ್ಲ ಅಂದ್ನೇನು?" ಎಂದ ಸೆಟ್ಟಿ ಬೇಸರದಿಂದ.

"ಅದುಸರಿ ಪೋಲಯ್ಯ. ಹಳೆ ಬಾಕಿ ತೀರ್ತ್ತಿಲ್ಲಾ. ಇದನ್ನ ಬೇಗಲೇ ತೀರಿಸ್ತೀನಿ. ತಿಂಗಳಕೊನೆ ನೋಡು...."

"ಎಂಥದಯ್ಯಾ ಇದು. ನೀನೇನೋ ಇಂಗಂತೀಯಾ, ನಿಮ್ಮಣ್ಣ ನಾವು ಸಾಲಾನೇ ತಗೊಳ್ಳೋರಲ್ಲ ಅಂತಾನೆ. ಅದೆಲ್ಲಾ ಎಂಗೋಪ್ಪ. ಇನ್ನು ಸಾಲ ಕೊಡಾಕಿಲ್ಲ" ಖಂಡಿತವಾಗಿ ಹೇಳಿದ ಪೋಲಯ್ಯ.

"ನೋಡಪ್ಪಾ, ನಿನ್ನ ಹಣ ನಾವೇನು ತಿಂದುಹಾಕೊಲ್ಲ. ಸ್ವಲ್ಪ ನಾವೂ ಮಾನಮರ್ಯಾದೆ ಇರೋರೆ. ಏನೋ ಸ್ವಲ್ಪ ಕಷ್ಟದಲ್ಲಿದೀವಿ. ನೀನೂ ತಿಳಿದೋನು. ಅಷ್ಟುನುಟ್ಟಿಗೆ ಮಾಡದಿದ್ದರೆ ಹೇಗೆ?"

"ನಿಮ್ಮ ಮಾನಮರ್ಯಾದೆ ನಿಮ್ಮ ಹತ್ತಿರಾನೇ ಇಟ್ಕೊಳ್ಳಿ. ನನ್ನ ಕೈಲಿ ದುಡ್ಡುಹಾಕಿ ಸಾಮಾನು ತೆಗೊಳ್ಳಿ. ದುಡ್ಡು ಅನ್ನೋಇಷ್ಟೊತ್ತಿಗೆ ಎಲ್ಲಾರೂ ದೊಡ್ಡಮನುಷ್ಯರೇ."

ಪ್ರಕಾಶ ವಿಧಿಯಿಲ್ಲದೆ ಒಂದು ಹೆಜ್ಜೆ ಹಿಂದಕ್ಕಿಟ್ಟ. ಅಷ್ಟರಲ್ಲಿ ಅವನ ಪಕ್ಕದಲ್ಲಿದ್ದ ವ್ಯಕ್ತಿ ಜೇಬಿನಿಂದ ಹಣ ತೆಗೆದು, "ಎಷ್ಟು ಹಣ ಕೊಡಬೇಕಪ್ಪಾ ಇವರ ಕಾರ್ಡಿಗೆ?" ಎಂದ.

ಶೆಟ್ಟಿ ಒಂದು ಕ್ಷಣ ಆಶ್ಚರ್ಯದಿಂದ ಅವನ ಕಡೆ ನೋಡಿ "ಐದೂವರೆ" ಎಂದ.

ಆರು ರೂಪಾಯಿ ಬೆಂಚಿನ ಮೇಲಿಟ್ಟು "ಉಂ. ಅಳಿ ಬೇಗ" ಎಂದ. ಇದು ಯಾರಪ್ಪಾ ಎಂದು ನೋಡುತ್ತಿದ್ದ ಪ್ರಕಾಶನೊಂದಿಗೆ "ಚೀಲ ಹಿಡೀರಿ ಸೋಮಿೂ" ಎಂದ.

ಅಕ್ಕಿ ತೆಗೆದುಕೊಂಡು ಲೈನಿನಿಂದ ಹೊರಗೆ ಬಂದುನಿಂತುಕೊಂಡ ಪ್ರಕಾಶ. ಸಮಯಕ್ಕೆ ಸಹಾಯಮಾಡಿದ ಆ ಅಪರಿಚಿತ ವ್ಯಕ್ತಿಗೆ ಕೃತಜ್ಞತೆ ಹೇಳಿ, ಆ ಹಣ ಹಿಂತಿರುಗಿಸಲು ಆತನ ಅಡ್ರೆಸ್ ತಿಳಿದುಕೊಳ್ಳೋಣವೆಂದು ಕಾಯುತ್ತಾ ನಿಂತ. ಹತ್ತು ನಿಮಿಷಗಳಲ್ಲಿ ಆ ವ್ಯಕ್ತಿ ಹೊರಗೆ ಬಂದ.

"ಇನ್ನೂ ಇಲ್ಲೇ ನಿಂತಿದೀರಾ ಸ್ವಾಮಿ. ರಾತ್ರಿ ಅಡಿಗೆಗೆ ಅಕ್ಕಿ ಬೇಕು ಅಂತ ಕಾಣತ್ತದೆ. ಬೇಗ ಹೋಗಿ ಮನೆಗೆ" ಎಂದ ಆ ವ್ಯಕ್ತಿ.

ತನಗೆ ಇಷ್ಟು ಸಹಾಯ ಮಾಡಿ ತನ್ನಿಂದ ಸ್ವಲ್ಪವಾದರೂ ಕೃತಜ್ಞತೆಯನ್ನಾಶಿಸದ ಆ ಮನುಷ್ಯನೊಂದಿಗೆ ಹೇಗೆ ಮಾತನಾಡಬೇಕೋ ಅರ್ಥವಾಗಲಿಲ್ಲ ಪ್ರಕಾಶನಿಗೆ.

"ನಿಮ್ಮನ್ನು ಎಲ್ಲಿಯೂ ನೋಡಿದ ನೆನಪಿಲ್ಲ."

"ನೋಡಿರೊಲ್ಲ ಬಿಡಿ. ನನ್ನ ಹೆಸರು ಅಪ್ಪಣ್ಣಾಂತ. ಪೇಟೆ ಬೀದಿ ಪಕ್ಕದ ಅರಳಿಮರದ ಸಂದಿಯಲ್ಲಿ ನನ್ನ ಬೀಡಿಅಂಗಡಿ ಇದೆ" ಎಂದು ಪರಿಚಯ ಹೇಳಿಕೊಂಡ ಅಪ್ಪಣ್ಣ.

"ನಿಮ್ಮ ಸಹಾಯಕ್ಕೆ ನಾನು ತುಂಬಾ...."

"ದೊಡ್ಡೋರು, ಹಾಗನ್ನಬಾರದು...."

"ನಮ್ಮ ದೊಡ್ಡಸ್ತಿಕೆ ಈಗ ತಾನೆ ನೋಡಿದಿರಲ್ಲಾ...."

"ನನ್ನನ್ನು ಹಾಗೆ ಗೌರವಿಸಬೇಡಿ ಸ್ವಾಮಿ, ಅಭ್ಯಾಸ ಇಲ್ಲ. ಹೊಸದಾಗಿರುತ್ತೆ."

"ನನಗಿಂತ ದೊಡ್ಡೋರು ಹೇಗೆ ಕರೀಲಿ?"

"ಅಪ್ಪಣ್ಣಾಂತ ಕೂಗಿ ಸ್ವಾಮಿ. ನನ್ನನ್ನೆಲ್ಲಾರೂ ಹಂಗೇ ಕೂಗ್ತಾರೆ. ಅದು ಸರಿ. ಅಕ್ಕಿಗೇಂತ ಕೊಟ್ಟ ದುಡ್ಡು ಯಾತ್ಯಾತಕ್ಕೋ ಖರ್ಚು ಮಾಡಬಹುದಾ? ಮನೇಲಿ ತೊಂದ್ರೆ ಆಗೊಲ್ಲವಾ?" ವಯಸ್ಸಿನಿಂದ ಹಿರಿಯನಾದ ಅಪ್ಪಣ್ಣ ಕೇಳದೆ ಇರಲಾರದಾದ.

"ನಾನೇನು ಸಲ್ಲದ ಖರ್ಚು ಮಾಡಲಿಲ್ಲ, ಅಪ್ಪಣ್ಣಾ. ನನ್ನ ಮಾತಿಗೆ ಸ್ವಲ್ಪ ಬೆಲೆಯಿದೆಯಲ್ಲಾಂತ ಇಕ್ಕಟ್ಟಿನಲ್ಲಿ ಸಿಕ್ಕಿದ ಇನ್ನೊಬ್ಬರಿಗೆ ಸಹಾಯ ಮಾಡಿದೆ. ಈಗ ನನ್ನ ಸರದಿ ಬಂತು. ಮನುಷ್ಯನಿಗಿಲ್ಲದ ಗೌರವ ದುಡ್ಡಿಗಿದೆ. ಅದಕ್ಕೇ ಮನುಷ್ಯನ ಬದುಕನ್ನು ತನ್ನ ಸುತ್ತಲೂ ಚಕ್ರದಂತೆ ತಿರುಗಿಸುತ್ತಿದೆ ಹಣ" ಎಂದ ಪ್ರಕಾಶ.

"ಓದು ಬರಾ ಬಂದವರು. ನಿಮಗೆ ತಿಳಿಯದ್ದು ಏನೈತೆ. ಮನುಷ್ಯ ಬದುಕಬೇಕೊಂದರೆ ದುಡ್ಡು ಬೇಕು. ದುಡ್ಡಿಗಿರೋ ಬೆಲೆ ದುಡ್ಡಿಗಿದೆ. ಅದಕ್ಕೇ ದುಡ್ಡನ್ನ ಲಕ್ಷ್ಮೀದೇವಿ ಅಂತಾರೆ. ಆಯಮ್ಮಂಗೆ ಕೈಯೆತ್ತಿ ನಮಸ್ಕಾರ ಮಾಡ್ತಾರೆ. ಆದರೆ ಆ ಹಣಾನ ಮನೇಗೆ ತಂದ್ಕೊಳ್ಳಾಕೆ ನಾಲ್ಕು ಜನದ ಹೊಟ್ಟೆಹೊಡ್ದು, ಮಾಡಬಾರದ ಕೆಲಸಮಾಡಿ, ಅವ್ರ ಕಣ್ಣೀರಿನ ಮಧ್ಯೆ ಸಂಪಾದಿಸಬೇಕಾ ಅನ್ನಿಸ್ತದೆ ನಂಗೆ. 'ನಿನ್ನ ತಾವ ನೀತಿ ನಿಯತ್ತು ಇದ್ರೆ,

ಪ್ರಾಮಾಣಿಕನಾಗಿ ಬದ್ಕಿದ್ರೆ, ದೇವರು ನಿನ್ನನ್ನ ಸರಿಯಾಗೇ ನೋಡ್ತಾನೆ.' ಅಂತಿದ್ದ ನಮ್ಮಯ್ಯ. ಆದ್ರೆ, ಆಗ್ಲೂ ಈಗ್ಲೂ ಕಾಲ ಬದಲಾಯಿಸ್ತೈತೆ. ಆ ಕಾಲ್ದಲ್ಲಿ ದೊಡ್ಡೋರು, ಸಿಕ್ಕೋರು ಅನ್ನೋ ಭೇದ ಇಲ್ದೆ ಗುದ್ದಲಿ, ಹಾರೆ ಭುಜದ ಮೇಲಾಕ್ಕೊಂಡು ಪೊತ್ತು ಪುಟ್ಟೋಕೆ ಮುಂಚೆ ಹೊಲಕ್ಕೆ ಹೋಗಿ ಸೂರ್ಯ ಮುಳುಗಿದ ಮೇಲೆ ಮನೆ ಸೇರೋರು. ಹೊಟ್ಟೆ ತುಂಬಾ ತಿಂದು ಕಣ್ಣು ತುಂಬಾ ನಿದ್ದೆ ಪೋಗೋರು. ಈಗಿನ ಕಾಲ್ದಾಗೇನೈತೆ. ಕಾಲು ಕದಲಿಸದೇನೇ ಜೇಬು ತುಂಬಿಸಿಕೋಬೇಕೂಂತಾರೆ. ಕಷ್ಟ ಪಡದೇನೇ ಮನೇತುಂಬಾ ಲಕ್ಷ್ಮಿ ತಾಂಡವಿಸಬೇಕಂತಾರೆ. ಮನುಷ್ಯನಿಗೆ ಸೋಮಾರಿತನ ಬಲಿತೋಗದೆ ಸ್ವಾಮಿ. ದೊಡ್ಡೋರ ಮಾತಲ್ಲಾ ನಾ ಏಳೋದು. ನಮ್ಮಂಥಾ ಜನ ಕೂಡಾ ಷೋಕು ಕಲ್ತು ದುಡಿಯೋದು ಮಾನಕ್ಕೆ ಕಡಿಮೆ ಅಂದುಕೋತವ್ರೆ. ನಾನು ಮಾತ್ರ ಏನ್ಮಾಡಿದೇಂತ? ನಮ್ಮಯ್ಯ ವ್ಯವಸಾಯ ಮಾಡಿ ಹೆಣ್ಣುಮಕ್ಕಳಿಗೆ ಮದುವೆ ಮಾಡಿ, ನಾಲ್ಕು ಜನ ಗಂಡ್ಮಕ್ಕಳಿಗೆ ನಾಲ್ಕು ಎಕರೆ ಭೂಮಿ ಕೊಟ್ಟ. ಅಯ್ಯ ಸತ್ತುಪೋದಕೂಡಲೇ ಅದನ್ನ ಮಾರಿ ಇಲ್ಲಿ ಅಂಗಡಿ ತೆಗೆದೇ ಅಂದ್ರೆ, ಹೊಲದಲ್ಲಿ ಕೆಲಸಮಾಡಲಾರದೇನೇ ತಾನೇ? ನೆರಳಲ್ಲಿ ಕುಂತು ಯಾಪಾರ ಮಾಡೋಣಾಂತ ಪುಟ್ಟಿದೂರು ಬುಟ್ಟು ಇಲ್ಲಿಗ್ಬಂದೆ."

"ವ್ಯವಸಾಯ ಮಾಡು, ವ್ಯಾಪಾರ ಮಾಡು, ಏನು ಮಾಡಿದರೂ ತಪ್ಪಿಲ್ಲ. ನೀನು ಹೇಳಿದಂತೆ ಏನು ಮಾಡಿದರೂ ಕಷ್ಟಪಟ್ಟು ಮಾಡಬೇಕು. ಪ್ರಾಮಾಣಿಕವಾಗಿ ಬದುಕಬೇಕು. ನಾನು ಮಣ್ಣಿನ ಮಗ. ನನ್ನ ತಂದೆ ತಾತ ಈ ಭೂಮಿ ಉತ್ತು ಬದುಕಿದರು. ಸತ್ತರೆ ಇಲ್ಲೇ ಸಾಯ್ತೀವಿ ಅಂತ ಹಠ ಹಿಡಿದು ಕೂಡದೆ ನಿನಗೆ ಇಷ್ಟ ಬಂದ ಕೆಲಸ ನೀನು ಮಾಡ್ತಿದ್ದೀ ತಪ್ಪೇನು? ನಿಮ್ಮ ತಂದೆ ತನಗಿದ್ದ ಹೊಲಾನ ನಾಲ್ಕು ಜನಕ್ಕೆ ಹಂಚಿದ ಅಂತಿ. ನಿನಗೆ ನಾಲ್ಕು ಜನ ಮಕ್ಕಳಿದ್ದರೆ ನೀನು ಮತ್ತೆ ಆದನ್ನು ಹಂಚುತ್ತೀ. ಹೀಗೆ ಹಂಚುತ್ತಾ ಹೋದರೆ ಅದರಿಂದ ಯಾರಿಗೆ ಲಾಭ? ಕೆಲವು ಜನ ವ್ಯವಸಾಯ ಮಾಡುತ್ತಿದ್ದರೆ ಕೆಲವು ಜನ ಬೇರೆ ವೃತ್ತಿ ಮಾಡಬೇಕು. ಹಾಗೆ ಮಾಡಿದರೇನೇ ಕುಟುಂಬ ಅಭಿವೃದ್ಧಿಯಾಗುತ್ತೆ. ನೀನು ವ್ಯವಸಾಯ ಬಿಟ್ಟು ಚಿಲ್ಲರೆ ಅಂಗಡಿ ತೆಗೆದಿದ್ದಿ....ನಿನ್ನ ಮಗ ಇದಕ್ಕಿಂತ ದೊಡ್ಡ ವ್ಯಾಪಾರ ಮಾಡಬಹುದು...."

"ನಂಗೆ ಗಂಡುಮಗ ಇಲ್ಲ ಸೋಮಿ. ಒಬ್ಬಳೇ ಮಗಳವ್ಳೆ. ತಾಯಿ ಇಲ್ಲದ್ಮಗು. ಆ ಕಡೆ ಬಂದ್ರೆ ನಮ್ಮಂಗ್ಡಿ ತಾವ ಬನ್ನಿ...."

"ಬರ್ತೀನಿ, ಸಾಧ್ಯವಾದಷ್ಟು ಬೇಗ ನಿನ್ನ ದುಡ್ಡು ತಗೊಂಡು ಬರ್ತೀನಿ."

"ದುಡ್ಡಿಗೇನಂತೆ? ನೀವೇನು ಊರುಬಿಟ್ಟು ಓಗಾಕಿಲ್ಲವಲ್ಲ. ಕೈಲಿದ್ದಾಗ

ಕೊಡೋವಿರಂತೆ. ಇನ್ನು ನೀವು ಹೊರಡಿ ಸಾವಿ. ಪೊತ್ತಾಗೋಯ್ತು. ಈ ಮುದುಕರೊಂದಿಗೆ ಇದೇ ತಾಪತ್ರಯ. ಮಾತಾಡೋಕೆ ಷುರು ಮಾಡಿದರೆ ಗಾನಾನೇ ಇರೊಲ್ಲ...."

ಅಪ್ಪಣ್ಣ ಹೊರಟುಹೋದ.

ಅಪ್ಪಣ್ಣ ವಿದ್ಯಾವಂತನಲ್ಲ. ಹಳ್ಳಿಯಲ್ಲಿ ಹುಟ್ಟಿ ಪಟ್ಟಣಕ್ಕೆ ಬಂದು ಅಂಗಡಿ ಇಟ್ಟುಕೊಂಡು ಜೀವಿಸುತ್ತಿದ್ದವ. ಆದರೂ ಎಷ್ಟೋ ಜನ ವಿದ್ಯಾವಂತರಿಗಿಂತ ಅಪ್ಪಣ್ಣ ಎಷ್ಟೋ ವಾಸಿ ಅನ್ನಿಸಿತು ಪ್ರಕಾಶನಿಗೆ.

* * *

ಅಕ್ಕಿ ಚೀಲ ಹಿಡಿದು ಪ್ರಕಾಶ ಮನೆಯೊಳಕ್ಕೆ ಹೆಜ್ಜೆ ಇಡುವ ವೇಳೆಗೆ ಶ್ರೀಹರಿ ಎಲ್ಲರ ಮೇಲೂ ಎಗರಿ ಬೀಳುತ್ತಿದ್ದ. ಜಾನಕಿ ಬಿರುಸಾಗಿ ಜವಾಬು ಹೇಳುತ್ತಿದ್ದಳು. ಆ ಸಂಭಾಷಣೆಗೆ ತಾನೇ ಕಾರಣ ಎಂದು ಅರ್ಥವಾಯಿತು ಪ್ರಕಾಶನಿಗೆ.

"ಅಕ್ಕಿ ಹೇಗೆ ತಂದೆ? ಸೆಟ್ಟಿ ಸಾಲ ಕೊಟ್ಟನೇ?" ಎಂದು ಪ್ರಶ್ನಿಸಿದ ಸಾಂಬಶಿವ. ತನ್ನನ್ನು ಹಾಗೆ ಹೀಯಾಳಿಸಿ ಕಳುಹಿಸಿದ ಸೆಟ್ಟಿ ತನ್ನ ತಮ್ಮನಿಗೆ ಸಾಲಕೊಡಬೇಕಾದರೆ ತಮ್ಮನ ಮುಖದಲ್ಲೇನೋ ಪ್ರತ್ಯೇಕತೆಯಿರಬೇಕೆನಿಸಿ ಪರಿಶೀಲಿಸಿ ಪ್ರಕಾಶನ ಮುಖ ನೋಡಿದ.

"ಹೇಗೋ ಹಾಗೆ ತಂದನಲ್ಲಾ ಸಧ್ಯ. ಅಷ್ಟೇ ಸಾಕು. ಕನಕಾ, ಎರಡು ಪಾವು ಅಕ್ಕಿ ಆರಿಸಿ, ತೊಳೆದು ಎಸರಿನಲ್ಲಿ ಹಾಕಮ್ಮ. ಹೊತ್ತಾಯಿತು ಆಗಲೇ" ಎಂದರು ಸುಂದರಮ್ಮ.

"ಅಲ್ಲವೇ ಮತ್ತೆ, ನಿನ್ನ ಮುದ್ದು ಮಗನ ನಿರ್ವಾಕಕ್ಕೆ ನೀನೇ ಸಂತೋಷಪಡಬೇಕು. ಏನೋ ಹೋದಸಲ ಕೊಟ್ಟ ದುಡ್ಡು ಏನು ಮಾಡಿದೆ? ಎಷ್ಟು ಸಿನಿಮಾ ನೋಡಿದೆ? ಎಷ್ಟು ಕಟ್ಟು ಬೀಡಿ ಸೇದಿದೆ?"

ಆಪತ್ತಿನಲ್ಲಿದ್ದ ಒಬ್ಬರಿಗೆ ಸಾಲಕೊಟ್ಟೆ ಅಣ್ಣಾ"

"ಮೂರು ಕಾಸು ಸಂಪಾದನೆಯಿಲ್ಲದ ನೀನು ಇನ್ನೊಬ್ಬರಿಗೆ ಸಾಲ ಕೊಡ್ತೀಯಾ? ಯಾರನ್ನ ಕೇಳಿ ಕೊಟ್ಟೆ? ಎಷ್ಟು ತಂದರೂ ತಿನ್ನೋಕೆ ಸಾಲದೆ ಒದ್ದಾಡುತ್ತಿರುವಾಗ...."

"ಸಂಪಾದಿಸೋಕೂ, ಸಾಲಕೊಡೋಕೂ ಸಂಬಂಧ ಏನಣ್ಣ? ಸಂಪಾದಿಸೋಕೆ ಯೋಗ್ಯತೆಯಿರಬೇಕು. ಸಾಲಕೊಡೋಕೆ ಸಹಾನುಭೂತಿ, ಮಾನವತೆ, ಇದ್ದರೆ ಸಾಕು."

"ಓಹೋ....ಸಹಾನುಭೂತಿ ಮಾನವತೆ ಎಲ್ಲಾ ನಿನ್ನ ಸೊತ್ತೇ ಆದಂತೆ ಮಾತಾಡ್ತೀಯಲ್ಲೋ! ಅಳಿಯನ ವಸ್ತು ಅತ್ತೆ ದಾನಮಾಡಿದಂತೆ ಅಣ್ಣಾ ತಿಂಗಳೆಲ್ಲಾ ರಟ್ಟೆ ಮುರಿಯ ದುಡಿದು ಸಂಪಾದಿಸಿದರೆ ನೀನು ಯಾರ್ಯಾರ ಮೇಲೋ ಕರುಣೆ ತೋರಿಸಿ ಬರುತ್ತೀಯೇನು? ಇಷ್ಟು ಜನರನ್ನ ಕೂಡಿಸಿ ಅನ್ನ ಹಾಕ್ತಿದಾನಲ್ಲಾ ಅವನ ಮಾತಿಗೆ ಗೌರವ ಕೊಡೋಣ, ಅವನಿಗೆ ಸಹಾಯ ಮಾಡೋಣ ಅಂತ ಯಾರಿಗಾದರೂ ಇದೆಯೇನು? ನಿಮ್ಮೆಲ್ಲರಿಗಿಂತ ಮೊದಲು ಹುಟ್ಟಿದ ತಪ್ಪಿಗಾಗಿ ನಿಮ್ಮನ್ನು ಸಾಕುವ ಹೊಣೆ ನನ್ನ ಮೇಲೆ ಬಿದ್ದಿದೆ. ನನಗೆ ಎಂದಿಗೆ ಈ ಬಂಧನದಿಂದ ವಿಮುಕ್ತಿ, ಎಂದಿಗೆ ಈ ಗುಲಾಮ ಗಿರಿಯಿಂದ ಬಿಡುಗಡೆ, ಎಂದು ರಾತ್ರಿಹಗಲು ಒದ್ದಾಡುತ್ತಿದ್ದೇನೆ. ನನ್ನ ಕಷ್ಟ ನಿಮಗಾರಿಗೂ ಅರ್ಥವೇ ಆಗೊಲ್ಲವೇ? ಕಾಣುವುದೇ ಇಲ್ಲವೇ? ಹೇಳೋ?"

"ಏನು ಹೇಳಲಣ್ಣಾ. ನಾವೆಲ್ಲಾ ನಿಂಗಿಷ್ಟು ಭಾರ ಅಂತ ಎಂದೂ ಅಂದುಕೊಳ್ಳಲಿಲ್ಲ ಕಣಣ್ಣಾ. ಹಾಗೆ ತಿಳಿದಿದ್ದರೆ ಈ ಬಿ.ಎ. ಓದು ಬಿಟ್ಟು ಎಂದೋ ಯಾವುದಾದರೂ ಕೆಲಸ ಹುಡುಕಿಕೊಳ್ಳುತ್ತಿದ್ದೆ. ತಂದೆಯ ನಂತರ ತಂದೆಯಂತ ಎಲ್ಲರನ್ನೂ ಅಣ್ಣಾ ಸಾಕುತ್ತಿದಾನೆ. ಓದು ಮುಗಿಸಿ ನನ್ನ ಕೈಲಾದಷ್ಟು ಅಣ್ಣನಿಗೆ ನೆರವಾಗೋಣ ಅಂದುಕೊಂಡೆ ನಾನು. ಆದರೆ ನಾವೆಲ್ಲಾ ನಿನಗೊಂದು ಶಾಪವೆಂದು ನಾನೆಂದೂ ಭಾವಿಸಲಿಲ್ಲಣ್ಣಾ! ಮೆದು ಮನಸಿನ ಸಾಂಬಶಿವನಿಗೆ ಅಣ್ಣನ ಮಾತುಗಳು ಶೂಲದಿಂದ ಇರಿದಂತಾಗಲು ತನ್ನ ಮನಸಿನಲ್ಲಿದುದನ್ನು ಹೊರಗೆಡಹಿ ಕಣ್ಣೀರಿಟ್ಟ ಸಾಂಬು.

"ನಿನ್ನನ್ನು ಅನ್ನಲಿಲ್ಲ ಕಣಪ್ಪಾ ಸಾಂಬೂ. ನಿನ್ನ ಮೇಲೇ ಆಸೆ ಇಟ್ಟು ಕೊಂಡಿದೀನಿ ನಾನು. ಈ ಬಿ.ಎ. ಒಂದು ಆದರೆ ಸಾಕು ನಿನಗೆ ಮದುವೆ ಮಾಡಿ ಆ ಹಣದಲ್ಲಿ ಶಾಂತನಿಗೆ ಮದುವೆ ಮಾಡಿದರೆ ನಿಮ್ಮಿಬ್ಬರ ಬದುಕು ಒಂದು ದಾರಿಗೆ ಬಂದಂತಾಗುತ್ತದೆ ಎಂದು ಅಂದುಕೊಂಡಿದೀನಿ ನೀವು ಸುಖ ವಾಗಿರೋದಕ್ಕಿಂತ ನನಗೆ ಮಾತ್ರ ಏನು ಬೇಕಾಗಿದೆ? ನಿಮಗೋಸ್ಕರ ನಾನು ಪಡುತ್ತಿರೋ ಅವಸ್ಥೆ ನೋಡಿ ಸ್ವಲ್ಪ ಸಹಾನುಭೂತಿ ತೋರಿಸಿ ಅಂತ ನಾನಂತಿರೋದು. ನಮ್ಮೆಲ್ಲರಿಗೋಸ್ಕರ ನಮ್ಮಣ್ಣ ಇಷ್ಟು ಕಷ್ಟ ಪಡುತ್ತಿದಾ ನಲ್ಲಾಂತ ಸ್ವಲ್ಪ ವಿಶ್ವಾಸ ತೋರಿಸಿ ಅಂತಿದೀನಿ ಅಷ್ಟೆ."

"ಅದೆಂತಾ ಮಾತೋ ಶ್ರೀಹರೀ. ನಿನ್ನ ಮೇಲೆ ವಿಶ್ವಾಸವಿಲ್ಲದಂತಹ ಕೆಲಸ ಯಾರೇನು ಮಾಡಿದರಪ್ಪಾ. ಏನೋ ಹುಡುಗ, ತಿಳಿದೋ ತಿಳಿಯ ದೆಯೋ ಯಾರೋ ಸ್ನೇಹಿತರಿಗೆ ಸಾಲ ಕೊಟ್ಟಿರುತ್ತಾನೆ. ಇಲ್ಲ, ಖರ್ಚು ಮಾಡಿಕೊಂಡನೋ. ಅಷ್ಟುಮಾತ್ರಕ್ಕೆ ಯಾಕಪ್ಪಾ ನೊಂದುಕೊಳ್ಳುತ್ತಿ?"

ಸುಂದರಮ್ಮ ಸಮಾಧಾನ ಹೇಳಲು ಪ್ರಯತ್ನಿಸಿದರು.

"ಹೌದಮ್ಮಾ, ನಿಂಗೆ ಹಾಗೇ ಇರುತ್ತೆ. ಪ್ರಕಾಶ ಹುಡುಗ. ಜಾನಕಿ ಚಿಕ್ಕ ಹುಡುಗಿ. ನಿಮ್ಮೆಲ್ಲರ ಕಣ್ಣಿಗೂ ಮುದಿಗೂಬೆಯಂತೆ ಕಾಣ್ತಿರೋದು ನಾನು ತಾನೆ? ಪ್ರಕಾಶನಷ್ಟು ವಯಸಿದ್ದಾಗಿನಿಂದ ದುಡಿದು ತಂದು ನಿನ್ನ ಕೈಲಿ ಸುರೀತಿದೀನಿ. ಜ್ಞಾಪಕ ಇದೆಯೇನು? ಆಗ ನನ್ನನ್ನು ನೋಡಿ ಹುಡುಗ ಅನ್ನಿಸಲಿಲ್ಲವೇನು ನಿನಗೆ? ಅಪ್ಪನಿಗೆ ಸ್ವಲ್ಪಕ್ಕೆ ಸ್ವಲ್ಪ ಸಹಾಯವಾಗುತ್ತೆ, ಯಾವುದಾದರೂ ಕೆಲಸಕ್ಕೆ ಸೇರಿಕೋ ಅಂತ ಸಲಹೆ ಕೊಟ್ಟಿದ್ದು ನೀನಲ್ಲ ವೇನು? ಈ ದಿನ ಅದೇ ಮಾತನ್ನ ನಿನ್ನ ಚಿಕ್ಕ ಮಗನಿಗೆ ಹೇಳೋಕೆ ನಿನಗೆ ಬಾಯಿಲ್ಲವೇ? ಓದೂ ಇಲ್ಲದೆ ಕೆಲಸವೂ ಇಲ್ಲದೆ ಬೀದಿಬಸವನಂತೆ ತಿರುಗು ತ್ತಿದಾನಲ್ಲಾ, ಮನೇಲಿ ಜಿಗಣೆ ಹಿಡಿದಂತೆ ರಕ್ತ ಹೀರಲು ಅಣ್ಣ ಇದಾನೇಂತ ತಾನೇ? ಛಿ! ಮನುಷ್ಯನೆಂದಮೇಲೆ ನಾಚಿಕೆ ಮಾನ ಇರಬೇಕು. ಬಿಟ್ಟಿ ಕೂಳು ತಿಂದು ಬೀದಿಬೀದಿ ಅಲೆಯೋ ಅಭಿಮಾನಸ್ಥ ಒಬ್ಬ. ಮದುವೆಯಾಗಿ ಗಂಡನ ಮನೆಗೆ ಹೋಗದ ಹೆಣ್ಣು ಮಗಳು ಒಬ್ಬಳು. ಎಂಥ ಮಕ್ಕಳನ್ನು ಹೆತ್ತಿದೀ ಯಮ್ಮಾ."

ಸುಂದರಮ್ಮನ ಕಣ್ಣಿನಲ್ಲಿ ನೀರುತುಂಬಿತ್ತು.

"ಹೌದಪ್ಪಾ. ನನ್ನ ಹಣೇಲಿ ಇದೆಲ್ಲಾ ಬರೆದಿದೆ. ಅದಕ್ಕೆ ಪುಣ್ಯಾತ್ಮರು ನಿಮ್ಮಪ್ಪ ಕಣ್ಣು ಮುಚ್ಚಿಕೊಂಡರೂ ನಾನಿನ್ನೂ ಮೂದೇವಿಯಂತೆ ಬದುಕಿದೀನಿ. ನಿನ್ನ ಕೈಲಿ ಇಷ್ಟು ಮಾತು ಅನ್ನಿಸಿಕೋತಾ ಇದೀನಿ. ನಿನ್ನನ್ನು ಹೆತ್ತ ಹಾಗೇ ಅವರನ್ನೂ ಹೆತ್ತಿದೀನಿ ಕಣೋ. ಅವನನ್ನ ಜಾಣಮರಿಯಂತೆ ಓದಿಕೋ ಬೇಡ ಅಂದೆನೇ? ಅವಳನ್ನ ಅತ್ತೆಯ ಮನೆಗೆ ಹೋಗಬೇಡ ಅಂದೆನೆ? ಹೀಗಾದರಲ್ಲಪ್ಪಾ ಇವರು ಅಂತ ರಾತ್ರಿ ಹಗಲು ಕೊರಗ್ತಾ ಇದೀನಿ ನಾನು. ಅದು ಸಾಲದೂಂತ ನೀನು ಚುಚ್ಚಿ ಮಾತಾಡಪ್ಪಾ ಮಾತಾಡು."

"ಅಣ್ಣನ ಚಿಂತೆ ಪ್ರಕಾಶನಿಗೆ ಓದು ಹತ್ತಲಿಲ್ಲ, ನಾನು ಅತ್ತೆಮನೆಗೆ ಹೋಗಲಿಲ್ಲ ಅಂತಲ್ಲಮ್ಮಾ. ಎಲ್ಲರಿಗಿಂತ ಕೊನೆಯಲ್ಲಿ ಅವನನ್ನೇಕೆ ಹೆರಲಿಲ್ಲಾಂತ. ಆಗ ನಮ್ಮೆಲ್ಲರಿಗೋಸ್ಕರ ಇಷ್ಟು ಕಷ್ಟಪಡಬೇಕಾಗುತ್ತಿರಲಿಲ್ಲ ವಲ್ಲಾಂತ." ಜಾನಕಿ ಅಂದಳು.

"ಕೇಳಿದೆಯಾಮ್ಮಾ ಅವಳ ಮಾತನ್ನ? ಅಪ್ಪ ಹಾಸಿಗೆ ಹಿಡಿದಾಗಿನಿಂದ ಇವರಿಗೆಲ್ಲಾ ಎರಡು ಹೊತ್ತೂ ಊಟ ಹಾಕ್ತಿರೋದು ಯಾರು? ಇವರ ಫೀಸು, ಬಟ್ಟೆಬರೆ ನೋಡ್ತಿರೋದು ಯಾರು? ನನ್ನ ಸುಖಸಂತೋಷ ನೋಡಿ ಕೊಳ್ಳದೆ.... ಇವರಿಗೋಸ್ಕರ.... ಇವರಿಗೋಸ್ಕರ ಕಷ್ಟಪಡ್ತಿರೋದು ಯಾರು?"

"ಅಲ್ಲೇ ನೀನು ತಪ್ಪು ತಿಳ್ಕೋತಿದೀಯಣ್ಣಾ. ಅಪ್ಪ ಹೋದಾಗಿನಿಂದ ನೀನು ಸಂಸಾರ ಸಾಗಿಸ್ತಿರೋ ಮಾತು ನಿಜಾನೇ. ಆದರೆ ನೀನೇನು ಸುಮ್ಮನೆ ಆ ಕೆಲಸ ಮಾಡುತ್ತಾ ಇಲ್ಲ. ನೀನು ಬೆಳೆಸಿದ ತಮ್ಮಂದಿರು ದೊಡ್ಡವರಾಗಿ ನಿನಗೆ ಹೇಗೂ ಸಹಾಯ ಮಾಡೇಮಾಡ್ತಾರೆ. ತನ್ನ ಸುಖ ನೋಡಿಕೊಳ್ಳದೆ ಒಡಹುಟ್ಟಿದವರನ್ನು ಮುಂದಕ್ಕೆ ತಂದನೆಂದು ದೊಡ್ಡವರು ಮೆಚ್ಚಿ ಶಹಬಾಸ್ ಗಿರಿ ಕೊಟ್ಟೇಕೊಡುತ್ತಾರೆ....ಹಾಗಂತ ನಾನು ನಿನ್ನನ್ನು ಆಕ್ಷೇಪಿಸುತ್ತಾ ಇಲ್ಲ. ತಂದೆತಾಯಿಯರು ಸಹ ಮಕ್ಕಳಿಂದ ಇಷ್ಟು ಮಾತ್ರ ಅಪೇಕ್ಷಿಸಿಯೇ ಅಪೇಕ್ಷಿಸುತ್ತಾರೆ. ನೀನೀಗ ಇಷ್ಟುಮಾಡಿ ಆಶಿಸುವುದೇನೂ ತಪ್ಪಲ್ಲ. ಆದರೆ ನಮಗೋಸ್ಕರ ನಿನ್ನ ಬದುಕು ಹಾಳು ಮಾಡಿಕೊಂಡೆ ಅನ್ನುತ್ತೀಯಲ್ಲಾ.... ಅದು ಅಷ್ಟು ಆರೋಗ್ಯಕರವಾದ ವಿಷಯವಲ್ಲ ನೋಡು. ಈಗ ಅಕಸ್ಮಾತ್ ಮನೆಯಲ್ಲಿರೋರೆಲ್ಲಾ ಅವರವರ ಪಾಡಿಗೆ ಹೊರಟು ಹೋಗುತ್ತೀವಿ ಅಂತಿಟ್ಟುಕೋ, ಆಗ ನೀನು ಸುಖವಾಗಿರಬಲ್ಲೆಯಾ? ನಾವೆಲ್ಲಾ ಇಲ್ಲದಿದ್ದರೆ ನಿನಗೆ ಹಣದ ಮುಗ್ಗಟ್ಟು ಕಡಿಮೆಯಾಗಬಹುದು. ಇನ್ನೊಂದಿಷ್ಟು ಬಟ್ಟೆಬರೆ ಕೊಂಡುಕೊಳ್ಳಬಲ್ಲೆ. ಅಷ್ಟು ಮಾತ್ರಕ್ಕೆ ನಿನ್ನ ಬದುಕು ಸುಖದ ಸೋಪಾನ ಗಳನ್ನು ಅಧಿರೋಹಿಸಿದಂತೆ, ನೀನು ಕೋರಿದ ಗುರಿ ಸಾಧಿಸಿದಂತೆ ಭಾವಿಸಿ ಸಂತೋಷಪಡಬಲ್ಲೆಯಾ? ನಿನಗಿನ್ನೇನೂ ಆಸೆ ಆಕಾಂಕ್ಷೆಗಳಿರುವುದಿಲ್ಲವೇ? ನೀನು ಕೊಳ್ಳಬಹುದಾದ ಆ ಒಂದಿಷ್ಟು ಬಟ್ಟೆಬರೆ ನಮ್ಮಿಂದಾಗಿ ಕೊಳ್ಳಲಾಗ ದ್ದಕ್ಕಾಗಿ ನಿನ್ನ ಜೀವನವೆಲ್ಲಾ ವ್ಯರ್ಥವಾದಂತೆ ಭಾವಿಸಬಲ್ಲೆಯಾ? ನಾಲ್ವರು ಒಡಹುಟ್ಟಿದವರ ಅಭಿವೃದ್ಧಿಗೆ ನೆರವಾಗಿ, ಅವರ ಬದುಕು ರೂಪಿಸಿದೆನೆಂಬ ಸಂತೃಪ್ತಿಗಿಂತ, ನಿನಗೆ ನಿನ್ನ ತೀರದ ಅತ್ಯಲ್ಪವಾದ ಆಸೆಗಳಿಂದ ಉಂಟಾದ ಚಿಂತೆ ಅಧಿಕವೇನಣ್ಣಾ?

"ಕಾರಣ ಅದಲ್ಲಣ್ಣಾ. ನೀನು ನಿನ್ನ ಬಾಳಿನ ಸುತ್ತಲೂ ಎತ್ತರವಾದ ಗೋಡೆಗಳನ್ನು ಕಟ್ಟಿಕೊಂಡಿದ್ದಿ. ಹೊರಗಿನ ಪ್ರಪಂಚದಿಂದ ಒಂದು ಕಾಂತಿ ಕಿರಣ, ಒಂದು ಗಾಳಿಯ ತೆರೆ ಒಳಕ್ಕೆ ಬೀಸಿ ಬರುವ ಅವಕಾಶವಿಲ್ಲದೆ ನಿನ್ನನ್ನು ನೀನು ಬಂಧಿಸಿಕೊಂಡಿದ್ದಿ. ಒಳಗಿನ ಗಾಳಿ ನಿನಗೆ ಸ್ವಲ್ಪಮಟ್ಟಿಗೆ ಉಸಿರಾಡಲು ಕೆಲಸಕ್ಕೆ ಬರುತ್ತೆ, ಅನಂತರ ಉಸಿರು ಕಟ್ಟಿ ಒದ್ದಾಡುತ್ತಿ. ಸುತ್ತಲಿನ ಗೋಡೆ ಗಳನ್ನು ಒಡೆದುಹಾಕು. ಗಾಳಿ ಬೆಳಕನ್ನು ಒಳಕ್ಕೆ ಬರಗೊಡು. ಆಗ ನಿನ್ನ ಬದುಕು ಈಗ ನೀನು ಅನುಭವಿಸುತ್ತಿರುವುದಕ್ಕಿಂತ ಎಷ್ಟೋ ಪಾಲು ಸುಂದರ ವಾಗಿ ಕಾಣುತ್ತೆ. ನಮ್ಮ ಬಾಧ್ಯತೆ ನಿನಗೆ ಹೆಚ್ಚು ಕಾಲ ಇರೋಲ್ಲ. ಈಗಲ್ಲ ನಾಳೆ ನಮ್ಮ ಬದುಕು ನಾವು ನೋಡಿಕೊಳ್ಳುತ್ತೇವೆ. ನಮ್ಮಿಂದಲೇ ನಿನ್ನ

ಬಾಳಿನ ಪುರೋಗತಿಗೆ ಅಡ್ಡಿ ಎಂದು ನೀನು ಭಾವಿಸುವುದಾದರೆ ಆಗ ನಿನ್ನ ಅವರೋಧ ತೊಲಗಿಹೋಗುತ್ತದೆ....ಆದರೆ ನನ್ನ ಅಭಿಪ್ರಾಯದಲ್ಲಿ ಮುಖ್ಯವಾದ ಅವರೋಧ ಇದಲ್ಲ. ನೀನು ನಿನ್ನ ಬಾಳಿನ ಬಗ್ಗೆ, ನೀನು ಮಿಕ್ಕವರಿಗೆ ಕೊಡುವ ಬೆಲೆಯ ಬಗ್ಗೆ ಸಂಕುಚಿತ ಭಾವಗಳನ್ನು ಬೆಳೆಸಿಕೊಂಡಿದ್ದಿ. ಅವು ನಿನ್ನನ್ನು ಕದಲದಂತೆ ಹಿಡಿದಿಡುತ್ತಿವೆ. ಕಣ್ಣ ಮುಂದೆ ಕಗ್ಗತ್ತಲನ್ನು ಸೃಷ್ಟಿಸುತ್ತಿವೆ. ಆ ಕತ್ತಲನ್ನು ಸೀಳಿ ಹೊರಗಿನ ಪ್ರಪಂಚವನ್ನು ನೋಡಲು ಪ್ರಯತ್ನಿಸು. ಮಾನಸಿಕವಾಗಿ ನಿನ್ನನ್ನು ಬೆಳೆಯುಗೊಡದ ನಿನ್ನ ಅಹಂಕಾರವನ್ನು ಹದ್ದಿನಲ್ಲಿಟ್ಟುಕೋ. ನಿನ್ನ ಜೀವಗತಿಯನ್ನು ಬದಲಾಯಿಸುತ್ತದೆ. ನೀನು ಸಕಲ ಸುಖಭೋಗಗಳನ್ನೂ ಅನುಭವಿಸುತ್ತೀಯೆಂದು ಹೇಳಲಾರೆ, ನಾನು. ಆದರೆ ಬದುಕಿನಲ್ಲಿ ಶಾಂತಿ-ಸಂತೃಪ್ತಿ ದೊರೆಯುತ್ತದೆ. ಎಷ್ಟೋ ದಿನಗಳಿಂದ ಈ ಮಾತುಗಳನ್ನು ನಿನಗೆ ಹೇಳಬೇಕೆಂದುಕೊಳ್ಳುತ್ತಿದ್ದೆ. ಈ ದಿನ ಒಳ್ಳೆಯದಕ್ಕೋ ಕೆಟ್ಟದಕ್ಕೋ ನನ್ನ ಬಾಯಿಂದ ಈ ಮಾತು ಬಂದುಬಿಟ್ಟಿತು" ಎಂದಳು ಜಾನಕಿ.

ಅದುವರೆಗೂ ಹಲ್ಲುಕಚ್ಚಿ ಈ ಮಾತುಗಳನ್ನೆಲ್ಲ ಕೇಳುತ್ತಿದ್ದ ಶ್ರೀ ಹರಿ "ಆಯಿತೇ ಮಹಾತಾಯಿ ನಿನ್ನ ಉಪನ್ಯಾಸ? ಪರವಾಗಿಲ್ಲ ಚೆನ್ನಾಗಿ ಪಾಠ ಹೇಳುತ್ತಿ? ಒಡಹುಟ್ಟಿದವರಿಗೋಸ್ಕರ ಸಾಲಗಾರನಾಗಿ ಒಡಹುಟ್ಟಿದವರಿಂದಲೇ ಸಂಕುಚಿತಮನಸ್ಸಿನವನೂ ಲೋಭಿ ಅನ್ನಿಸಿಕೊಳ್ಳೋ ಅದೃಷ್ಟವಂತ ಅಣ್ಣ ನಾನೊಬ್ಬನೇ ಅಂತ ಕಾಣುತ್ತೆ. ನೀವೆಲ್ಲಾ ನನ್ನ ಹಾಗಲ್ಲದೆ ವಿಶಾಲ ಹೃದಯದಿಂದ, ವಿತರಣೆಯಿಂದ ಬದುಕಿ. ನನಗಷ್ಟೇ ಸಾಕು. ನೋಡಿ ಸಂತೋಷಪಡೋಕೆ ನಾನೂ ಬದುಕೇ ಇರುತ್ತೀನಿ" ಎಂದವನೇ ಹೊರಕ್ಕೆ ನಡೆದ.

"ಅಯ್ಯೋ, ಊಟದ ಹೊತ್ತಿನಲ್ಲಿ ಎಲ್ಲಿಗೆ ಹೋಗುತ್ತಿದೀಯೋ ಅಡಿಗೆ ಆಗಿದೆ, ಬೆಳಿಗ್ಗೆ ತಿಂದ ಅನ್ನ...." ಎಂದು ಬೇಡಿಕೊಳ್ಳುತ್ತಿದ್ದ ತಾಯಿಗೆ,

"ಇನ್ನೂ ಊಟ ಬೇರೆ ಏಕೆ ಬಿಡಮ್ಮಾ, ಅಣ್ಣತಮ್ಮಂದಿರ, ಅಕ್ಕತಂಗಿಯರ ಅಭಿಮಾನದಿಂದ ಹೊಟ್ಟೆ ತುಂಬಿಹೋಗಿದೆ" ಎಂದು ಹಿಂದಕ್ಕೆ ತಿರುಗಿ ನೋಡದೆಯೇ ಉತ್ತರ ಕೊಟ್ಟ ಶ್ರೀಹರಿ.

ಗಂಡನಿಗೆ ಏನನ್ನೋ ಹೇಳಬೇಕೆಂದು ಬಂದ ಕನಕ ಅವನ ಉತ್ತರ ಕೇಳಿ ಹಾಗೆಯೇ ನಿಂತುಬಿಟ್ಟಳು.

"ಅಣ್ಣನ್ನ ನಾವೆಲ್ಲಾ ಏನೇನೋ ಅಂದಿವೀಂತ ನಿನಗೆ ಕೋಪವೇ ಅತ್ತಿಗೆ? ಅಣ್ಣ ಅಂದರೆ ನಮಗೆ ಅಭಿಮಾನವಿಲ್ಲದೆ ಅಲ್ಲ. ಅವನ ಒಳ್ಳೇ

ದಕ್ಕಾಗಿಯೇ...."

ಜಾನಕಿಯು ಮಾತನ್ನು ಮಧ್ಯದಲ್ಲಿಯೇ ತಡೆದು ಕನಕ, "ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರಿಗೆ ಅಭಿಮಾನವಿಲ್ಲದಿರುತ್ತದೆಯೇನಮ್ಮಾ. ಏನೋ ಮಾತಿಗೆ ಮಾತು ಬರುತ್ತೆ. ಮತ್ತೆ ಎಲ್ಲರೂ ಒಂದೇ ತಾನೇ. ಮುಖ್ಯವಾಗಿ ಈಗ ನೀವು ವಾದಿಸುತ್ತಿರೋ ವಿಷಯಾನೇ ನನಗರ್ಥವಾಗುತ್ತಿಲ್ಲ. ಎಲ್ಲರ ಮಾತೂ ಸರಿ ಅಂತಲೇ ಅನ್ನಿಸುತ್ತೆ. ಈಗ ನಮಗೇನು ಕಡಿಮೆ ಅಂತ ನಾವು ವ್ಯಥೆ ಪಡಬೇಕು? ನಾವೇನೂ ಯಾರ ಹತ್ತಿರವೂ ಭಿಕ್ಷೆ ಬೇಡುತ್ತಿಲ್ಲ. ಯಾರ ಮನೆಯಲ್ಲೂ ಕಳ್ಳತನ ಮಾಡುತ್ತಿಲ್ಲ. ನಮ್ಮ ಮನೆಯಲ್ಲಿ ನಮಗಿರುವಷ್ಟರಲ್ಲಿ ಹಾಯಾಗಿಯೇ ಇದೇವೆ. ನಾಲ್ಕು ದಿನ ಕಣ್ಣು ಮುಚ್ಚಿಕೊಂಡರೆ ಸಾಂಬು ಕೆಲಸಕ್ಕೆ ಸೇರುತ್ತಾನೆ. ಆಗ ನಮಗಿನ್ನೇನು ಕಡಿಮೆ? ಇಷ್ಟುಮಾತ್ರಕ್ಕೆ ಈ ವಾದ ಪ್ರತಿವಾದಗಳೇಕೆ? ಈ ಕೋಪತಾಪ ಏಕೆ? ನಾನು ನಿಮ್ಮಂತೆ ಓದಿದವಳಲ್ಲ. ನನಗೆ ಶಾಸ್ತ್ರ-ಪುರಾಣ ಗೊತ್ತಿಲ್ಲ. ನನಗೆ ತಿಳಿದದ್ದು ಒಂದೇ. ನಿನ್ನ ಸುತ್ತಲೂ ನಾಲ್ಕುಜನ ನಗುತ್ತಿದ್ದರೆ ನೀನೂ ನಗುತ್ತಿ. ಅವರು ಅಳುತ್ತಿದ್ದರೆ ನಿನಗೂ ಅಳು ಬರುತ್ತದೆ. ಅದಿಲ್ಲ ಇದಿಲ್ಲ ಅಂತ ನಾನು ಸುತ್ತಲಿನವರನ್ನು ಗೋಳಾಡಿಸುವ ಬದುಲು ನನ್ನ ವ್ಯಥೆಯನ್ನು ಹತ್ತಿಕ್ಕಿ ನಾಲ್ಕು ಜನರನ್ನು ಸಂತೋಷದಿಂದಿರುವಂತೆ ಮಾಡಿ ನಾನೂ ನಗುನಗುತ್ತಾ ಇರೋದೇ ಒಳ್ಳೇದು ಅಂತ ನನ್ನ ಅಭಿಪ್ರಾಯ" ಎಂದಳು.

"ಅತ್ತಿಗೇ, ನೀನು ನಂಬಿದ ಸಿದ್ಧಾಂತಾನ ಎಂದಿಗೂ ಕೈಬಿಡಬೇಡ. ಅಶಾಂತಿಯೆಂದರೇನೆಂಬುದೇ ತಿಳಿಯದಂತೆ ನಿನ್ನ ಬಾಳು ಕಳೆದುಹೋಗುತ್ತದೆ" ಎಂದಳು ಜಾನಕಿ.

ಗೌರವ, ಪ್ರೀತಿ, ಅಭಿಮಾನ ತುಂಬಿದ ಕಣ್ಣುಗಳಿಂದ ಆ ಇಬ್ಬರು ಸ್ತ್ರೀಯರ ಕಡೆಗೂ ನೋಡುತ್ತಾ ನಿಂತಿದ್ದ ಪ್ರಕಾಶ.

* * *

"ನೋಮ್ಮೊ, ಮಲ್ಲಿಗೆ ಮೊಗ್ಗು....ಸಂಪಿಗೆ ಹೂ....ದವನ ಮರುಗ.... ಏನು ಬೇಕು?"

ಹೂಮಾರುವವಳ ಪ್ರಶ್ನೆಗೆ ಪ್ರಕಾಶ ಅವಳ ಕೈಗೆ ನಾಲ್ಕಾಣೆ ಕೊಡುತ್ತ "ಮಲ್ಲಿಗೆ ಮೊಗ್ಗು" ಎಂದ.

ಹೂಮಾರುವವಳು ಮಲ್ಲಿಗೆ ಮೊಗ್ಗನ್ನು ಅಳೆದು ಮುತ್ತುಗದ ಎಲೆಯಲ್ಲಿ ಹಾಕಿದಳು.

"ಒಳ್ಳೆ ಮೊಗ್ಗು ನೋಡಿ ಹಾಕು" ಎಂದ ಪ್ರಕಾಶ.

"ನೋಡಿ ಸೋವಿಮಾ ಎಂಗದೆ. ಒಳ್ಳೇ ದಿವಿನಾದ ಮೊಗ್ಗು"

ಬಾಳೇನಾರಿನಲ್ಲಿ ಅವಳು ಕಟ್ಟಿಕೊಟ್ಟ ಹೂವಿನ ಪೊಟ್ಟಣದೊಂದಿಗೆ ಉತ್ಸಾಹದಿಂದ ಮನೆಯ ಕಡೆ ಹೆಜ್ಜೆ ಹಾಕಿದ ಪ್ರಕಾಶ.

* * *

ಆ ದಿನ ಎಲ್ಲರಿಗಿಂತ ಮುಂಚೆ ಹಾಸಿಗೆಯಿಂದ ಎದ್ದಿದ್ದ ಪ್ರಕಾಶ. ಬೆಳಗಿನ ಝಾವ ನಾಲ್ಕು ಗಂಟೆಗೇ ಎದ್ದು ಬೀದಿ ಬಾಗಿಲಲ್ಲಿ ಸಾರಿಸಿ ರಂಗೋಲಿ ಇಡುವುದೆಂದರೆ ಎಲ್ಲಿಲ್ಲದ ಉತ್ಸಾಹ ಕನಕಳಿಗೆ. ಸಂಕ್ರಾಂತಿ, ಉಗಾದಿ, ವಿಜಯದಶಮಿ ಮುಂತಾದ ಹಬ್ಬಗಳಾದರೆ ಇನ್ನು ಬೇರೆ ಕೇಳಬೇಕಾದ್ದೇ ಇಲ್ಲ.

ವಾರಕ್ಕೊಂದು ಸಲ ರಂಗೋಲಿ ಹಿಟ್ಟುಕೊಳ್ಳಲು ಹಣ ಕೇಳಿದಾಗ ಲೆಲ್ಲಾ ಶ್ರೀಹರಿ ಬೇಸರಪಟ್ಟುಕೊಳ್ಳುತ್ತಿದ್ದ. "ಮೊನ್ನೆ ತಾನೇ ತಗೊಂಡೆಯಲ್ಲ, ಆಗಲೇ ಆಗಿಹೋಯಿತೇನು? ಶಾಸ್ತ್ರಕ್ಕೆ ನಾಲ್ಕು ಗೆರೆ ಎಳೆದರೆ ಸಾಲದೇ? ಬೀದಿಯೆಲ್ಲಾ ಸಿಂಗಾರ ಮಾಡಬೇಕೆ? ಊರಿನವರಿಗೆಲ್ಲಾ ನೀನೆಷ್ಟು ಚೆನ್ನಾಗಿ ಹಸೆ ಹಾಕುತ್ತೀ ಅಂತ ತೋರಿಸಬೇಕೇನು?" ಎನ್ನುತ್ತಿದ್ದ.

ಗಂಡನ ಮಾತಿಗೆ ಎದುರಾಡಲಾರದೆ ನಿಸ್ಸಹಾಯಳಾಗಿ ಅತ್ತೆಯ ಕಡೆ ನೋಡುತ್ತಿದ್ದಳು ಕನಕ.

"ಹುಡುಗಿ ಉತ್ಸಾಹದಿಂದ ರಂಗೋಲಿ ಹಾಕ್ತೀನೀಂದ್ರೆ ಹಾಗೇಕೆ ಅಂತೀಯೋ ಶ್ರೀಹರಿ? ಆ ದುಡ್ಡಿನಲ್ಲಿ ನೀನೇನು ಕೋಟೆ ಕಟ್ಟೋಲ್ಲ ಬಿಡು" ಎನ್ನುತ್ತಿದ್ದರು ಸುಂದರಮ್ಮ.

ಎಂದಾದರೂ ಕನಕಳಿಗೆ ಬಿಡುವಿಲ್ಲದೆ, ಸುಂದರಮ್ಮನಿಗೂ ಕೈ ಬಿಡುವಿಲ್ಲದೆ ಜಾನಕಿ ಶಾಸ್ತ್ರಕ್ಕೆ ಒಂದೆರಡು ಗೆರೆ ಎಳೆದು ಸುಮ್ಮನಾದಾಗ ಬೀದಿ ಬಾಗಿಲಿಗೆ ಬಂದು ನಿಂತು ಒಂದು ನಿಮಿಷ ಮುಖ ಸಿಂಡರಿಸುತ್ತಿದ್ದ ಶ್ರೀಹರಿ. "ಮನೆ ಮುಂದೆ ಲಕ್ಷಣವಾಗಿ ಒಂದಿಷ್ಟು ರಂಗೋಲಿ ಹಾಕೋಕೂ ಬಿಡುವಿಲ್ಲವೆ?" ಎಂದು ಗೊಣಗುತ್ತಿದ್ದ.

ಆ ದಿನ ವಿಜಯದಶಮಿ. ದಿನಕ್ಕಿಂತಲೂ ಸ್ವಲ್ಪ ಬೇಗನೇ ಎದ್ದಿದ್ದಳು ಕನಕ. ಅಷ್ಟು ಹೊತ್ತಿಗಾಗಲೇ ಪ್ರಕಾಶ ಎದ್ದು ಹಲ್ಲುಜ್ಜಿಕೊಳ್ಳುತ್ತಿದ್ದ. ಯಾರು ಎಷ್ಟೇ ಎಬ್ಬಿಸಲಿ ಬಿಸಿಲು ಮುಖಕ್ಕೆ ತಾಕಿದ ಹೊರತೂ ಏಳುವ ಅಭ್ಯಾಸವಿಲ್ಲದ ಪೈದ, ಆ ದಿನ ಇನ್ನೂ ಕತ್ತಲಿರುವಾಗಲೇ ಎದ್ದುದನ್ನು ನೋಡಿ ಕನಕಳಿಗೆ ಆಶ್ಚರ್ಯವಾಯಿತು. ಎಷ್ಟೇ ಚಳಿಯಿದ್ದರೂ ಪ್ರಕಾಶ

ಬೀದಿಯ ಜಗುಲಿಯ ಮೇಲೆಯೋ ಮಲಗುತ್ತಿದ್ದ. ರಾತ್ರಿ ಊಟಮಾಡಿ ತನ್ನ ಜಂಖಾನೆ, ಪುಸ್ತಕಗಳನ್ನು ಹಿಡಿದು ಜಗುಲಿ ಸೇರಿದರೆ ಮತ್ತೆ ಮಾರನೆಯ ದಿನವೇ ಮನೆಯಲ್ಲಿ ಕಾಲಿಡುತ್ತಿದ್ದದ್ದು. ಏನಾದರೂ ಓದಿಕೊಳ್ಳಬೇಕಾಗಿದ್ದರೂ ಬೀದಿಲೈಟಿನ ಬೆಳಕಿನಲ್ಲೇ ಓದಿಕೊಳ್ಳುತ್ತಿದ್ದ. ಇಲ್ಲಾಂದರೆ ಮುಸುಕೆಳೆದು ನಿದ್ದೆ ಮಾಡುತ್ತಿದ್ದ.

ದಿನಾ ಬೆಳಿಗ್ಗೆ ಅತ್ತಿಗೆ ರಂಗೋಲಿ ಹಾಕಿ ಹಿಂತಿರುಗುವಾಗ ಎಬ್ಬಿಸಿ ಹೋಗುತ್ತಿದ್ದಳು. ಅನಂತರ ಹಲ್ಲುಜ್ಜಿಕೊಳ್ಳಲು ಬಂದ ಅಣ್ಣ ಎರಡನೆಯ ಸಲ ಎಬ್ಬಿಸುತ್ತಿದ್ದ. ಪೊರಕೆಹಿಡಿದು ಜಗುಲಿಗುಡಿಸಲು ಬಂದ ತಾಯಿ ಮೂರನೆಯ ಸಲ ಎಬ್ಬಿಸುತ್ತಿದ್ದರು. "ಏಳೋ ಪ್ರಕಾಶಾ, ಹೊತ್ತೇರಿದೆ. ಕಸಗುಡಿಸಬೇಕು" ಎನ್ನುತ್ತಿದ್ದರು. ಆಗ ಸಹ ಮೈಮುರಿಯುತ್ತಾ ನಿದಾನವಾಗಿ ಏಳುತ್ತಿದ್ದ ಪ್ರಕಾಶ. ಅಂಥಾದ್ದು ಈ ದಿನ ಇನ್ನೂ ಬೆಳಕುಹರಿಯದೇನೇ ಏಕೆ ಎದ್ದಿರ ಬಹುದು ಎಂದುಕೊಂಡಳು, ಕನಕ.

"ಏನಪ್ಪಾ ಪ್ರಕಾಶ, ಆಗಲೇ ಎದ್ದುಬಿಟ್ಟಿದ್ದೀ. ಈ ದಿನ ಸೂರ್ಯ ಪಶ್ಚಿಮದಿಕ್ಕಿನಲ್ಲಿ ಹುಟ್ಟುತ್ತಾನೆ ಅಂತ ಕಾಣುತ್ತೆ" ಎಂದಳು ಕನಕ.

"ಈ ದಿನ ವಿಜಯದಶಮಿಯಲ್ಲವೇ ಅತ್ತಿಗೆ, ಬೇಗ ಸ್ನಾನಮಾಡೋಣ ಅಂತ ಸತ್ಸಂಕಲ್ಪ ಹುಟ್ಟಿದೆ" ಎಂದ ಪ್ರಕಾಶ.

ಅತ್ತಿಗೆ ಇನ್ನೂ ರಂಗೋಲಿ ಹಾಕುತ್ತಿರುವಾಗಲೇ ಸ್ನಾನಮಾಡಿ ಬಟ್ಟೆ ಹಾಕಿಕೊಂಡು ಹೊರಗೆ ಬಂದ ಪ್ರಕಾಶ.

"ಅದೇನೋ, ಆಗಲೇ ಎಲ್ಲಿ ಹೊರಟೆ?" ಎಂದು ಆಶ್ಚರ್ಯದಿಂದ ಪ್ರಶ್ನಿಸಿದಳು ಕನಕ.

ಪ್ರಕಾಶ ಬಾಯಮೇಲೆ ಬೆರಳಿಟ್ಟುಕೊಂಡು, "ಕೆಲಸದಮೇಲೆ ಹೊರಟವ ರನ್ನು ಹಾಗೆ ಕೇಳಬಾರದೂಂತ ನಿಮ್ಮ ತಾಯಿ ಹೇಳಿಕೊಡಲಿಲ್ಲವೇನತ್ತಿಗೆ?" ಎಂದ ನಗುತ್ತಾ.

ಪ್ರಕಾಶ ಆ ಮಾತನ್ನು ತಮಾಷೆಗೆ ಹೇಳಿದ್ದರೂ ಕನಕ ನಿಜವೆಂದು ನಂಬಿ ತಾನು ಹಾಗೆ ಕೇಳಿದ್ದಕ್ಕಾಗಿ ನೊಂದುಕೊಂಡಳು.

"ಅತ್ತಿಗೆ, ವಿಜಯದಶಮಿಯ ದಿನ ಯಾವ ಕೆಲಸ ಪ್ರಾರಂಭಿಸಿದರೂ ಜಯಪ್ರದವಾಗಿ ನೆರವೇರುತ್ತದೆ ಅಂತಾರೆ, ನಿಜವೇ?" ಎಂದ ಪ್ರಕಾಶ.

"ನಿಜ ಕಣಪ್ಪ, ಪೂರ್ವಕಾಲದಲ್ಲಿ ರಾಜರು ವಿಜಯದಶಮಿಯ ದಿನವೇ ಯುದ್ಧಕ್ಕೆ ಹೊರಡುತ್ತಿದ್ದರು...."

"ಹಾಗೇನು? ಮತ್ತೆ ಎರಡೂ ಪಕ್ಷಗಳಿಗೆ ಜಯಲಭಿಸುವುದಿಲ್ಲವಲ್ಲಾ,

ಎರಡು ಪಕ್ಷಗಳಿಗೂ ವಿಜಯದಶಮಿಯೇ ತಾನೇ?"

ಆ ನಂಬಿಕೆಯಲ್ಲಿದ್ದ ಅಸಂಗತ ವಿಷಯ ಕನಕಗಳಿಗೂ ಮನವರಿಕೆಯಾಯಿತು.

"ಆದಿರಲಿ ಅತ್ತಿಗೆ. ನಿನಗೆ ನಂಬಿಕೆಯಿದೆಯಾದ್ದರಿಂದ ನಾನೂ ನಂಬುತ್ತೇನೆ. ನನ್ನನ್ನು ಆಶೀರ್ವದಿಸು" ಎಂದು ಆಕೆ ಮುಂದೆ ತಲೆಬಾಗಿದ ಪ್ರಕಾಶ.

"ಇಷ್ಟಕ್ಕೂ...." ಎಂದು ಏನೋ ಕೇಳಬೇಕೆಂದುಕೊಂಡ ಕನಕ ಅಷ್ಟರಲ್ಲಿಯೇ ತನ್ನ ಉದ್ದೇಶವನ್ನು ಬದಲಿಸಿಕೊಂಡು "ನೀನು ಯಾವ ಕೆಲಸ ಪ್ರಾರಂಭಿಸಿದರೂ ಆದು ಸಫಲವಾಗುತ್ತೆ ಪ್ರಕಾಶ. ನನಗೆ ಆ ನಂಬಿಕೆಯಿದೆ" ಎಂದಳು.

ಅತ್ತಿಗೆಯ ಆಶೀರ್ವಾದ ಪಡೆದು ಹಿಂತಿರುಗಿ ನೋಡದೆ ನಡೆದ ಪ್ರಕಾಶ.

ಹತ್ತುಗಂಟೆಗೆಲ್ಲಾ ಸುಂದರಮ್ಮ ಒಂದು ಪಲ್ಯ, ಸಾರು, ಅನ್ನ, ಹಬ್ಬ ಅಂತ ಒಂದಿಷ್ಟು ಹುಗ್ಗಿ ಮಾಡಿಟ್ಟರು. ನೈವೇದ್ಯಕ್ಕಾದರೂ ಒಂದಿಷ್ಟು ಪಾಯಸ ಮಾಡೋಣವೆಂದರೆ ಹಾಲು, ಸಕ್ಕರೆ ಇರಲಿಲ್ಲವಾದ್ದರಿಂದ ಸುಮ್ಮನಾಗಿದ್ದರು. ಉಳ್ಳವರು ಹೋಳಿಗೆ ಪಾಯಸದೊಂದಿಗೆ ಹಬ್ಬದಡಿಗೆ ಮಾಡಿ ಉಣ್ಣುತ್ತಾರೆ. ನಮಗಿಷ್ಟೇ ಪ್ರಾಪ್ತಿ ಎಂದುಕೊಂಡರು.

ಮಕ್ಕಳೆಲ್ಲಾ ನಡುಮನೆಯಲ್ಲಿ ಕುಳಿತು ಸರಸ್ವತಿಪೂಜೆ ಮಾಡುತ್ತಿದ್ದರು. ಕಣ್ಣತುಂಬಾ ಮಕ್ಕಳನ್ನು ನೋಡಿ ದೇವರಿಗೆ ನಮಸ್ಕಾರಮಾಡಿ ಬರೋಣ ಎಂದು ಸುಂದರಮ್ಮ ನಡುಮನೆಗೆ ಬಂದರು. ಶ್ರೀಹರಿ, ಸಾಂಬು, ಶಾಂತ ವರಸೆಯಾಗಿ ಕುಳಿತು ಪೂಜೆ ಮಾಡುತ್ತಿದ್ದರು. ಕನಕ ದೇವೀಸಹಸ್ರನಾಮ ಹೇಳುತ್ತಿದ್ದಳು. ಆಕೆಗೆ ಬಂದ ಒಂದಿಷ್ಟು ಓದನ್ನೂ ಪೂಜೆ ಪುನಸ್ಕಾರಗಳಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದಳು ಕನಕ. ಆ ಹಾಡುಗಳೂ, ಪೂಜಾವಿಧಾನ ಎಲ್ಲಾ ಕಂಠ ಪಾಠವಾಗಿತ್ತವಳಿಗೆ. ಆದರೂ ಎಲ್ಲಾದರೂ ತಪ್ಪುತ್ತೇನೇನೋ ಎಂದು ಪುಸ್ತಕ ಹತ್ತಿರದಲ್ಲೇ ಇಟ್ಟುಕೊಂಡಿರುತ್ತಿದ್ದಳು. ಪೂಜೆ ಮುಗಿದು ಆರತಿ ಮಾಡಿದಮೇಲೆ "ಪ್ರಕಾಶ ಎಲ್ಲೋ" ಎಂದು ಕೇಳಿದರು ಸುಂದರಮ್ಮ.

"ಬೆಳಗಿನ ಝಾವ ನಾನಿನ್ನೂ ರಂಗೋಲಿ ಹಾಕ್ತಿರೋವಾಗಲೇ ಏನೋ ಕೆಲಸ ಇದೇಂತ ಹೊರಗೆ ಹೋದ ಅತ್ತೆ. ಇನ್ನೂ ಬರಲಿಲ್ಲ" ಎಂದಳು ಕನಕ.

"ಹಬ್ಬದ ದಿನ ಎಲ್ಲಿ ಅಲೀತಿದಾನೋ, ಊಟದ ಹೊತ್ತಿಗಾದರೂ ಮನೆಗೆ ಬಾರದೆ" ಎಂದರು ಸುಂದರಮ್ಮ.

"ಪೂಜೆ, ಪುನಸ್ಕಾರ ಬೇಕೂಂತಿದ್ದರಲ್ಲವೇ ಮನೆಗೆ ಬರೋದು. ಈ ನಡುವೆ ಸದಾ ಆ ಅಪ್ಪಣ್ಣನ ಹಿಂದೆ ತಿರುಗುತ್ತಿದಾನೆ. ಅವನ ಜೊತೆ ಸ್ನೇಹ

ವಂತೆ ಇವನಿಗೆ, ಹೇಗಿದೆ ನೋಡು" ಎಂದ ಶ್ರೀಹರಿ.

"ಹೋಗಲಿ ಬಿಡಪ್ಪಾ. ಮನೆಗೆ ಬಂದರೆ ಅವನನ್ನೇನೂ ಅನ್ನಬೇಡ ಹಬ್ಬದ ದಿನ."

"ನಾನೇಕೆ ಅಂತೀನಮ್ಮಾ. ಅವನ ಕರ್ಮ. ಎಲ್ಲಾದರೂ ಹಾಳಾಗಲಿ."

ಜಾನಕಿ ಏನೋ ಹೇಳಬೇಕೆಂದು ಬಾಯಿತೆರೆಯುವಷ್ಟರಲ್ಲಿಯೇ "ಅಗೋ, ಅಣ್ಣ" ಎಂದಳು ಶಾಂತ—ಪ್ರಕಾಶ ಒಳಕ್ಕೆ ಬರುತ್ತಿದ್ದುದನ್ನು ನೋಡಿ.

"ಇಷ್ಟು ಹೊತ್ತು ಎಲ್ಲಿ ಅಲೀತಾ ಇದೀಯೋ. ಹಬ್ಬದ ದಿನ ಮನೆಯಲ್ಲಿದ್ದು ಪೂಜೆ ಮಾಡಿಕೋಬೇಡವೇನೋ" ಎಂದರು ಸುಂದರಮ್ಮ.

"ನಾನು ಮಾಡದಿದ್ದರೇನಮ್ಮಾ. ನೀವೆಲ್ಲಾ ಮಾಡಿದೀರಲ್ಲಾ. ನನಗೆ ಹೇಗೂ ವಿದ್ಯೆ ಹತ್ತಲಿಲ್ಲ. ಈಗ ಪೂಜೆ ಮಾಡಿದರೂ ಸರಸ್ವತಿ ನನ್ನನ್ನು ಕರುಣಿಸುತ್ತಾಳೆಂಬ ನಂಬಿಕೆಯಿಲ್ಲ. ಆಕೆಗೆ ಸಾಕೆನಿಸಿದಷ್ಟು ಕೊಟ್ಟು 'ನಿನಗೆ ಕತೆ–ಕಾದಂಬರಿ ಓದಿಕೊಳ್ಳಲು ಇಷ್ಟು ಸಾಕು. ಇನ್ನೂ ಹೆಚ್ಚಾದರೆ ನಿನ್ನ ಮೆದುಳು ಸಹಿಸೊಲ್ಲ' ಎಂದಿದ್ದಾಳೆ. ಕೊಟ್ಟಷ್ಟಕ್ಕೆ ತೃಪ್ತಿಪಡೋ ಸ್ವಭಾವ ನನ್ನದು. ಪೂಜೆಮಾಡಿ ಇನ್ನೂ ಏನು ಕೋರಲಿ?"

"ಒಳ್ಳೇ ಜಾಣತನದ ಮಾತಾಡೋದು ಕಲಿತಿದ್ದಿ ಬಿಡು. ಹೋಗಲಿ ಈಗಲಾದರೂ ಊಟದ ಹೊತ್ತಿಗೆ ಮನೆಗೆ ಬಂದೆಯಲ್ಲ. ಅಷ್ಟೇ ಸಾಕು."

"ಇಗೋಮ್ಮಾ. ಗೋದಿಹಿಟ್ಟು, ಸಕ್ಕರೆ ತಂದಿದ್ದೀನಿ. ಹಬ್ಬ ಅಂದರೆ ನಿಮಗೆಲ್ಲಾ ಪೂಜೆ–ಪುನಸ್ಕಾರ ನೆನಪಾಗುತ್ತೆ. ನನಗೆ ಹಬ್ಬದಡಿಗೆ ನೆನಪಾಗುತ್ತೆ. ಹೋಳಿಗೆ ತಿಂದು ತುಂಬಾ ದಿನವಾಯಿತಲ್ಲವೇನಮ್ಮಾ. ಎಲ್ಲಿ, ಒಂದು ಗಂಟೇಲಿ ಹೋಳಿಗೆ ಮಾಡಬೇಕು ಮತ್ತೆ. ಓಹೋ, ಏನತ್ತಿಗೆ ಹಾಗೆ ನೋಡ್ತೀರಿ? ನನಗೆ ದೃಷ್ಟಿಯಾದೀತು. ನಾನು ತಿಂದು ಮಿಕ್ಕರೆ ನೀವೂ ತಿನ್ನುವಿರಂತೆ ಹೋಳಿಗೆ" ಎಂದ ಪ್ರಕಾಶ ನಗುತ್ತಾ.

"ಇಷ್ಟಕ್ಕೂ, ನಿನಗೆ ದುಡ್ಡೆಲ್ಲೀಮೋ" ಎಂದ ಶ್ರೀಹರಿ ಸಂಶಯದಿಂದ.

"ಆ ದಿನ ಸಾಲ ಕೊಟ್ಟೆ ಅಂತ ಹೇಳಲಿಲ್ಲವೇನಣ್ಣಾ. ಅದು ಈವತ್ತು ವಾಪಸು ಬಂತು...."

"ಮತ್ತೆ ನೀನು ಮಾಡಿದ ಸಾಲ?"

"ಅದೂ ತೀರುತ್ತಣ್ಣಾ. ನೀನೇನೂ ಹೆದರಬೇಡ."

ಆದಿನ ಮನೆಯಲ್ಲಿ ಎಲ್ಲರೂ ಸಂತೋಷದಿಂದ ಹಬ್ಬದಡಿಗೆ ಊಟ ಮಾಡಿದರು. ಸುಂದರಮ್ಮ ಹಬ್ಬಕ್ಕೆ ಒಂದು ಹೊಸಕಳೆ ಬಂದಂತೆ ಸಂತೋಷಿಸಿದರು.

ಮಾರನೆಯ ದಿನ ಸಹ ಮುಂಜಾನೆ ಎದ್ದು ಹೊರಗೆ ಹೊರಡಲು ಸಿದ್ಧನಾಗುತ್ತಿದ್ದ ಪ್ರಕಾಶನನ್ನು ನೋಡಿ ಕನಕ "ಮತ್ತೆ ಸಕ್ಕರೆಗೋಸ್ಕರಾನಾ?" ಎಂದು ಕೇಳಿದಳು.

"ಇಲ್ಲ ಅತ್ತಿಗೇ, ಬೇರೆ ಕೆಲಸ ಇದೆ" ಎಂದು ಹೊರಟುಹೋದ ಪ್ರಕಾಶ.

ಹೊತ್ತುಹುಟ್ಟುವ ಮುಂಚೆಯೇ ಬೀದಿಗಿಳಿದು, ಕತ್ತಲಾದನಂತರ ಹಿಂತಿರುತಿದ್ದ ಪ್ರಕಾಶ ಮಾಡುತ್ತಿದ್ದ ವ್ಯವಹಾರ ಏನೆಂದು ಆಲೋಚಿಸತೊಡಗಿದಳು ಕನಕ. ಕೆಲವು ದಿನಗಳವರೆಗೂ ಪ್ರಕಾಶ ಎಲ್ಲಿ ಎಂದು ಮನೆಯಲ್ಲಿ ಯಾರಾದರೂ ಕೇಳಿದರೆ ಏನಾದರೂ ನೆಪ ಹೇಳಿ ತನ್ನ ರಹಸ್ಯವನ್ನು ಕಾಪಾಡುವ ಭಾರವನ್ನು ಅತ್ತಿಗೆಯಮೇಲೆಯೇ ಹಾಕಿದ್ದ ಪ್ರಕಾಶ.

* * *

ನಿದ್ದೆ ಬಾರದೆ ಹಾಸಿಗೆಯ ಮೇಲೆ ಬಿದ್ದು ಹೊರಳುತ್ತಿದ್ದಳು ಜಾನಕಿ. ನಿದ್ರಾದೇವಿಯ ಕಟಾಕ್ಷಕ್ಕಾಗಿ ಆ ರೀತಿ ತಪಿಸಬೇಕಾದ ಅವಸ್ಥೆ ಅವಳಿಗೆಂದೂ ಬಂದಿರಲಿಲ್ಲ. ಎಷ್ಟು ಆಲೋಚನೆಗಳಿದ್ದರೂ ಅವನ್ನೆಲ್ಲಾ ಪಕ್ಕಕ್ಕಿರಿಸಿ ನಿರ್ಮಲವಾಗಿ ಮಲಗಿ ನಿದ್ರಿಸುತ್ತಿದ್ದಳು. ಆದರೆ ಆ ದಿನ ಸುಮಾರು ಎರಡು ಮೂರು ಗಂಟೆ ಮಲಗಿದ್ದರೂ ನಿದ್ದೆ ಬರಲಿಲ್ಲ.

ವರಾಂಡದಲ್ಲಿ ಸಾಂಬಶಿವ ದೀಪದ ಮುಂದೆ ಕುಳಿತು ಓದಿಕೊಳ್ಳುತ್ತಿದ್ದ. ಅಣ್ಣನ ಪಕ್ಕದಲ್ಲಿ ಕುಳಿತು ಶಾಂತ ಒಂದೆರಡು ಪುಸ್ತಕ ತಿರುವಿ ಹಾಕಿದಳು. ಅನಂತರ ಆಕಳಿಸುತ್ತಾ ಎದ್ದು ಹಾಸಿಗೆಯ ಮೇಲೆ ಮಲಗಿದಳು.

ಓದಿಕೊಳ್ಳುತ್ತೇನೆಂದು ಹಠ ಮಾಡಿ ಕಾಲೇಜಿಗೆ ಸೇರಿದ್ದ ಶಾಂತ, ಈ ನಡುವೆ ಓದಿನ ವಿಷಯದಲ್ಲಿ ಸಾಕಷ್ಟು ಶ್ರದ್ಧೆ ವಹಿಸುತ್ತಿಲ್ಲವೆನಿಸುತ್ತಿತ್ತು ಜಾನಕಿಗೆ. ಹಿಂದಿನ ವರ್ಷ ರಾತ್ರಿ ಎಷ್ಟು ಹೊತ್ತಿನವರೆಗೆ ಓದಿದರೂ ಬೆಳಗಿನ ಜಾವ ಮತ್ತೆ ಎದ್ದು ಓದುತ್ತಿದ್ದಳು. ಈಗ ಬೆಳಿಗ್ಗೆ ಬಿಸಿಲೇರಿದರೂ ಏಳುತ್ತಿರಲಿಲ್ಲ. ಎದ್ದಾಗಿನಿಂದ ಕಾಲೇಜಿಗೆ ಹೊರಡುವ ತಯಾರಿಯಲ್ಲೇ ಹೊತ್ತು ಸರಿಹೋಗುತ್ತಿತ್ತು. ಊಟಮಾಡಿ ಕಾಲೇಜಿಗೆ ಹೊರಡುತ್ತಿದ್ದಳು. ಪುಸ್ತಕ ಮುಟ್ಟುವ ಗೋಜಿಗೇ ಹೋಗುತ್ತಿರಲಿಲ್ಲ. ತಂಗಿ ಅಲಂಕಾರಕ್ಕೋಸ್ಕರ ಅಷ್ಟು ಸಮಯವನ್ನು ವ್ಯರ್ಥಗೊಳಿಸುವುದು ಜಾನಕಿಗೆ ಸರಿಬರಲಿಲ್ಲ.

"ಓದೋ ಹುಡುಗಿ. ಸ್ವಲ್ಪ ಬೇಗ ತಯಾರಾಗೋದನ್ನ ಕಲಿ. ಎದ್ದಾಗಿನಿಂದ ಅಲಂಕಾರಾನೇ ಆದರೆ ಹೇಗೆ?" ಎಂದಳು ಒಂದು ದಿನ.

"ನಾನೇನು ಅಲಂಕಾರ ಮಾಡಿಕೊಳ್ತಿದೀನಕ್ಕಾ. ಅಲಂಕಾರ ಮಾಡಿಕೊಳ್ಳೋಕೆ ನಮ್ಮನೇಲಿ ಏನಿದೆ? ಸೋಪುಹಾಕಿ ಮುಖತೊಳೆದು, ತಲೆ ಬಾಚಿಕೊಳ್ಳೋದೂ ಒಂದು ಅಲಂಕಾರಾನೇ? ಅಕ್ಕಾ, ನಮ್ಮ ಕಾಲೇಜಿನಲ್ಲಿ ಹೇಗೆ ಸಿಂಗಾರಮಾಡಿಕೊಂಡು ಬರ್ತಾರೇಂತಿ? ಅವರ ಸೀರೆ....ಅಲಂಕಾರ ನೋಡ್ತಿದ್ದರೆ....ಅಬ್ಬಾ...."

'ನೋಡ್ತಿದ್ದರೆ' ಶಾಂತನಿಗೆ ಏನೆನ್ನುಸುತ್ತಿತ್ತೆಂಬುದನ್ನು ಆ ಮಾತಾಡುವಾಗಿನ ಅವಳ ಕಣ್ಣುಗಳೇ ಹೇಳುತ್ತಿದ್ದುವು.

"ಹೋಗಲಿ ಬಿಡು ಶಾಂತಾ, ಅವರು ಅಲಂಕಾರ ಮಾಡಿಕೋಬಹುದು. ಆದರೆ ನಿನ್ನಷ್ಟು ಚೆನ್ನಾಗಿರಬಲ್ಲರೇನು? ಯಾವ ಅಲಂಕಾರವೂ ಇಲ್ಲದೆ, ಆಭರಣಾನೂ ಇಲ್ಲದೆ ನೀನು ಚೌಕಳಿ ಸೀರೆ ಉಟ್ಕೊಂಡು ನಡೆಯುತ್ತಿದ್ದರೆ ಎಷ್ಟು ಸುಂದರವಾಗಿ ಕಾಣುತ್ತೀಯೋ ಗೊತ್ತೇನು?"

"ಸರಿ ಬಿಡು. ಒಂದು ವರ್ಷದಿಂದ ಆ ಚೌಕಳಿ ಸೀರೇನ ತಿಂಗಳಲ್ಲಿ ಇಪ್ಪತ್ತು ದಿನ ಉಡುತ್ತಲೇ ಇದೀನಿ. ಅಮ್ಮನ್ನ ಇನ್ನೊಂದು ಸೀರೆ ತೆಗೆದುಕೊಡಮ್ಮ ಅಂದರೆ 'ಅತ್ತಿಗೆ, ಅಕ್ಕ ಉಟ್ಕೊಳ್ಳುತ್ತಿಲ್ಲವೇನೆ?' ಅಂತಾರೆ. ಹೇಳೋಕೇನಂತೆ, ಮನೆಯಿಂದ ಆಚೆ ಬರದ ಅತ್ತಿಗೆ, ಎಂತಹ ಸೀರೆ ಉಟ್ಟರೂ ಪರವಾಗಿಲ್ಲ. ನೀನು ಸರಿಯೇಸರಿ, ವಿರಾಗಿಣಿ. ನಿನಗೇನೂ ಬೇಡ. ಕಾಲೇಜಿನಲ್ಲಿ ನನಗೆ 'ಚೌಕಳಿ ಸೀರೆ' ಅಂತಲೇ ಹೆಸರಿಟ್ಟಿದಾರೆ, ಗೊತ್ತೇನು?" ಶಾಂತಳ ಕಣ್ಣಲ್ಲಿ ನೀರಾಡುತ್ತಿತ್ತು.

ಶಾಂತ ತನ್ನ ಆಸೆ-ಆಕಾಂಕ್ಷೆಗಳನ್ನು ಎಂತಹ ಪರಿಸ್ಥಿತಿಯಲ್ಲಿಯೂ ಬಚ್ಚಿಟ್ಟುಕೊಳ್ಳಲು ಪ್ರಯತ್ನಿಸುತ್ತಿರಲಿಲ್ಲ. "ಹಣವಿದ್ದರೆ ಎಂತಹ ಲೋಪವನ್ನಾದರೂ ತುಂಬಿಕೊಳ್ಳಬಹುದು. ಪ್ರಪಂಚದಲ್ಲಿನ ಯಾವ ವಸ್ತುವನ್ನಾದರೂ ನೆನೆಸಿದಾಕ್ಷಣ ಪಡೆಯಬಹುದು. ಹಣವಿದ್ದರೆ ಸಿಗದ ಸುಖ-ಸಂತೋಷಗಳೇನಿವೆ ಹೇಳು? ಆಗ ನಿನ್ನ ಮದುವೇಲಿ ನಿನಗಿಟ್ಟ ಸೀರೆ-ಒಡವೆಗಳನ್ನು ನೋಡಿ ನಿನ್ನದೇ ಅದೃಷ್ಟ ಅಂದುಕೊಂಡೆ. ಅತನಿಗೆ ಓದಿಲ್ಲದಿದ್ದರೇನಂತೆ? ದುಡ್ಡಿದೆಯಲ್ಲಾ ಸಾಕು ಅನ್ನಿಸಿತು. ಅವರು ನಿನಗೆ ಕೊಟ್ಟ ಸೀರೆ, ಒಡವೆಗಳನ್ನು ನೀನೇಕೆ ವಾಪಸು ಕಳುಹಿಸಿದೆಯೋ ನನಗರ್ಥವಾಗುತ್ತಿಲ್ಲ. ಹೋಗಲಿ, ಅಕ್ಕನಿಗಾದರೂ ಇದ್ದರೆ ನಾನೂ ಎಂದಾದರೂ ಇಟ್ಕೋಬಹುದು ಅಂತಿದ್ದೆ" ಎನ್ನುತ್ತಿದ್ದಳು ಶಾಂತ, ಮುಖ ಚಿಕ್ಕದುಮಾಡಿಕೊಂಡು

"ಆ ಒಡವೆ, ವಸ್ತ್ರ ನಿಂಗೇಕೆ ಬಿಡಮ್ಮ. ಅದಕ್ಕಿಂತ ಒಳ್ಳೊಳ್ಳೆ ಒಡವೆ, ಸೀರೆ ಕೊಡಿಸೋ ಗಂಡ ಸಿಗ್ತಾನೆ, ನಿನಗೆ" ಎಂದು ತಂಗಿಗೆ ಸಮಾಧಾನ

ಹೇಳುತ್ತಿದ್ದಳು ಜಾನಕಿ.

ಶಾಂತ ತನ್ನ ಭವಿಷ್ಯದ ಬಗ್ಗೆ ತುಂಬಾ ಆಸೆಯಿಟ್ಟುಕೊಂಡಿದ್ದಳು. ಎಷ್ಟೆಷ್ಟೋ ಗಾಳಿಗೋಪುರ ಕಟ್ಟಿಕೊಳ್ಳುತ್ತಿದ್ದಳು. 'ದೇವರೇ ಇವಳ ಕೋರಿಕೆಗಳು ನೆರವೇರುತ್ತವೆಯೇ? ಅವಳ ಬದುಕೇನಾಗುತ್ತದೆ? ಎಟುಕದ ಆನಂನವನ್ನು ತೋರಿಸಿ ಅವಳನ್ನೇಕೆ ಮೋಸಮಾಡುತ್ತಿ? ವಾಸ್ತವವನ್ನು ಕಡೆಗಣಿಸಿ ಊಹೆಗಳ ಉಯ್ಯಾಲೆಯಲ್ಲೇಕೆ ತೂಗಿಸುತ್ತಿ?' ಎಂದು ಚಿಂತಿಸುತ್ತಿದ್ದಳು ಜಾನಕಿ.

"ಅಕ್ಕ, ಅಕ್ಕ ನಿನಗೆ ಗೊತ್ತೇನಕ್ಕಾ. ನನ್ನ ಕೈಯಲ್ಲಿ ಧನರೇಖೆಯಿದೆಯಂತೆ. ನಮ್ಮ ಕ್ಲಾಸಿನಲ್ಲಿ ಒಬ್ಬ ಹುಡುಗಿ ನನ್ನ ಕೈ ನೋಡಿ ಹೇಳಿದಳು ಮತ್ತೆ. 'ಶಾಂತಾ, ನಿಂಗೆ ಒಳ್ಳೇ ಶ್ರೀಮಂತ ಗಂಡ ಸಿಗ್ತಾನೆ' ಅಂತ."

ಈ ನಡುವೆ ಶಾಂತ ಏನು ಮಾತನಾಡಬೇಕಾದರೂ ಕಾರಿನಲ್ಲಿ ತಿರುಗಾಡುವ ಹುಡುಗರನ್ನೂ, ಮಹಡಿಗಳಲ್ಲಿ ವಾಸಿಸುವ ಹುಡುಗಿಯರನ್ನೂ ದೃಷ್ಟಿಯಲ್ಲಿಟ್ಟುಕೊಂಡೇ ಮಾತನಾಡುತ್ತಿದ್ದಳು. ಅದು ಮನೆಯಲ್ಲಿ ಎಲ್ಲರ ಗಮನಕ್ಕೂ ಬಂದಿತ್ತು.

"ಅಂಥಾ ಮನೇಲಿರೋಕೂ ಪುಣ್ಯಮಾಡಿರಬೇಕಲ್ಲಾ" ಎನ್ನುತ್ತಿದ್ದರು ತಾಯಿ.

"ಏನೋ, ಯಾರಿಗ್ಗೊತ್ತು. ಹಿಂದಿನ ಜನ್ಮದಲ್ಲಿ ನಾನೇನು ಪುಣ್ಯ ಮಾಡಿಕೊಂಡಿದೀನೋ ನೀನು ಕಂಡಿದೀಯಾ?" ಎನ್ನುತ್ತಿದ್ದಳು ಶಾಂತ.

"ಶಾಂತಾ, ಈ ಹುಚ್ಚುಚ್ಚು ಆಲೋಚನೆಗಳನ್ನು ಬಿಟ್ಟು ಶ್ರದ್ಧೆಯಿಂದ ಓದಿಕೋ. ಸಲ್ಲದ ಆಲೋಚನೆಗಳಿಂದ ಕೈಗೆ ಬರುತ್ತಿರುವ ವಿದ್ಯೆಯನ್ನು ಹೋಗಲಾಡಿಸಿಕೊಳ್ಳಬೇಡ" ಎಂದು ಎಚ್ಚರಿಸುತ್ತಿದ್ದಳು ಜಾನಕಿ.

ತನ್ನ ಮಾತಿಗೆ ಎದುರಾಡದಿದ್ದರೂ ತಂಗಿಗೆ ಓದಿನಲ್ಲಿ ಆಸಕ್ತಿ ಕಡಿಮೆಯಾಗಿದೆಯೆಂದು ಜಾನಕಿಗೆ ಅರ್ಥವಾಗಿತ್ತು. ಅವಳಿಗೆ ಓದಿನಲ್ಲಿ ಶ್ರದ್ಧೆ ಹುಟ್ಟುವಂತೆ ಮಾಡಲು ತನ್ನ ಕೈಲಾದಷ್ಟು ಪ್ರಯತ್ನಿಸುತ್ತಿದ್ದಳು ಜಾನಕಿ.

ಜಾನಕಿ ಹಾಸಿಗೆಯಲ್ಲಿ ಒಂದು ಪಕ್ಕದಿಂದ ಇನ್ನೊಂದು ಪಕ್ಕಕ್ಕೆ ಹೊರಳಿ ನೋಡಿದಾಗ ಮನೆಯೆಲ್ಲಾ ಕತ್ತಲಿನಿಂದ ತುಂಬಿತ್ತು. ಸೀಮೆಯೆಣ್ಣೆ ಮುಗಿದುಹೋಗಿ ಬತ್ತಿ ಸುಟ್ಟು ದೀಪ ಆರಿದ ವಾಸನೆ ಬರುತ್ತಿತ್ತು ವರಾಂಡಾದಿಂದ. ಕಿಟಕಿಯಿಂದ ಬೀದಿಯ ದೀಪದ ಬೆಳಕಿನಲ್ಲಿ ಪುಸ್ತಕ ಹಿಡಿದು ನಿಂತು ಓದುತ್ತಿದ್ದ ಸಾಂಬಶಿವ ಕಾಣಿಸಿದ. ಜಾನಕಿ ಹಾಸಿಗೆಯಿಂದೆದ್ದು ಬೀದಿ ಬಾಗಿಲಿಗೆ ಬಂದಳು.

ಬೀದಿಯಲ್ಲಿ ದೊಡ್ಡ ತಟ್ಟೆಯ ಆಕಾರದಲ್ಲಿ ಬಿದ್ದ ದೀಪದ ಬೆಳಕಿನಲ್ಲಿ ಕಂಬಕ್ಕೆ ಆತು ನಿಂತಿದ್ದ ಸಾಂಬಶಿವ. ದೀಪದ ಹುಳುಗಳು ಟಪಟಪನೆ ಅವನ ತಲೆಯಮೇಲೆ ಉದುರುತ್ತಿದ್ದವು. ಪಕ್ಕದ ಚರಂಡಿಯಿಂದ ಸೊಳ್ಳೆಗಳು ಸಂಗೀತ ಹಾಡುತ್ತಾ ಬಂದು ಅವನ ಕೆನ್ನೆಗಳನ್ನು ಮುತ್ತಿಟ್ಟುಕೊಳ್ಳುತ್ತಿದ್ದುವು. ಈ ಕೈಯಿಂದ ಒಂದು ಸಲ ಆ ಕೈಯಿಂದ ಒಂದು ಸಲ ಸೊಳ್ಳೆಗಳನ್ನು ಓಡಿಸುತ್ತಾ ಪುಸ್ತಕ ಓದಲು ಪ್ರಯತ್ನಿಸುತ್ತಿದ್ದ ಸಾಂಬಶಿವ. ಅವನ ಮುಖವನ್ನು ಗಮನಿಸಿ ನೋಡಿದರೆ ಅವನು ಓದುತ್ತಿದ್ದ ವಿಷಯ ಮೆದುಳಿಗೆ ಹತ್ತುತ್ತಿಲ್ಲವೆಂಬುದು ಸ್ಪಷ್ಟವಾಗಿ ಅರ್ಥವಾಗುತ್ತಿತ್ತು.

ಒಂದು ಕ್ಷಣ ಸಾಂಬಶಿವನನ್ನು ದಿಟ್ಟಿಸಿ ನೋಡಿದಳು ಜಾನಕಿ. ಪಕ್ಕದ ಜಗುಲಿಯಮೇಲೆ ಗೊರಕೆ ಹೊಡೆಯುತ್ತಾ ನಿದ್ರಿಸುತ್ತಿದ್ದ ಪ್ರಕಾಶ. ಸೊಳ್ಳೆಗಳ ಸಂಗೀತವಾಗಲೀ, ಚರಂಡಿಗಳ ದುರ್ವಾಸನೆಯಾಗಲೀ ಅವನ ನಿದ್ದೆಗೆ ಅಂತರಾಯವನ್ನುಂಟು ಮಾಡಿರಲಿಲ್ಲ. ಒಬ್ಬ ತಾಯಿಯ ಮಕ್ಕಳಾದ ಸಾಂಬಶಿವ ಪ್ರಕಾಶರನ್ನು ಮತ್ತೆಮತ್ತೆ ತೂಗಿ ನೋಡಿದಳು ಜಾನಕಿ. ಅಣ್ಣ ತಮ್ಮಂದಿರಿಗೆ ಒಂದಿಷ್ಟಾದರೂ ಹೋಲಿಕೆ ಇರುತ್ತದೆ ಅನ್ನುತ್ತಾರೆ. ಆದರೆ ಇವರಿಬ್ಬರಿಗೂ ಹುಡುಕಿ ನೋಡಿದರೂ ಹೋಲಿಕೆ ಕಾಣುತ್ತಿರಲಿಲ್ಲ. ರೂಪ, ಗುಣ, ಭಾವನೆಗಳಲ್ಲಿ ಬೇಕಾದಷ್ಟು ವ್ಯತ್ಯಾಸ ಕಾಣುತ್ತಿತ್ತು. ಅದನ್ನೇ ನೆನಸಿ ಕೊಂಡಳು ಜಾನಕಿ.

ಮನುಷ್ಯ ಜೀವಿಸಲು ವಿಶಾಲವಾದ ಪ್ರಪಂಚವಿತ್ತು. ಮೇಲೆ ಸೂರ್ಯ–ಚಂದ್ರರೂ ಕೆಳಗೆ ಭೂಮಿ, ನಮಗೆ ರಕ್ಷಣೆಯಾಗಿ ನಮ್ಮ ಬದುಕಿಗೆ ಆಸರೆ ಯಾಗಿರುವಾಗ ನಮಗೇನು ಭಯ? ಈ ಪ್ರಪಂಚವೆಲ್ಲಾ ನಿನ್ನದಲ್ಲದಿರಬಹುದು ನಿನ್ನದಾಗಿರುವುದು ಕತ್ತಲು ಕೋಣೆಯಾಗಿರಬಹುದು. ನಿನ್ನ ಕೋಣೆಯಿಂದ ಹೊರಗೆ ಇಣಿಕಿ ನೋಡಲು ನಿನ ನ್ನಾರೂ ಬೇಡವೆನ್ನುವುದಿಲ್ಲ. ಆ ಕತ್ತಲಲ್ಲಿಯೇ ಹುಟ್ಟಿ, ಅಲ್ಲಿಯೇ ಸತ್ತರೂ ನಿನ್ನನ್ನಾರೂ ಲಕ್ಷಿಸರು.

ನಿನ್ನಷ್ಟಕ್ಕೆ ನೀನೇ ಆ ಕತ್ತಲನ್ನು ಸೀಳಿಕೊಂಡು ಹೊರಕ್ಕೆ ಬಾ. ಸ್ವಲ್ಪ ಹೊತ್ತು ನಿನ್ನ ಕಣ್ಣು ಅಭ್ಯಾಸವಿಲ್ಲದ ಬೆಳಕಿನಲ್ಲಿ ತೆರೆದುಕೊಳ್ಳಲಾರದೆ ಕತ್ತಲಿನೊಳಕ್ಕೆ ಮತ್ತೆ ಹೋಗೋಣವೆನ್ನಿಸುತ್ತದೆ. ಆದರೆ ಹಠದಿಂದ ಹತ್ತು ನಿಮಿಷ ಹಾಗೆಯೇ ನಿಂತು ಕಣ್ಣುಬಿಟ್ಟು ನೋಡು.

ಬಣ್ಣಬಣ್ಣದ ಪ್ರಕೃತಿ, ವಿಧವಿಧವಾದ ಜೀವರಾಶಿ ಆನಂದ ಆಮೋದ ಗಳಿಂದ ಜೀವಿಸುತ್ತಾ, ಬದುಕಿನಲ್ಲಿ ಪುರೋಗಮಿಸುತ್ತಿರುವುದನ್ನು ಕಾಣುತ್ತಿ. ಇಲ್ಲಿಯೇ ಸ್ವಲ್ಪ ನಿನ್ನ ಮೆದುಳಿಗೆ ಕೆಲಸ ಹೆಚ್ಚು. ಅವಕ್ಕೆ ಇರುವುದೇನು?

ನಿನ್ನಲ್ಲಿ ಇಲ್ಲದ್ದೇನು? ಅವು ತಮ್ಮ ಬದುಕಿನ ಆವರಣವನ್ನು ದಿನದಿನಕ್ಕೂ ವಿಶಾಲಪಡಿಸಿಕೊಳ್ಳುತ್ತಾ ಸಂತೃಪ್ತಿ ದೊರೆಯುವ ಸ್ಥಳವನ್ನು ಹುಡುಕಿಕೊಂಡು ಹೋಗುತ್ತವೆ.

ಮನುಷ್ಯ ತನ್ನ ಪೂರ್ವಿಕರು ಹಾಕಿದ ಗೆರೆಯನ್ನು ದಾಟಲು ಹೆದರುತ್ತಾನೆ. ಅದೇ ತನಗೆ ಶ್ರೀರಾಮರಕ್ಷೆ ಎಂದುಕೊಳ್ಳುತ್ತಾನೆ. ತಪ್ಪಿನಡೆದರೆ ತನಗೆ ಸರ್ವನಾಶ ತಪ್ಪದೆಂದುಕೊಳ್ಳುತ್ತಾನೆ. ನಾಲ್ಕು ಜನ ನಡೆಯುವ ದಾರಿ ಯಾವಾಗಲೂ ಮಟ್ಟಸವಾಗಿ ಕಸಕಡ್ಡಿ ಇಲ್ಲದೆ ಇರುತ್ತದೆ, ಆದರೆ ಅದು ಈಗಾಗಲೇ ಕಿಕ್ಕಿರಿದು ನಿಮ್ಮ ಹೆಜ್ಜೆ ಊರಲೂ ಸ್ಥಳವಿಲ್ಲದಂತಿರುತ್ತೆ. ಅದನ್ನೇ ನೋಡುತ್ತಾ ಹೊಸಿಲಿನಲ್ಲಿ ಕುಳಿತಿರುವುದಕ್ಕಿಂತ ಸ್ವಲ್ಪ ಸುತ್ತುದಾರಿಯಾದರೂ ಸರಿ, ಕಲ್ಲು, ಮುಳ್ಳು, ಹಳ್ಳ, ಅಡ್ಡಬಂದರೂ ನಿನ್ನ ಗಮ್ಯಸ್ಥಾನ ಸೇರಲು ಇನ್ನೊಂದು ದಾರಿಯಿದ್ದರೆ ಅದನ್ನು ಅನುಸರಿಸು. ಎಂದಿಗಾದರೂ ಅಲ್ಲಿಗೆ ಸೇರುತ್ತೇನೆಂಬ ಉತ್ಸಾಹ ನಿನ್ನನ್ನು ಮುಂದಕ್ಕೆ ನಡೆಯುವಂತೆ ಮಾಡುತ್ತದೆ.

ಗಮ್ಯಸ್ಥಾನ ಸೇರಿದ ನಂತರ ಯಾವ ದಾರಿಯಿಂದ ಬಂದೆಯೆಂದು ನಿನ್ನನ್ನಾರೂ ಪ್ರಶ್ನಿಸುವುದಿಲ್ಲ. ಪರಿಹರಿಸುವುದಿಲ್ಲ. ಪ್ರಾಮಾಣಿಕತೆಯಿಂದ, ಆತ್ಮವಿಶ್ವಾಸದಿಂದ ಮೂಢಾಚಾರಗಳನ್ನು ಮರೆತು ಮುಂದಕ್ಕೆ ನಡೆ. ಕತ್ತಲು ಪಕ್ಕಕ್ಕೆ ಸರಿಯುತ್ತದ. ಬೆಳಕು ನಿನ್ನ ಮನೆಯಲ್ಲಿ ನಿಲ್ಲುತ್ತದೆ ಎಂದು ನಂಬಿದ ಪ್ರಕಾಶನಿಗೂ ತನ್ನ ನೆರಳನ್ನು ಕಂಡು ತಾನೇ ಭಯಪಡುತ್ತಾ, ತನ್ನ ಸುತ್ತಲಿನವರ ನೋಟ ತನ್ನನ್ನು ಪರಿಹಾಸ್ಯಮಾಡುತ್ತಿದೆಯೆಂದು ಭಾವಿಸಿ, ಕುಗ್ಗಿ, ಪ್ರಪಂಚದಲ್ಲಿನ ಎಲ್ಲರ ಭಾರ, ಬಾಧ್ಯತೆಗಳನ್ನು ಹೊರುವುದೇ ತಮ್ಮ ವಿಧಿಯೆಂದು ಬಗೆದು, ಆ ಕಾರ್ಯ ನಿರ್ವಹಣೆಗೆ ತಾನು ಅಶಕ್ತನೆಂದು ಚಿಂತಿಸುತ್ತಾ ತನ್ನ ಉಚ್ಛ್ವಾಸ ನಿಶ್ವಾಸಗಳಲ್ಲಿಯೇ ಮನೋಧೈರ್ಯವನ್ನು ಹೋಗಲಾಡಿಸಿಕೊಳ್ಳುತ್ತಾ ಇರುವ ಸಾಂಬಶಿವನಿಗೂ ಹೋಲಿಸಿ ನೋಡಲು ಜಾನಕಿಯಿಂದಾಗಲಿಲ್ಲ.

"ತುಂಬಾ ಹೊತ್ತಾಗಿದೆ, ಇನ್ನು ಮಲಗಿಕೋಬಾರದೇನೋ" ಎಂದಳು ಮೆಲ್ಲನೆ.

ಸಾಂಬಶಿವ ಹಿಂತಿರುಗಿ ಬಾಗಿಲಲ್ಲಿ ನಿಂತ ಜಾನಕಿಯನ್ನು ನೋಡಿದ. "ಓದಬೇಕಾದ್ದು ತುಂಬಾ ಇದೆಯಕ್ಕಾ. ಎಷ್ಟು ಓದಿದರೂ ತಲೆಗೆ ಹತ್ತುವಂತಿಲ್ಲ. ಪರೀಕ್ಷೆಯಲ್ಲಿ ಹೇಗೆ" ಪಾಸಾಗುತ್ತೀನೋ ನಾನು ಬೇರೆ ಕಾಣೆ" ಎಂದ ಸಾಂಬಶಿವ ಪೆಚ್ಚುಮೋರೆಯಿಂದ.

"ಲೋ ಸಾಂಬೂ, ನಾನೊಂದು ಮಾತು ಕೇಳ್ತೀನಿ ಹೇಳ್ತೀಯೋನೋ?

ನಿಮ್ಮ ಕಾಲೇಜಿನಲ್ಲಿ ನಿನಗಿಂತ ಬುದ್ಧಿವಂತರೇನೋ ಎಲ್ಲಾರೂನೂ? ಅವರೆಲ್ಲ ಹೇಗೋ ಹಾಗೆ ಪಾಸಾಗೋವಾಗ ನೀನು ಮಾತ್ರ ಪಾಸಾಗದೆ ಇದ್ದು ಬಿಡ್ತೀಯಾ? ನನಗೆ ತಿಳಿದ ಹಾಗೆ ಬಹಳ ಜನ ಹುಡುಗರಿಗಿಂತ ನೀನು ಬುದ್ಧಿವಂತ. ಮತ್ತೆ ಈ ಹೆದರೋ ಸ್ವಭಾವ ನಿನಗೆ ಹೇಗೆ ಬಂತೋ ನಾನು ಬೇರೆ ಕಾಣೆ."

"ಅವರ ವಿಷಯ ಬೇರೆ ಅಕ್ಕಾ. ಅವರು ಪಾಸಾಗದಿದ್ದರೂ ಪರವಾಗಿಲ್ಲ."

ಅಪ್ರಯತ್ನವಾಗಿಯೇ ನಗು ಬಂತು ಜಾನಕಿಗೆ. ತನ್ನ ಮಾತಿನಲ್ಲಿ ನಗುವಂತಹುದೇನಿದೆಯೋ ಅರ್ಥವಾಗಲಿಲ್ಲ ಸಾಂಬೂಗೆ. ಆಶ್ಚರ್ಯದಿಂದ ಅಕ್ಕನ ಕಡೆ ನೋಡಿದ.

"ನೀನು ಪರೀಕ್ಷೆಯಲ್ಲಿ ಫೇಲಾದರೆ ಸಪ್ತಸಮುದ್ರಗಳೂ ಉಕ್ಕಿ ಪ್ರಪಂಚವನ್ನೇ ಮುಳುಗಿಸುತ್ತದೇನೋ? ಇಲ್ಲ ಭೂಮಿ ದಾರಿ ತಪ್ಪಿ ಸೂರ್ಯನಲ್ಲಿ ಐಕ್ಯವಾಗುತ್ತದೆಯೋ. ಏನಾಗುತ್ತೋ ಹುಚ್ಚಪ್ಪಾ."

"ನನ್ನ ಚಿಂತೆ ನೋಡಿದರೆ ನಿನಗೆ ನಗೆಚಾಟಿಕೆಯಾಗಿದೆಯೇನಕ್ಕಾ!"

"ನಿನ್ನ ಚಿಂತೆ ನೋಡಿ ನಾನು ನಗಲಿಲ್ಲ ಕಣೋ. ನಿನ್ನ ಭಯ ನೋಡಿ ನಗುತ್ತಿದ್ದೇನೆ. ಇದುವರೆವಿಗೂ ಯಾವ ಕ್ಲಾಸಿನಲ್ಲಾದರೂ ಕಡಿಮೆ ನಂಬರು ಬಂದಿದೆಯೇನು ನಿನಗೆ? ಈಗೇಕೆ ಫೇಲಾಗುತ್ತಿ? ಅನಾವಶ್ಯಕವಾಗಿ ಗಾಬರಿಪಟ್ಟು ಮನಸು ಕೆಡಿಸಿಕೊಳ್ಳಬೇಡ."

ತಮ್ಮನಿಗೆ ಧೈರ್ಯ ಹೇಳಿ ಒಳಕ್ಕೆ ಕರೆತಂದಳು ಜಾನಕಿ.

* * *

ರಾತ್ರಿ ಬಹಳ ಹೊತ್ತಿನವರೆಗೂ ಸಾಂಬಶಿವ ಜಾನಕಿಯರು ನಿದ್ದೆ ಬಾರದೆ ಹಾಸಿಗೆಯಮೇಲೆ ಹೊರಳಾಡುತ್ತಲೇ ಕಳೆದರು. ಬೆಳಿಗ್ಗೆ ಎಂದಿಗಿಂತ ಸ್ವಲ್ಪ ಮುಂಚಿತವಾಗಿ ಏಳೋಣವೆಂದಿದ್ದ ಜಾನಕಿ ಆ ದಿನ ಇನ್ನೂ ನಿಧಾನವಾಗಿಯೇ ಎದ್ದಳು. ಸುಂದರಮ್ಮ ಕಸಮುಸುರೆ ಮಾಡಿ ಮುಗಿಸಿ ಅಡಿಗೆಯ ಪ್ರಯತ್ನದಲ್ಲಿದ್ದರು. ಕನಕ ಅಕ್ಕಿ ಆರಿಸುತ್ತಿದ್ದಳು. ಜಾನಕಿ ಮುಖತೊಳೆದು ಬಂದು ಅತ್ತಿಗೆಯ ಬಳಿ ಕುಳಿತಳು, ಮೊರದಲ್ಲಿನ ಅಕ್ಕಿಯಲ್ಲಿ ಕೈಯಾಡಿಸುತ್ತಾ.

"ಪ್ರಕಾಶ ಎಲ್ಲತ್ತಿಗೇ" ಎಂದಳು.

"ಎಲ್ಲಿಗೋ ಹೋಗಿದಾನೆ."

"ಅದೇ, ಎಲ್ಲಿಗೇಂತ?"

"ನಂಗೇನು ಗೊತ್ತು? ನನಗೆ ಹೇಳಿ ಹೋಗಿದಾನೇನು? ನಿನಗೆಷ್ಟು ಗೊತ್ತೋ ನನಗೂ ಅಷ್ಟೇ ಗೊತ್ತು."

"ನಿನಗೆ ಹೇಳದೆ ಅವನು ಯಾವ ಕೆಲಸಾನೂ ಮಾಡೊಲ್ಲ ಅಂತ ನನಗೆ ಗೊತ್ತಿಲ್ಲವೇನತ್ತಿಗೇ? ಎಷ್ಟುದಿನದಿಂದ ಹೀಗೆ ಮುಂಜಾನೇನೇ ಎದ್ದು ಹೋಗ್ತಿದಾನೆ?"

"ನಾಲ್ಕು ದಿನ ಆಯಿತಷ್ಟೆ."

"ಅಂದರೆ ವಿಜಯದಶಮಿಯಿಂದಲೇ?"

"ಹೂಂ."

"ನಿಜ ಹೇಳತ್ತಿಗೇ. ಪ್ರಕಾಶ ಸುಮ್ಮನೆ ಅಲೆಯೋಕೆ ಹೋಗ್ತಿದಾನೇಂತೀಯಾ?"

"ನಿಜವಾಗೂ ನಂಗೆ ಗೊತ್ತಿಲ್ಲಮ್ಮ. ಏನೋ ಕೆಲಸದ ಮೇಲೆ ಹೋಗ್ತಿದೀನಿ ಅಂತಾನೆ. ಅದೇನು ಅಂತ ಕೇಳಿದರೆ ಹೋದ ಕೆಲಸ ಆಗೊಲ್ಲ ಅಂತಾರಲ್ಲಾ. ಅದಕ್ಕೋಸ್ಕರ ನಾನು ಕೇಳಲಿಲ್ಲ. ಹೇಳಬೇಕೂನ್ನಿಸಿದರೆ ಅವನೇ ಹೇಳ್ತಾನೇಂತ ಸುಮ್ಮನಿದೀನಿ."

"ಸರಿ ಬಿಡು. ನಾನು ಕೇಳಿ ತಿಳಿದುಕೋತೀನಿ."

"ನಾನು ಹೇಳಿದೆ ಅನ್ನಬೇಡಮ್ಮಾ. ಅತ್ತಿಗೆ ನನ್ನ ಗುಟ್ಟುಬಿಟ್ಟುಕೊಟ್ಟಳು ಅಂದುಕೋತಾನೆ" ಎಂದಳು ಕನಕ.

"ಹೇಳೊಲ್ಲ ಬಿಡು" ಜಾನಕಿ ನಕ್ಕಳು.

ಜಾನಕಿ ಆಲೋಚನೆಗಳಿಂದ ಕಳೆದ ರಾತ್ರಿ ಎಚ್ಚತ್ತಿತ್ತು. ಆಫೀಸಿನಲ್ಲಿ ಕೆಲಸ ಮುಗಿಸಿಕೊಂಡು ಬಾಲವಿಹಾರದಿಂದ ಹೊರಗೆ ಬರುತ್ತಿರುವಾಗ "ಅನಸೂಯಮ್ಮ ಕರೆಯುತ್ತಿದಾರೆ" ಎನ್ನುತ್ತಾ ಬಂದ ಜವಾನ ರಂಗಯ್ಯ.

"ಎಲ್ಲಿದ್ದಾರೆ?. ಹಾಸ್ಟೆಲಿನಲ್ಲೋ ಮನೇಲೋ?"

"ಮನೇಲೇ ಇದ್ದಾರೆ. ನಿಮ್ಮನ್ನು ಕರಕೊಂಡುಬಾಅಂದರು."

"ಸರಿ ನಡಿ" ಎಂದು ಅತ್ತ ನಡೆದಳು ಜಾನಕಿ.

ಬಾಲವಿಹಾರಕ್ಕೆ ಸೇರಿದಂತೆಯೇ ಇತ್ತು ಅನುಸೂಯಮ್ಮನ ಮನೆ. ದೊಡ್ಡದಲ್ಲದಿದ್ದರೂ ಆಧುನಿಕ ಪದ್ಧತಿಯಲ್ಲಿ ಕಟ್ಟಿಸಿತ್ತು. ಮನೆಯ ಮುಂಭಾಗದಲ್ಲಿ ಹೂಗಿಡಗಳು, ವಿಶಾಲವಾಗಿದ್ದ ಕಿಟಕಿ, ಬಾಗಿಲುಗಳಿಗೆ ಹಾಕಿದ್ದ ತೆರೆಗಳು, ನುಣುಪಾದ ನೆಲ, ಆ ಮನೆಯ ಸೌಂದರ್ಯವನ್ನು ಹೆಚ್ಚಿಸುವಂತಿದ್ದುವು.

ಆ ಮನೆಯ ಮುಂಬಾಗಿಲಲ್ಲಿ ನಿಂತು ನೋಡಿದರೆ ಬಾಲವಿಹಾರು ಅರೆಬಿರಿದ ಗುಲಾಬಿ ತೋಟದಂತೆ, ಬಣ್ಣಬಣ್ಣದ ಹೂಗಿಡಗಳಿಂದ, ಪಕ್ಷಿಗಳ ಕಲಕಲರವದಿಂದ, ನಗುತ್ತಾ, ಕಲೆಯುತ್ತಾ, ಅತ್ತಿಂದಿತ್ತ ಓಡಾಡುವ ಪುಟಾಣಿ ಮಕ್ಕಳ ನಗುವಿನಿಂದ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿತ್ತು.

ಬಾಲವಿಹಾರವೆಂದರೆ ಒಂದು ದೊಡ್ಡ ಸೇವಾಸಂಸ್ಥೆಯಾಗಲೀ, ವಿದ್ಯಾನಿಕೇತನವಾಗಲೀ ಆಗಿರಲಿಲ್ಲ ಅದು. ಅನಾಥ ಆರ್ತಜನ ಶರಣಾಲಯ ವೆಂಬ ಬಿರುದೂ ಅದಕ್ಕಿರಲಿಲ್ಲ. ಒಬ್ಬ ತಾಯಿಯ ಗರ್ಭಕೋಶದಿಂದ ಹುಟ್ಟಿದ ಮಾನವತೆಗೆ ಚಿಹ್ನೆ ಅದು. ಅನಸೂಯಮ್ಮ ಅದರ ಯಜಮಾನಿ. ಜಾನಕಿ ಆಕೆಯ ಸೆಕ್ರೆಟರಿ. ಮತ್ತು ಇಬ್ಬರು ಉಪಾಧ್ಯಾಯಿನಿಯರು. ಕೆಲವು ಮಂದಿ ಆಯಾಗಳು, ಜವಾನರೂ ಅಲ್ಲಿದ್ದರು. ಇವರೆಲ್ಲಾ ಒಟ್ಟು ಕುಟುಂಬದಲ್ಲಿನ ಮನುಷ್ಯರಂತೆ ನಡೆದುಕೊಳ್ಳುತ್ತಿದ್ದರು. ಇವರ ಮಡಿಲಲ್ಲಿ ಬಾಲವಿಹಾರ ಬೆಳೆಯುತ್ತಿತ್ತು.

ಅನಸೂಯಮ್ಮ ನಾಲ್ಕುಜನ ಮಕ್ಕಳನ್ನು, ಹುಟ್ಟಿದ ಕೆಲವು ದಿನ ಗಳಲ್ಲಿಯೇ ಕಳೆದುಕೊಂಡಿದ್ದರು. ಐದನೆಯ ಸಲ ಹುಟ್ಟಿದ ಮಗು ತನ್ನೊಂದಿಗೇ ಮತ್ತೆ ಮಗು ಹುಟ್ಟುವ ಭಾಗ್ಯವನ್ನೂ ಕಸಿದುಕೊಂಡು ಹೋಗಿತ್ತು. ಶ್ರೀಮಂತಿಕೆ, ದಯಾಗುಣ ಎರಡನ್ನೂ ಪಡೆದಿದ್ದ ಅನಸೂಯಮ್ಮ ಆಸ್ಪತ್ರೆ ಗಳಿಂದ, ಅನಾಥ ಶರಣಾಲಯಗಳಿಂದ ತನ್ನ ಮನಸಿಗೆ ಬಂದ ಮಕ್ಕಳನ್ನು ತಂದು ಬೆಳೆಸಬೇಕೆಂಬ ಉದ್ದೇಶದಿಂದ ಈ ಬಾಲವಿಹಾರವನ್ನು ಸ್ಥಾಪಿಸಿದ್ದರು.

ಗಂಡ ಹೋದ ಬಳಿಕ ಆ ಮಕ್ಕಳೇ ಆಕೆಗೆ ಆಪ್ತರಾದರು. ಅದರಲ್ಲಿನ ಇಪ್ಪತ್ತು–ಇಪ್ಪತ್ತೈದು ಮಕ್ಕಳಿಗೂ ಆಕೆಯೇ ತಾಯಿ. ಬೆಳೆದು ದೊಡ್ಡವರಾದ ವರೂ ಕೂಡಾ ಇಂದಿಗೂ 'ಅಮ್ಮ'ನನ್ನು ನೋಡಲು ಬರುತ್ತಿದ್ದರು. ತೌರು ಮನೆಗೆ ಬಂದ ಹೆಣ್ಣುಮಕ್ಕಳಂತೆ ರಜಕ್ಕೆ ಬಂದ ಗಂಡುಮಕ್ಕಳಂತೆ ಅವರನ್ನು ಆದರಿಸುತ್ತಿದ್ದರು ಅನಸೂಯಮ್ಮ.

ಆಕೆ ಬಾಲವಿಹಾರದ ಮಕ್ಕಳಿಗೆ ರುಚಿಯಾದ ಆಹಾರ ಕೊಟ್ಟು ಶುಚಿ–ಶುಭ್ರತೆಯನ್ನು ಕಲಿಸಿ ಗೃಹಜೀವನದಲ್ಲಿನ ಮಾಧುರ್ಯವನ್ನು ಉಣಬಡಿಸು ತ್ತಿದ್ದರು. ಅವರು ಕಳೆದುಕೊಂಡ ಮಾತೃಪ್ರೇಮವನ್ನು ಇಮ್ಮಡಿಯಾಗಿ ಅವರ ಮೇಲೆ ಹರಿಸುತ್ತಿದ್ದರು. ಆದ್ದರಿಂದಲೇ ಆ ಮಕ್ಕಳಿಗೂ ಬಾಲವಿಹಾರವೆಂದರೆ ಅಮಿತ ಅಭಿಮಾನ. ತಾವು ಬೆಳೆದು ದೊಡ್ಡವರಾದ ಸ್ಥಳ ತಮ್ಮಂತಹ ಮತ್ತಷ್ಟು ಮಕ್ಕಳಿಗೆ ಆಶ್ರಯವಾಗಬೇಕೆಂಬ ಉದ್ದೇಶದಿಂದ ತಮಗೆ ತೋಚಿ ದಷ್ಟು ಹಣವನ್ನು ಆಗಾಗ ಕಳುಹಿಸುತ್ತಿದ್ದರು. ಮಕ್ಕಳಿಂದ ಹಣ ತೆಗೆದು ಕೊಳ್ಳುವಷ್ಟು ಸ್ವತಂತ್ರವಾಗಿಯೇ ಅನಸೂಯಮ್ಮ ತಾವು ಬೆಳೆಸಿದ ಮಕ್ಕಳು ಕಳುಹಿಸಿದ ಹಣ ಸ್ವೀಕರಿಸಿ ಮತ್ತೆ ಅದನ್ನು ಅವರಂತಹ ಮಕ್ಕಳಿಗಾಗಿ ಉಪಯೋಗಿಸುತ್ತಿದ್ದರು.

ಈ ಬಾಲವಿಹಾರವನ್ನು ಕುರಿತು ಬಹಳ ಜನಕ್ಕೆ ಏನೂ ತಿಳಿಯದು.

ಇದಕ್ಕೆ ಪ್ರಜಾದರಣೆಯಾಗಲೀ, ಹೆಸರಾಗಲೀ ಇರಲಿಲ್ಲ. ಇಲ್ಲಿ ಬೆಳೆದ ಮಕ್ಕಳು ತಮ್ಮ ಸಾಕುತಾಯಿಯನ್ನು ಭಕ್ತಿ ಗೌರವಗಳಿಂದ ಸ್ಮರಿಸಿಕೊಳ್ಳುತ್ತಿದ್ದರು. ಅಲ್ಲಿ ಬೆಳೆಯುತ್ತಿದ್ದ ಮಕ್ಕಳು ಆನಂದದಿಂದ ನಿಶ್ಚಿಂತೆಯಿಂದ ಇರುತ್ತಿದ್ದರು.

ಶರಣಾಲಯಗಳನ್ನು ಕುರಿತು ಅನೇಕ ಕಟ್ಟುಕತೆಗಳನ್ನು ಕೇಳಿದ್ದ ಜಾನಕಿ, ಈ ಕೆಲಸಕ್ಕೆ ಸೇರುವ ಮುಂಚೆ ಹಿಂದೆ ಮುಂದೆ ನೋಡಿದ್ದಳು. ಇಂತಹ ಸೇವಾಸಂಸ್ಥೆಗಳ ನಿರ್ವಹಣೆಯಲ್ಲಿ ಕಾಠಿಣ್ಯ, ಕಲ್ಮಷ ಗೂಡು ಕಟ್ಟಿ ಕೊಂಡಿರುತ್ತದೆಯೆಂದೂ, ಅವನೀತಿ ತಾನೇ ತಾನಾಗಿರುತ್ತದೆಯೆಂದೂ ಇಂತಹ ಸ್ಥಳದಲ್ಲಿ ಕೆಲವು ದಿನ ಇದ್ದನಂತರ ಮನುಷ್ಯರು ಯಂತ್ರಗಳಂತಾಗಿ ಯಾವ ಕೀಲನ್ನು ಒತ್ತಿದರೆ ಆ ಕೆಲಸ ಮಾಡುವಂತಾಗುತ್ತಾರೆಂದೂ ಭಾವಿಸಿದ್ದಳು. ಆದರೆ ಅವಳ ಪರಿಸ್ಥಿತಿ ಅವಳನ್ನು ಬಾಲವಿಹಾರದ ಪ್ರಾಂಗಣದಲ್ಲಿ ಕಾಲಿಡುವಂತೆ ಮಾಡಿತ್ತು.

ಅನಸೂಯಮ್ಮನನ್ನು ನೋಡಿದ ನಂತರ ಜಾನಕಿ ತನ್ನ ಭಯವನ್ನು ಮರೆತಿದ್ದಳು. ಆಕೆಯಂತಹ ನಿಸ್ವಾರ್ಥಪರರು ವಿರಳ. ಇದ್ದಿಲ ರಾಶಿಯಲ್ಲಿ ಎಲ್ಲಿಯೋ ಒಂದೊಂದು ಮಾಣಿಕ್ಯವೂ ಇರಬಹುದಲ್ಲವೆ!

ಅನಸೂಯಮ್ಮ ಹೊದಿಕೆ ಹೊದ್ದುಕೊಂಡು ಮಂಚದಮೇಲೆ ಮಲಗಿದ್ದರು.

"ನನ್ನನ್ನು ಕರೆದಿರಾ?" ಜಾನಕಿ ಮೆಲ್ಲನೆ ಪ್ರಶ್ನಿಸಿದಳು.

"ಬಂದೆಯಾ ಜಾನಕಿ?" ಅನಸೂಯಮ್ಮ ಕಣ್ಣುತೆರೆದು ಪ್ರಶ್ನಿಸಿದರು.

"ನಿಮ್ಮ ಮೈಯಲ್ಲಿ ಹುಷಾರಿದ್ದಂತಿಲ್ಲವಲ್ಲಾ" ಆಕೆಯ ಕೆಂಪಾದ ಕಣ್ಣುಗಳನ್ನೂ ಬಾಡಿದ ಮುಖವನ್ನೂ ನೋಡಿ ಪ್ರಶ್ನಿಸಿದಳು ಜಾನಕಿ.

"ಹೌದಮ್ಮಾ, ನಿನ್ನೆ ರಾತ್ರಿಯಿಂದ ಜ್ವರ ಬರುತ್ತಿದೆ. ಮೈಯೆಲ್ಲಾ ನೋವು, ಕಣ್ಣುರಿ. ಈ ದಿನ ಮಕ್ಕಳನ್ನ ನೋಡೋಕೆ ಬರಲಾಗಲಿಲ್ಲ ಎಲ್ಲಾ ಚೆನ್ನಾಗಿದ್ದಾರಾ? ರಾಮು ಶಿವ ಹೊಡೆದಾಡದೆ ಆಡಿಕೊಂಡಿದಾರಾ?"

"ಸರಿ ಸರಿ. ಆ ಜಗಳಾನ ಯಾವಾಗಲೋ ಮರೆತುಬಿಟ್ಟಿದ್ದಾರೆ ಅವರು. ಮಕ್ಕಳಿಗೆ ಅದು ದೇವರು ಕೊಟ್ಟ ವರ. ಈ ಕ್ಷಣ ನಡೆದದ್ದನ್ನು ಮತ್ತೊಂದು ಕ್ಷಣದಲ್ಲಿ ಮರೆತುಬಿಡುತ್ತಾರೆ. ನಮ್ಮಹಾಗೆ ಅದನ್ನು ಕುರಿತು ಕೊರಗುವುದಿಲ್ಲ."

"ಅದು ನಿಜ. ನೋಡು, ನಿನ್ನೆ ಅವರನ್ನು ಒಂದೆರಡು ಏಟು ಹಾಕಿದ್ದಕ್ಕೆ ರಾತ್ರಿಯೆಲ್ಲಾ ಅದೇ ಚಿಂತೆ ನನಗೆ. ಅವರನ್ನು ದಂಡಿಸುವ ಅಧಿಕಾರ ನನಗೆ ಇದೆಯೋ? ಎಂದು ರಾತ್ರಿಯೆಲ್ಲ ಆಲೋಚಿಸುತ್ತಲೇ ಕಳೆದೆ....ಆದರೆ ಜಾನಕಿ ದಂಡನೆ ಸಹ ಪ್ರೀತಿಯಲ್ಲಿ ಒಂದು ಭಾಗವೇ ಅನ್ನಿಸುತ್ತೆ ನನಗೆ. ನನ್ನವರು

ಎಂಬ ಮಮತೆಯಿಂದ ನೋಡುವಾಗಲೇ ಅವರು ಕೆಟ್ಟುಹೋದಾರೆಂಬ ಭಯ ಚಿಂತಿಸುವಂತೆ ಮಾಡುತ್ತದೆ. ಕೆಟ್ಟುಹೋಗದಂತೆ ಜಾಗರೂಕತೆ ವಹಿಸಬೇಕೆನಿಸುತ್ತದೆ. ಬೀದಿಯಲ್ಲಿ ಹೋಗುವ ಹುಡುಗರಾದರೂ ಆ ರೀತಿ ಮಾತನಾಡಿದಾಗ ಒಂದು ಕ್ಷಣ ಕೆಡುಕೆನಿಸಿದರೂ, ಮಾತನಾಡದೆ ನನ್ನ ಪಾಡಿಗೆ ನಾನು ಹೋಗುತ್ತಿದ್ದೆ. ಆದರೆ ನಿನ್ನೆ ಶಿವನ ಬಾಯಿಂದ ಆ ಮಾತು ಕೇಳಿದಾಕ್ಷಣ.... ನನ್ನ ಶರೀರದಲ್ಲಿನ ಒಂದು ಭಾಗ ಕೆಟ್ಟು ಕೊಳೆತು ಹೋಗುವುದೇನೋ ಎನ್ನಿಸಿತು...."

"ಹೌದಮ್ಮಾ, ಹೆತ್ತ ತಾಯಿಯಾದರೂ ಮಕ್ಕಳು ಕೆಟ್ಟ ಕೆಲಸ ಮಾಡಿದರೆ ನೋಡುತ್ತಾ ಸುಮ್ಮನಿರುತ್ತಾಳೇನು? ಹಾಗೆ ಮಾಡಿದರೆ ಮಕ್ಕಳ ಬಗ್ಗೆ ಆಕೆಗಿರುವ ಪ್ರೀತಿಯನ್ನೇ ಶಂಕಿಸಬೇಕಾಗುತ್ತದೆ. ಮಕ್ಕಳನ್ನು ಬೆಳೆಸಲು, ಲಾಲನೆ ಪಾಲನೆ ಎಷ್ಟು ಅವಶ್ಯವೋ ದಂಡನೆಯ ಆವಶ್ಯಕತೆಯೂ ಅಷ್ಟೇ ಇದೆ" ಎಂದಳು ಜಾನಕಿ.

"ಇಷ್ಟಕ್ಕೂ ಈ ಹಾಳು ಮಾತು ಇವರೆಲ್ಲಿ ಕಲಿತರೂಂತ...."

"ಆಳುಗಳ ಬಾಯಲ್ಲಿ ಕೇಳಿರುತ್ತಾರೆ."

"ಹಾಗಾದರೆ ಈ ವಿಷಯದಲ್ಲಿ ಅವರನ್ನು ಎಚ್ಚರಿಸಬೇಕು. ಎಳೆಯ ಹುಡುಗರ ಮುಂದೆ ಅಸಭ್ಯವಾಗಿ ಮಾತನಾಡಿದರೆ ಕೆಲಸದಿಂದ ಕಿತ್ತುಹಾಕುತ್ತೇವೆಂದು ಹೇಳಬೇಕು."

"ನೀವು ಅದನ್ನೇನು ಮನಸಿಗೆ ಹಚ್ಚಿಕೊಳ್ಳಬೇಡಿ. ನಾನು ನೋಡಿಕೊಳ್ಳುತ್ತೇನೆ. ನಿಮ್ಮ ಆರೋಗ್ಯ ಸರಿಯಾಗಿ ನೋಡಿಕೊಳ್ಳಿ. ನಾನಿನ್ನು ಬರುತ್ತೇನೆ" ಎಂದು ಹೊರಗೆ ಬಂದಳು ಜಾನಕಿ.

ಕತ್ತಲಾಗುತ್ತಾ ಬಂದಿತ್ತು. ಕೆಲಸ ಮುಗಿಸಿಕೊಂಡು ಮನೆಗೆ ಹೊರಟಿದ್ದ ಕೂಲಿಕೆಲಸದವರು, ಮೇವಿನಿಂದ ಹಿಂತಿರುಗುತ್ತಿದ್ದ ಪಶುಗಳೂ, ಹಗಲೆಲ್ಲಾ ಆಫೀಸುಗಳಲ್ಲಿ ದುಡಿದು ಸಾಯಂಕಾಲ ತಣ್ಣನೆಯ ಗಾಳಿ ಸೇವಿಸಲು ಪಾರ್ಕಿಗೆ ಹೊರಟಿದ್ದ ಹೆಣ್ಣು–ಗಂಡುಗಳೊಂದಿಗೆ ರಸ್ತೆಯೆಲ್ಲಾ ಜನನಿಬಿಡವಾಗಿತ್ತು. ಜಾನಕಿ ಬೇಗ ಮನೆಸೇರಬೇಕೆಂಬ ಆತುರದಲ್ಲಿ ಬೇಗ ಬೇಗನೆ ಹೆಜ್ಜೆಹಾಕುತ್ತಿದ್ದಳು.

ಪಾರ್ಕಿನಲ್ಲಿ ಗುಂಪುಗುಂಪಾಗಿ ಕುಳಿತಿದ್ದ ಶ್ರೋತೃವೃಂದಗಳಿಗೆ ಪಾಕಿಸ್ತಾನ್ ಮಾಡುತ್ತಿದ್ದ ಅರಾಜಕತೆಗಳನ್ನು ವಿವರಿಸುತ್ತಿತ್ತು ಆಕಾಶವಾಣಿ ತೆಲುಗಿನಲ್ಲಿ ವಾರ್ತಾಪ್ರಸಾರ ಮುಕ್ತಾಯವಾಯಿತೆಂಬ ಮಾತು ಕೇಳಿ ಬಹಳ ಜನ ಎದ್ದು ಮನೆಯ ದಾರಿ ಹಿಡಿದರು. ಎಲ್ಲರಿಗಿಂತ ಮುಂದೆ ತಲೆಬಗ್ಗಿಸಿ

ಕೊಂಡು ನಡೆಯುತ್ತಿದ್ದ ಯುವಕನನ್ನು ನೋಡಿ ಗುರ್ತುಹಿಡಿದು 'ಸಾಂಬೂ' ಎಂದು ಕೂಗಿದಳು ಜಾನಕಿ. ಬೆಚ್ಚಿಬಿದ್ದು ತಿರುಗಿನೋಡಿದ ಸಾಂಬಶಿವ.

"ಇಷ್ಟು ಲೇಟಾಗಿ ಬರ್ತಿದೀಯೇನಕ್ಕಾ."

"ಆಫೀಸಿನಲ್ಲಿ ಕೆಲಸ ಇತ್ತು. ಇಲ್ಲೇನು ಮಾಡ್ತಿದ್ದೀ ನೀನು?"

"ಏನೂ ತೋಚಲಿಲ್ಲ. ಇಲ್ಲಿ ಸ್ವಲ್ಪಹೊತ್ತು ಪ್ರಶಾಂತವಾಗಿ ಕುಳಿತು ಕೊಳ್ಳೋಣ ಅಂತ ಬಂದೆ."

ಕಾಲೇಜಿನಿಂದ ಬಂದಾಕ್ಷಣ ಕೈಕಾಲು ತೊಳೆದುಕೊಂಡು ಮತ್ತೆ ಪುಸ್ತಕ ಹಿಡಿದು ಕುಳಿತುಕೊಳ್ಳುವ ಸಾಂಬು ಈ ದಿನ ಏನೂ ತೋಚಲಿಲ್ಲಾಂತ ಪಾರ್ಕಿನಲ್ಲಿ ಕುಳಿತುಕೊಳ್ಳುವುದೆಂದರೆ ವಿಚಿತ್ರವಾಗಿ ಕಂಡಿತು ಜಾನಕಿಗೆ.

"ಏನಾಯಿತೋ ಹಾಗಿದೀಯಾ?" ಎಂದಳು.

ಜಾನಕಿಯ ಮಾತಿಗೆ ಸಾಂಬು ಉತ್ತರ ಕೊಡಲಿಲ್ಲ. ಒಂದೆರಡು ನಿಮಿಷ ಸುಮ್ಮನಿದ್ದು,

"ನಮ್ಮ ಪ್ರಕಾಶ ನ್ಯೂಸ್‌ಪೇಪರ್ ಮಾರುತ್ತಿದಾನೇಂತ ನಿನಗೆ ಗೊತ್ತೇನಕ್ಕಾ?" ಎಂದು ಪ್ರಶ್ನಿಸಿದ.

"ಅಂದರೆ...."

ಪೇಪರ್ ಮಾರುವುದೆಂಬ ಮಾತಿಗೆ ಅರ್ಥ ತಿಳಿಯದೆ ಜಾನಕಿ ಹಾಗನ್ನಲಿಲ್ಲ. ತಮ್ಮ ಆರಿಸಿಕೊಂಡ ಬದುಕದೆಂದು ಅರ್ಥಮಾಡಿಕೊಳ್ಳಲು ಕೆಲವು ಕ್ಷಣ ಬೇಕಾಯಿತು ಜಾನಕಿಗೆ.

"ಅಂದರೆ ಬೆಳಿಗ್ಗೆ ಮನೆಮನೆಗೂ ಹೋಗಿ ಪೇಪರ್ ಕೊಟ್ಟು ಬರುವುದು. ಸಾಯಂಕಾಲ ಪಾರ್ಕಿನಲ್ಲಿ, ಕಾಲೇಜಿನ ಬಳಿ, ರೈಲ್ವೆಸ್ಟೇಷನ್ ಬಳಿ ಪೇಪರ್, ವಾರಪತ್ರಿಕೆ, ಕತೆಪುಸ್ತಕಗಳನ್ನು ಮಾರುವುದು...."

"ಅದು ಸರಿ, ಈ ವಿಷಯ ನಿನಗೆ ಹೇಗೆ ತಿಳಿಯಿತು? ಯಾರು ಹೇಳಿದರೂಂತ...."

"ಯಾರೂ ಹೇಳಲಿಲ್ಲಕ್ಕಾ. ಕಾಲೇಜ್ ಬಿಟ್ಟಮೇಲೆ ಎಲ್ಲರೂ ಗುಂಪಾಗಿ ಬರುತ್ತಿದ್ದೆವು. 'ಸಾರ್, ಪೇಪರ್ ಸಾರ್....ಈವನಿಂಗ್ ನ್ಯೂಸ್. ಬಿಸಿಬಿಸಿ ಸುದ್ದಿ....' ಅಂತ ಕೇಳಿಸಿತು. ನನಗೆ ಪರಿಚಿತವಾದ ಕಂಠ. ಹಿಂತಿರುಗಿ ನೋಡಿದೆ ನಮ್ಮ ಪ್ರಕಾಶ....ನನ್ನ ಬಾಯಿಂದ ಮಾತು ಹೊರಡಲಿಲ್ಲ. ಹಾಗೇ ನೋಡುತ್ತಾ ನಿಂತುಬಿಟ್ಟೆ. ಪ್ರಕಾಶ 'ಪೇಪರ್ ಸಾರ್....ಪೇಪರ್ ಸಾರ್' ಅನ್ನುತ್ತಲೇ ನನ್ನನ್ನು ನೋಡಿಯೂ ನೋಡದಂತೆ ಪೇಪರ್ ಕೊಟ್ಟು ನನ್ನ ಮುಂದಿನಿಂದಲೇ ಹೊರಟುಹೋದ. ಪ್ರಕಾಶ ಎಂದಿನಿಂದ ಈ ಕೆಲಸ ಮಾಡು

ತ್ತಿದ್ದಾನೆ? ನನ್ನನ್ನು ನೋಡಿಯೂ ಮಾತನಾಡಿಸದೆ ಏಕೆ ಹಾಗೆ ಹೊರಟು ಹೋದ?"

"ಎಷ್ಟು ದಿನದಿಂದ ಈ ಕೆಲಸ ಮಾಡುತ್ತಿದ್ದಾನೋ ನನಗೆ ಗೊತ್ತಿಲ್ಲ ಸಾಂಬೂ, ಆದರೆ ಅವನು ಹಾಗೇಕೆ ಹೊರಟುಹೋದನೆಂಬುದನ್ನು ಮಾತ್ರ ನಾನರ್ಥಮಾಡಿಕೊಳ್ಳಬಲ್ಲೆ. ಬಹುಶಃ ನಿನ್ನ ನೋಟದಲ್ಲಿ ಅವನು 'ನಾಲ್ಕು ಜನದಲ್ಲಿ ನನ್ನ ತಮ್ಮ ಪೇಪರ್ ಮಾರುವವನೆಂದು ನನ್ನನ್ನು ಅವಮಾನಿಸ ಬೇಡಕಣೋ' ಎಂಬ ಪ್ರಾರ್ಥನೆಯನ್ನು ಕಂಡಿರುತ್ತಾನೆ. ಆದ್ದರಿಂದಲೇ ನಿನ್ನೊಂದಿಗೆ ಏನೂ ಸಂಬಂಧವಿಲ್ಲದವನಂತೆ ಹೊರಟುಹೋಗಿರುತ್ತಾನೆ. ಆದರೆ ಅಲ್ಲಿ ನಿಮ್ಮನ್ನು ನೋಡಿದ ಯಾರಿಗೂ ನೀವಿಬ್ಬರೂ ಅಣ್ಣತಮ್ಮಂದಿರೆಂಬ ಅನು ಮಾನ ಬರಲಾರದು. ಏಕೆಂದರೆ ನಿಮ್ಮಿಬ್ಬರಿಗೂ ಹುಡುಕಿದರೂ ಸ್ವಲ್ಪವೂ ಹೋಲಿಕೆಯಿಲ್ಲ."

"ಅವನು ಅಂತಹ ಕೆಲಸ ಮಾಡುತ್ತಿರಬೇಕಾದರೆ ಇಲ್ಲದ್ದು ನಾನು ನನ್ನ ತಮ್ಮ ಎಂದು ಹೇಳಿಕೊಳ್ಳಲು ನಾಚಿಕೊಳ್ಳುತ್ತೇನೇನಕ್ಕಾ?"

"ಆ ವಿಷಯ ನಿನ್ನ ಮನಸ್ಸನ್ನು ಕೇಳಿ ನೋಡು" ಎಂದಳು ಜಾನಕಿ.

* * *

ದಾರಿಯುದ್ದಕ್ಕೂ ಸಾಂಬುವಿನ ಮಾತುಗಳು ಜಾನಕಿಯ ಕಿವಿಯಲ್ಲಿ ಗುಂಯ್ಗುಡುತ್ತಿದ್ದವು. 'ಅವನು ಅಂತಹ ಕೆಲಸ ಮಾಡುತ್ತಿರಬೇಕಾದರೆ ಇಲ್ಲದ್ದು........' ಪ್ರಕಾಶ ಮಾಡುತ್ತಿದ್ದ ಕೆಲಸ ಹೀನವಾದದ್ದೆಂದೊ, ಅವನು ಅದನ್ನು ಮಾಡಲು ನಾಚಿಕೆ ಪಡದಿರುವಾಗ ಅವನು ಅದನ್ನು ಮಾಡುತ್ತಿದ್ದಾ ನಲ್ಲಾ ಎಂದು ನಾನು ನಾಚಿಕೊಳ್ಳುತ್ತೇನೆಯೆ? ಎಂದು ಪ್ರಶ್ನಿಸಿಕೊಳ್ಳುತ್ತಿದ್ದ ಸಾಂಬು.

ನಿಜಕ್ಕೂ ಪ್ರಕಾಶ ಮಾಡುತ್ತಿದ್ದ ಕೆಲಸ ನಾಚಿಕೊಳ್ಳುವಂತಹುದೇನು? ಮನುಷ್ಯ ನಾಚಿಕೊಳ್ಳಬೇಕಾದ್ದು ಯಾವುದಕ್ಕೆ: ಸೋಮಾರಿಯಾಗಿ ಇತರರ ಮೇಲೆ ಆಧಾರಪಡಲು ನಾಚಿಕೊಳ್ಳಬೇಕು. ಕೆಲಸ ಮಾಡುವ ಶಕ್ತಿಯಿದ್ದೂ ಇತರರ ಮೇಲೆ ಆಧಾರಪಡಲು ನಾಚಿಕೊಳ್ಳಬೇಕು. ಇಲ್ಲವೇ ಕಳ್ಳತನ ಮಾಡಿ ಪರರ ಸ್ವತ್ತನ್ನು ಅನುಭವಿಸಲು ನಾಚಿಕೊಳ್ಳಬೇಕು. ಆದರೆ ಪ್ರಕಾಶ ಅಂತಹ ನೀಚವಾದ ಕೆಲಸ ಏನು ಮಾಡಿದ್ದ? ಅರವತ್ತು ರೂಪಾಯಿಗಾಗಿ ಹಗಲೆಲ್ಲಾ ಆಫೀಸಿನಲ್ಲಿ ದುಡಿದರೆ ಗೌರವ. ಆದರೆ ಅದೇ ದುಡ್ಡಿಗಾಗಿ ಇನ್ನೊಂದು ವಿಧ ವಾಗಿ ಶ್ರಮಿಸಿದರೆ ಅಗೌರವ ಹೇಗೆ? ಎರಡರ ಗುರಿ ಒಂದೇ. ಅದು ಧನಾ

ರ್ಜನೆ. ಅದಕ್ಕೋಸ್ಕರ ಎಲ್ಲರೂ ಒಂದೊಂದು ರೀತಿಯಾಗಿ ಅವರವರ ಮನಸಿಗೆ, ಶಾರೀರಿಕ ಪ್ರವೃತ್ತಿಗೆ ತಕ್ಕಂತೆ, ಬುದ್ಧಿ ಅವಕಾಶಗಳಿಗೆ ತಕ್ಕಂತೆ ವೃತ್ತಿಯನ್ನು ಆರಿಸಿಕೊಳ್ಳುತ್ತಾರೆ.

ಗೌರವ–ಅಗೌರವಗಳನ್ನು ದುಡ್ಡಿನೊಂದಿಗೆ ಅಳೆಯುವುದು ಸ್ವಲ್ಪ ಮಟ್ಟಿಗೆ ವಾಸಿ. ಆದರೆ ಇಬ್ಬರೂ ಮಾಡುತ್ತಿರುವ ಕೆಲಸ ಬದುಕುವುದಕ್ಕಾಗಿಯೇ ಆಗಿರುವಾಗ, ಇಬ್ಬರೂ ಮೇಲಿನವರ ಆಜ್ಞೆಯಂತೆ ಕೆಲಸ ಮಾಡುತ್ತಿರುವಾಗ, ಗುಮಾಸ್ತೆಯ ಕೆಲಸಕ್ಕಿಂತ, ದೇಹಶ್ರಮ ಮಾಡುವವನ ಕೆಲಸ ಹೀನವೆಂದು ಹೇಳುವುದು ಹೇಗೆ? ಈಗಿನ ಕಾಲದಲ್ಲಿ ತಾಲ್ಲೂಕಾಫೀಸಿನಲ್ಲಿ ಲೋಯರ್ ಡಿವಿಜನ್ ಗುಮಾಸ್ತೆಗಿಂತ ಒಬ್ಬ ಲೈಸೆನ್ಸ್ಡ್ ರೈಲ್ವೆ ಕೂಲಿ ಹೆಚ್ಚು ಸಂಪಾದಿಸುತ್ತಿರಬಹುದು. ಆತ್ಮಾಭಿಮಾನ, ಸ್ವೇಚ್ಛೆ ಇವುಗಳ ಬಗ್ಗೆ ಆಲೋಚಿಸಿದರೂ ಆ ಕೂಲಿಗಿಂತ ಗುಮಾಸ್ತೆ ಹೆಚ್ಚೆಂದು ಹೇಳುವಂತಿಲ್ಲ. ಆದರೆ ಲೋಕದ ದೃಷ್ಟಿಯಲ್ಲಿ ಗುಮಾಸ್ತೆಗಿರಿಗೆ ಇರುವ ಬೆಲೆ, ಗೌರವ, ಕೂಲಿನಾಲಿ ಮಾಡುವವರಿಗಿಲ್ಲ. ಇದಕ್ಕೆ ಕಾರಣ ಏನು?

ರಾತ್ರಿ ಹಾಸಿಗೆಯಲ್ಲಿ ಮಲಗಿ ಇದನ್ನೇ ಆಲೋಚಿಸಿದಳು ಜಾನಕಿ. ಬಹಳ ಹೊತ್ತಿನನಂತರ ಅವಳಿಗೆ ತಿಳಿಯದಂತೆಯೇ ನಿದ್ದೆ ಅವಳನ್ನು ಆವರಿಸಿತು.

ಜಾನಕಿ ಹಿಂದಿನ ದಿನದ ವಿಷಯಗಳನ್ನು ಮೆಲುಕುಹಾಕುತ್ತಿರುವಾಗಲೇ ಪ್ರಕಾಶ ಬಂದ. ತನಗೋಸ್ಕರವೇ ಎದುರು ನೋಡುತ್ತಿರುವವಳಂತೆ ಜಗುಲಿಯ ಮೇಲೆ ನಿಂತ ಅಕ್ಕನನ್ನು ನೋಡಿ ಇನ್ನು ತನ್ನ ರಹಸ್ಯ ಹೊರಬಿದ್ದಂತೆಯೇ ಎಂದುಕೊಂಡ ಪ್ರಕಾಶ.

"ಇನ್ನೂ ಆಫೀಸಿಗೆ ಹೊತ್ತಾಗಲಿಲ್ಲವೇನಕ್ಕಾ?"

"ನಿಂಗೋಸ್ಕರ ಕಾಯ್ತಿದೀನಿ."

ಪ್ರಕಾಶ ಮಾತನಾಡಲಿಲ್ಲ. ಅಕ್ಕನ ಬಾಯಿಂದ ಹೊರಬೀಳುವ ಮಾತಿಗಾಗಿ ಕಾದು ನಿಂತ.

"ನಿನ್ನನ್ನೊಂದು ವಿಷಯ ಕೇಳಿ ತಿಳಿದುಕೊಳ್ಳೋಣಾಂತ" ಎನ್ನುತ್ತಾ ಮನೆಯೊಳಕ್ಕೆ ನಡೆದಳು ಜಾನಕಿ.

"ಸಾಂಬು ಹೇಳಿದನೇನು?" ಅಕ್ಕನನ್ನು ಹಿಂಬಾಲಿಸುತ್ತಾ ಕೇಳಿದ ಪ್ರಕಾಶ.

"ಹುಂ....ಅದಕ್ಕೇ...."

"ಅಕ್ಕಾ, ಅಕ್ಕಾ, ಕೇಳಿದ ಕೂಡಲೇ ನಿನಗೇನನ್ನಿಸಿತಕ್ಕಾ. ಇವನದು

ಎಂಥಾ ನಿಕೃಷ್ಟ ಜಾತಕ ಅನ್ನಿಸಿತೇ, ಇಲ್ಲಾ ಎಂಥಾ ಗಡುಸು ಪಿಂಡ ಅಂದು ಕೊಂಡೆಯೊ?"

"ಹಾಗೇನಿಲ್ಲಪ್ಪಾ. ನಾನಿನ್ನೂ ಒಂದು ಅಭಿಪ್ರಾಯಕ್ಕೆ ಬರಲಿಲ್ಲ. ಏಕೆಂದರೆ ನಿನ್ನ ಆಸೆ, ಆಶಯಗಳೇನೆಂದು ನನಗೇನೂ ಗೊತ್ತಿಲ್ಲ. ನೀನಿಟ್ಟ ಹೆಜ್ಜೆಯನ್ನು ಕುರಿತು ನನಗೆ ಚಿಂತೆಯಿಲ್ಲ. ಆದರೆ ಅದು ನಿನ್ನನ್ನು ಎಲ್ಲಿಗೆ ಎಳೆದೊಯ್ಯುತ್ತದೆಯೆಂಬುದೇ ನನ್ನ ಸದ್ಯದ ಆಲೋಚನೆ...."

"ಅದು ನನ್ನನ್ನು ಎಳೆದೊಯ್ಯುವುದಿಲ್ಲಕ್ಕಾ, ನಾನೇ ರಥ ಸಾರಥಿ. ಅದನ್ನು ನಾನು ನಡೆಸುತ್ತೇನೆ. ಕುಣಿಸುತ್ತೇನೆ. ಗುರಿ ಮುಟ್ಟುವವರೆಗೂ ಒಂದೇ ಓಟ ಓಡಿಸುತ್ತೇನೆ."

"ನಿನ್ನ ಗುರಿ ಯಾವುದೋ ಪ್ರಕಾಶಾ?"

"ಈ ಪ್ರಪಂಚದಲ್ಲಿ ಹುಟ್ಟಿದವರಿಗೆಲ್ಲ ಬೇರೆಬೇರೆ ಗುರಿ ಇರುತ್ತೇನಕ್ಕಾ? ಎಲ್ಲರ ಗುರಿ–ಉದ್ದೇಶ ಒಂದೇ. ಸುಖವಾಗಿ ಬದುಕೋದು. ಆದರೆ ನಿನಗೆಂಥಾ ಮನೆ ಬೇಕು ಅನ್ನೋದನ್ನ ನಿರ್ಣಯಿಸಿಕೊಂಡು ಪಾಯ ತೆಗೆಸುತ್ತಿ. ಪಾಯ ಗಟ್ಟಿಯಿಲ್ಲದೆ ದೊಡ್ಡ ಭವನ ಕಟ್ಟಿದರೆ ಅದು ಕುಸಿದು ಬೀಳುತ್ತೆ. ಚಿಕ್ಕ ಮನೆಗೆ ದೊಡ್ಡ ಪಾಯ ಹಾಕಿದರೆ ನಿನಗಿರುವ ಹಣ ಪಾಯಕ್ಕೇ ಸರಿಹೋಗುತ್ತೆ. ಮನೆ ಕಟ್ಟಲು ಏನೂ ಮಿಗೊಲ್ಲ. ಅದೇ ರೀತಿ ಈ ಸುಖಜೀವನ ಅನ್ನೋದನ್ನೂ ನಮಗೆ ಅನ್ವಯಿಸುವಂತೆ ಅರ್ಥಮಾಡಿಕೋಬೇಕು. ನನ್ನ ಮಟ್ಟಿಗೆ ನನಗೆ ಒಬ್ಬರನ್ನು ಆಶ್ರಯಿಸದೆ ನನ್ನ ಬದುಕು ಕಳೆದರೆ ಸಾಕು. ಕೈಲಾದರೆ ಇನ್ನೊಬ್ಬ ರಿಗೆ ಸಹಾಯ ಮಾಡುತ್ತೇನೆ. ಇಲ್ಲದಿದ್ದರೆ ನನ್ನ ಜೀವನ ನಾನು ನಡೆಸಿ ಕೊಳ್ಳುತ್ತೇನೆ. ಬದುಕಿದ್ದಷ್ಟು ದಿನ ನನ್ನ ಹೆಜ್ಜೆ ಮುಂದಿರಬೇಕು. ಇದೇ ನನ್ನ ಆಶಯ, ಗುರಿ" ಎಂದ ಪ್ರಕಾಶ.

ಜಾನಕಿ ಉತ್ತರ ಹೇಳುವುದಕ್ಕೆ ಮುಂಚೆಯೇ ಶ್ರೀಹರಿ ತರಕಾರಿ ಚೀಲ ಹಿಡಿದು ಬೆವರೊರಸಿಕೊಳ್ಳುತ್ತಾ ಮನೆಯೊಳಕ್ಕೆ ಬಂದ.

"ಜಾನಕೀ, ಅಮ್ಮಾ, ಈ ವಿಷಯ ಕೇಳಿದಿರೇನಮ್ಮಾ" ಎಂದು ಆವೇಶ ದಿಂದ ಕೂಗಾಡಿದ.

"ಏನಾಯಿತೋ ಶ್ರೀಹರೀ?" ಎಂದು ಅಡಿಗೆಮನೆಯೊಳಗಿಂದ ಓಡಿ ಬಂದರು ಸುಂದರಮ್ಮ.

"ಈ ಹಾಳಾದವನು ಮನೆಮನೆಗೂ ಪೇಪರ್ ಹಂಚುತ್ತಾ ತಿರುಗ್ತಿದಾ ನಂತೆ." ಪ್ರಕಾಶನ ಕಡೆ ನುಂಗುವವನಂತೆ ನೋಡುತ್ತಾ ಹೇಳಿದ ಶ್ರೀಹರಿ.

"ಯಾರೋ, ಎಂಥ ಪೇಪರೋ?"

"ಬೇರೆ ಯಾರೋ ಆದರೆ ನಂಗೇನಮ್ಮಾ. ನಿನ್ನ ಮುದ್ದಿನ ಮಗ ಪ್ರಕಾಶ. ಬೀದಿಯಲ್ಲಿ ಕಾಲಿಟ್ಟರೆ ಎಲ್ಲರೂ ಕೇಳೋರೇ. 'ಏನಯ್ಯಾ, ತಮ್ಮನ್ನ ಹಾಗೆ ಬಿಟ್ಟಿದ್ದೀ. ಮನೆತನಸ್ಥರ ಹುಡುಗ ಇಂಥಾ ಕೆಲಸಮಾಡೋದೇ. ಮನೆ ಮನೆಗೂ ತಿರುಗಿ ಪೇಪರ್, ಪೇಪರ್ ಅಂತಿದ್ದರೆ ಎಷ್ಟು ನಾಚಿಕೆಗೇಡು' ಅಂತ ಕೇಳ್ತಿದ್ದಾರೆ. ನೋಡಮ್ಮಾ ಎಷ್ಟು ಚೆನ್ನಾಗಿದೆ....ಇಷ್ಟು ದಿನ ಇವನಿಗೆ ಮಾಡಿ ಮಟ್ಟಿದ್ದು ಇಂಥಾ ಉಡಾಫೆ ಕೆಲಸ ಮಾಡೋಕಾ? ಹೇಗಾದರೂ ಮೆಟ್ರಿಕ್ಯು ಲೇಷನ್ ಪರೀಕ್ಷೆ ಪಾಸಾದರೆ ನಮ್ಮ ಆಫೀಸಿನಲ್ಲಿ ದೊಡ್ಡೋರ ಕಾಲುಹಿಡಿದು ಕೊಂಡು ಒಂದು ಕೆಲಸ ಮಾಡಿಸಿಕೊಡೋಣ ಅಂತಿದ್ದೆ. ಹೋಗಲಿ ಸ್ಕೂಲಿಗೆ ಹೋಗೋಕಾಗದಿದ್ದರೆ ಪ್ರೈವೇಟಾಗಿ ಕಟ್ಟಿ ಪಾಸುಮಾಡಿಕೋ ಅಂತ ಗಿಣಿಗೆ ಹೇಳಿದಹಾಗೆ ಹೇಳಿದೆ. ಕೇಳದೆ ನಾಲ್ಕು ಜನರಲ್ಲಿ ನನ್ನ ಮಾನ ತೆಗೀತಿದಾನೆ. ಇವನಿಗೆ ನ್ಯಾಯವೇನಮ್ಮಾ? ಇವನು ನನಗೆ ಮಾಡುವ ಉಪಕಾರ ಇದೇನೇ ಏನು? ಚಿಕ್ಕಂದಿನಿಂದ ಇವನನ್ನು ಎತ್ತಿ ಬೆಳೆಸಿದೋರು ಯಾರು? ಶಾಂತ ಹುಟ್ಟಿ ದಾಗ ನಿಂಗೋಸ್ಕರ ಅಳುತ್ತಾ ಇದ್ದರೆ ಭುಜದ ಮೇಲೆ ಹಾಕಿಕೊಂಡು ರಾತ್ರಿ ಯೆಲ್ಲಾ ಸುಧಾರಿಸಿದೋರು ಯಾರು? ಎಂದಾದರೂ ಅಪ್ಪ ಕೊಂಡುಕೊ ಳ್ಳೋಕೆ ಒಂದಾಣೆ ಕೊಟ್ಟರೆ ನಾನು ತಿನ್ನದೆ ಇವನಿಗೋಸ್ಕರ....ಈ ಮುಟ್ಠಾಳ ನಿಗೋಸ್ಕರ ಪೆಪ್ಪರ್‌ಮೆಂಟ್, ಬಿಸ್ಕೆಟ್ಸ್ ತಂದುಕೊಡುತ್ತಾ ಇದ್ದೆ. ಇವನಿ ಗೋಸ್ಕರ ಅಪ್ಪನ ಹತ್ತಿರ ಎಷ್ಟು ಸಲ...."

"ಈಗ ನೀನಷ್ಟು ವ್ಯಥೆ ಪಡಬೇಕಾದ್ದೇನಿದೆಯಣ್ಣಾ ಇದರಲ್ಲಿ?" ಅಣ್ಣನ ವಾಕ್ಪ್ರಹಾರಕ್ಕೆ ಅಡ್ಡಕಟ್ಟೆ ಹಾಕಿದಳು ಜಾನಕಿ.

"ವ್ಯಥೆಪಡೋಕೆ ಇದರಲ್ಲಿ ಏನೂ ಇಲ್ಲವೇ? ಕೋಪ ಮಾಡಿಕೊಳ್ಳೋ ಅಂಥಾದ್ದು ಏನೂ ಇಲ್ಲವೇ? ನಿಂಗೂ ಹಾಗೇ ಅನ್ನಿಸ್ತಾ ಇದೆಯೇನು?"

"ಸುಮ್ಮನೆ ಆವೇಶಪಡಬೇಡಣ್ಣಾ. ಪ್ರಕಾಶನಿಗೆ ಓದು ಹತ್ತಲಿಲ್ಲಾಂತ ನಮಗೆಲ್ಲಾ ಗೊತ್ತು. ಮತ್ತೆ ಬದುಕೋಕೆ ಯಾವುದೋ ಒಂದು ವೃತ್ತಿ ನೋಡಿಕೋಬೇಕಲ್ಲಾ. ಎಷ್ಟು ದಿನ ನೀನು ಅನ್ನ ಹಾಕುತ್ತಿ? ನೀನು ಅಯ್ಯೋ ಪಾಪ ಅಂತ ಅನ್ನ ಹಾಕಿದರೂ ಅವನು ಮಾತ್ರ ಎಷ್ಟು ದಿನಾಂತ ನಿನ್ನಮೇಲೆ ಆಧಾರಪಟ್ಟು ಇರಬಲ್ಲ?"

"ಅಂದರೆ ನನ್ನ ಆವಶ್ಯಕತೇನೇ ಇಲ್ಲದೆ ಈ ಪೇಪರ್ ಮಾರಿ ನಿನ್ನ ತಮ್ಮ ಬದುಕುತ್ತಾನೆ ಅಂತೀಯಾ?"

"ಅಣ್ಣಾ, ಬದುಕುತ್ತೀನೋ ಇಲ್ಲವೋ ಈಗಲೇ ನಾನೇನೂ ಹೇಳಲಾರೆ. ಆದರೆ ಸಂಪಾದಿಸಿ ನನ್ನ ಅನ್ನ ನಾನು ತಿನ್ನಬೇಕೆಂಬ ಹಂಬಲ ಮಾತ್ರ ಇದೆ.

ಪ್ರಯತ್ನಿಸಬೇಕೆಂಬ ಹಠವೂ ಇದೆ. ನನ್ನ ಪ್ರಯತ್ನ ಸಫಲವಾಗದೆ ನಿನ್ನ ಆವಶ್ಯಕತೆ ಬೇಕಾದಾಗ ನನಗೆ ನೀನು, ನಿನಗೆ ನಾನು ಆಗದೆ ಹೋಗುತ್ತೀವೇನು? ಅಣ್ಣ-ತಮ್ಮಂದಿರ ಮಧ್ಯೆ ಕೊಟ್ಟುಕೊಳ್ಳುವುದು ಇರದಿರುತ್ತದೆಯೇನು?"

ತಮ್ಮನ ಕಡೆ ನೋಡಿ ಹೇಳನೆಯಿಂದ ನಕ್ಕ ಶ್ರೀಹರಿ. "ಪೇಪರ್ ಮಾರಿ ನೀನು ನನಗೆ ಹಣ ಕಳುಹಿಸು. ನನ್ನ ತಮ್ಮ ಕಳುಹಿಸಿದಾಂತ ಎರಡೂ ಕೈಗಳಿಂದ ಬಾಚಿಕೊಳ್ಳುತ್ತೀನೆ ನಾನು."

"ಏನೋಪ್ಪಾ. ಒಂದೊಂದು ಸಲ ಯಾರ ಅದೃಷ್ಟ ಹೇಗಿದೆ ಅಂತ ಹೇಳೋಕಾಗೊಲ್ಲ. ನಮ್ಮ ಸೋದರಮಾವನ ಮೊಮ್ಮಗ ಒಬ್ಬ ಹೀಗೇ ಓದು ತಲೆಗೆ ಹತ್ತದೆ ಯಾತಕ್ಕೂ ಕೆಲಸಕ್ಕೆ ಬರೊಲ್ಲಾಂತ ಅಂದುಕೋತಾ ಇದ್ದವನು ಎಂಥದೋ ಮಿಷನ್ ಇಟ್ಟು ಸಾವಿರಾರು ರೂಪಾಯಿ ಸಂಪಾದಿಸಿದನಂತೆ. ನಮ್ಮ ಪ್ರಕಾಶನ ಹಣೆಯುಬರಹ ಹೇಗಿದೆಯೋ ಮತ್ತೆ!"

"ಎಲ್ಲಿಂದೆಲ್ಲಿಗೆ ಆಲೋಚಿಸುತ್ತೀಯಮ್ಮಾ, ನೀನು? ಅವನು ಸಾವಿರಾರು ರೂಪಾಯಿ ಖರ್ಚುಮಾಡಿ ಪ್ರೆಸ್ಸು ಇಟ್ಟ. ವ್ಯಾಪಾರ ಚೆನ್ನಾಗಿತ್ತು, ಸಂಪಾದಿಸಿದ. ಇವನಿಗೇನಿದೆ? ಮುಖದ ಮೇಲೆ ಮೀಸೆ ಕೂಡಾ ಇಲ್ಲವಲ್ಲಾ."

ಅಣ್ಣನ ಮಾತನ್ನು ಕೇಳಿ ಪ್ರಕಾಶ ನಕ್ಕ.

"ಈವತ್ತಿನಿಂದ ಮೀಸೆ ಬಿಡುತ್ತೀನಣ್ಣ. ಎಂದಾದರೂ ಬೇಕಾದಾಗ ಅದನ್ನು ನಿನ್ನ ಹತ್ತಿರ ಅಡವಿಟ್ಟು ಹಣ ತಗೋತೀನಿ."

"ನೋಡಮ್ಮಾ. ಇವನಿಗೆಷ್ಟು ಗರ್ವಾಂತ" ಶ್ರೀಹರಿ ಮುಖ ಸಿಂಡರಿಸಿದ.

"ಏನೋ ಅದು. ಚಿಕ್ಕೋರು, ದೊಡ್ಡೋರು ಅಂತ ನೋಡದೆ ಮಾತಾಡ್ತೀ." ಸುಂದರಮ್ಮ ಗದರಿಸಿದರು.

"ನನ್ನ 'ಮೂಲಧನ' ಕುರಿತು ಅಣ್ಣನಿಗೆ ಚಿಂತೆ ಬೇಡಮ್ಮ. ನಾನು ನೀತಿ, ಪ್ರಾಮಾಣಿಕತೆ, ಕಷ್ಟಪಟ್ಟು ಕೆಲಸಮಾಡುವ ಹಠ, ಇವುಗಳನ್ನು ಪಣವಾಗಿಟ್ಟು ಕೆಲಸ ಮಾಡುತ್ತೀನೆ. ನನಗೆ ಒಳ್ಳೆಯದಾದರೆ ಮತ್ತೆ ಕೆಲವರು ಈ ನಿರುದ್ಯೋಗ ಸಮಸ್ಯೆಯಿಂದ ವಿಮುಕ್ತರಾಗುತ್ತಾರೆ" ಎಂದ ಪ್ರಕಾಶ.

* * *

ಪ್ರಕಾಶನನ್ನು ನೋಡಿ ಕೆಲವರು ವಿಮರ್ಶಿಸಿದರು. ಕೆಲವರು ಸಹಾನುಭೂತಿ ತೋರಿಸಿದರು. "ಛಿ! ಛಿ! ಅವರ ವಂಶದಲ್ಲಿ ಎಂದಾದರೂ, ಯಾರಾದರೂ ಇಂಥಾ ಕೆಲಸ ಮಾಡಿದ್ದುಂಟೇ, ಹಾಳುಕಾಲ ಹಾಳುಬುದ್ಧಿ" ಎಂದು ಛೀಮಾರಿ ಹಾಕಿದರು.

"ವ್ರತ ಕೆಟ್ಟರೂ ಸುಖ ದಕ್ಕಬೇಕು. ಇದರಿಂದ ಅವನಿಗೆ ಬರೋ ಸಂಪಾದನೆಯಾದರೂ ಎಂಥದ್ದು! ದಿನವಿಡೀ ಸುತ್ತಿ ಕೆಲಸಮಾಡಿದರೂ ಒಂದು ರೂಪಾಯೋ ಎರಡುರೂಪಾಯೋ ಬರುತ್ತೆ. ಅದಕ್ಕಿಂತ ಅಂಗಡೀಲಿ ಕೂತಕಡೆ ಗುಮಾಸ್ತೆಕೆಲಸ ಮಾಡಿದರೆ ಆಗದೆ?" ಎಂದರು ಕೆಲವರು.

ಪ್ರಕಾಶ ಪೇಪರ್ ಮಾರಿ ಜೀವಿಸುತ್ತೇನೆಂದು ಹೇಳಿದಾಗಿನಿಂದ ಶ್ರೀಹರಿ ಉರಿದುರಿದು ಬೀಳುತ್ತಿದ್ದ.

"ನಾನು ಇನ್ನೇನು ಕೆಲಸ ಮಾಡಬಲ್ಲೆನಣ್ಣಾ. ಓದುಗೀದೂ ಇಲ್ಲ ದವನು. ನನ್ನ ಅವಸ್ಥೆ ನಾನು ಪಡುತ್ತೇನಿ ಬಿಡಣ್ಣಾ" ಎಂದು ಸಮಾಧಾನ ವಾಗಿ ಹೇಳಿದ್ದರೆ ಶ್ರೀಹರಿಗೆ ಅಷ್ಟು ಕೋಪ ಬರುತ್ತಿರಲಿಲ್ಲವೇನೋ.

"ಗೌರವಪ್ರದವಾದ ಗುಮಾಸ್ತೆಗಿರಿ ಮಾಡಿ ನೀನು ಸಂಪಾದಿಸುತ್ತಿರೋ ಅಷ್ಟನ್ನು ನಾನೂ ಸಂಪಾದಿಸಬಲ್ಲೆ ಗಾಳಿ, ಬೆಳಕಿನಲ್ಲಿ ಓಡಾಡುತ್ತಾ ಎಷ್ಟೋ ತರಹಯ ಮನುಷ್ಯರನ್ನು ನೋಡುತ್ತಿರುತ್ತೇನಾದ್ದರಿಂದ ಬದುಕನ್ನು ನಿನಗಿಂತ ಚೆನ್ನಾಗಿ ಅರ್ಥಮಾಡಿಕೊಳ್ಳುವ ಅವಕಾಶ ನನಗಿದೆ. ನಾನು ಕೆಟ್ಟುಹೋಗು ತ್ತೇನೆಂಬ ಭಯ ನನಗಿಲ್ಲಣ್ಣಾ. ನಂಬಿಕೆಯಿಟ್ಟು, ಕಷ್ಟಪಟ್ಟು ಮನುಷ್ಯ ಯಾವ ಕೆಲಸ ಮಾಡಿದರೂ ಅಪಜಯ ಅವನ ಬಳಿ ಸುಳಿಯುವುದಿಲ್ಲವೆಂದು ನನ್ನ ನಂಬಿಕೆ. ನಾನು ಹೇಡಿಯಲ್ಲ. ಕಾಲಕಟ್ಟಿದ ಪಣವನ್ನು ಎದುರಿಸಿ ನಿಂತು ಗೆಲ್ಲುತ್ತೇನಿ" ಎಂದು ತನ್ನನ್ನೂ ತನ್ನ ನೌಕರಿಯನ್ನೂ ಕಡಿಮೆಮಾಡಿ ಮಾತಾಡಿದ್ದು ಶ್ರೀಹರಿಗೆ ಮೈಯೆಲ್ಲಾ ಉರಿಯೆಬ್ಬಿಸಿತು.

ಮನೆಯಲ್ಲಿ ತಾಯಿ ಯಾವುದಕ್ಕಾದರೂ ಹಣ ಕೇಳಿದರೆ, "ಎಲ್ಲಕ್ಕೂ ನನ್ನನ್ನೇ ಕೇಳುತ್ತೀಯಲ್ಲಾ, ಸಂಪಾದಿಸ್ತಾ ಇದಾನಲ್ಲಾ ನಿನ್ನ ಕಿರೀಮಗ ಅವನನ್ನ ಕೇಳು. ನನ್ನ ಸಂಬಳ ಎಷ್ಟು? ನಾನೆಷ್ಟು? ಅವನ ಸಿಗರೆಟ್ಟಿಗೂ ಬೀಡಕ್ಕೂ ಆದಷ್ಟಿರದು" ಎನ್ನುತ್ತಿದ್ದ.

"ಪ್ರಕಾಶ ಸಿಗರೇಟ್ ಸೇದುತ್ತಾನೇನೋ?" ಸುಂದರಮ್ಮ ಗಾಬರಿ ಯಿಂದ ಪ್ರಶ್ನಿಸುತ್ತಿದ್ದರು.

"ಇಲ್ಲದಿದ್ದರೆ ಆ ಅಪ್ಪಣ್ಣನ ಜತೆ ಹೇಗೆ ಸ್ನೇಹ ಬೆಳೀತಾ ಇತ್ತು? ಅವನೇಕೆ ಇವನಿಗೆ ಹಣ ಸಹಾಯ ಮಾಡುತ್ತಿದಾನೆ? ಕೆಲವು ಪತ್ರಿಕೆಗಳಿಗೆ ಏಜೆನ್ಸಿ ತೆಗೆದುಕೊಳ್ಳುವ ಪ್ರಯತ್ನದಲ್ಲಿದಾನಂತೆ. ಒಳ್ಳೇದೇತಾನೆ? ಅವನು ಮುಂದೆ ಬಂದರೆ ನನಗೂ ಸಂತೋಷಾನೇ" ಎನ್ನುತ್ತಿದ್ದ.

ಅಪ್ಪಣ್ಣ ಪ್ರಕಾಶನಿಗೆ ಹಣ ಸಹಾಯ ಏಕೆ ಮಾಡುತ್ತಿದಾನೋ ಅವರಿಬ್ಬರ ಮಧ್ಯೆ ಇಷ್ಟು ನಂಬಿಕೆ, ಸ್ನೇಹ ಹೇಗೆ ಏರ್ಪಟ್ಟಿತೋ ಜಾನಕಿಗೆ ಸಹ

ಅರ್ಥವಾಗಲಿಲ್ಲ.

"ಏನೋ ಹುಡುಗ, ತನ್ನ ಕಾಲ ಮೇಲೆ ತಾನು ನಿಲ್ಲೋಣಾಂತ ಪ್ರಯತ್ನಿಸುತ್ತಿದ್ದಾನೆ. ಹೋದರೆ ಹೋಗಲಿ" ಅಂತ ಒಂದಿಷ್ಟು ಹಣ ಬಿಸಾಡಲು ಅಪ್ಪಣ್ಣ ಕೋಟೀಶ್ವರನೇನಲ್ಲ. ಎಷ್ಟು ಧನವಂತರಾದರೂ ಫಲಾಪೇಕ್ಷೆಯಿಲ್ಲದೆ ಇನ್ನೊಬ್ಬರಿಗಾಗಿ ಹಣ ಖರ್ಚು ಮಾಡಲಾರರು. ಆರ್ಥಿಕವಾಗಿಯಾಗಲೀ, ಮತ್ತೊಂದು ರೀತಿಯಾಗಲೀ ಲಾಭವಿಲ್ಲದಿದ್ದಲ್ಲಿ ಕೈ ಸಡಿಲಬಿಡಲಾರರು. ಅಂಥಾ ಬೀಡಿ ಅಂಗಡಿ ಇಟ್ಟು ಬದುಕುತ್ತಿರೋ ಅಪ್ಪಣ್ಣ...."

"ನೀನು ಸರಿಯಾಗಿ ಊಹಿಸಿದೆ ಅಕ್ಕಾ. ಕಂಡವರಿಗೆಲ್ಲಾ ಹಣ ಸಹಾಯ ಮಾಡೋ ಉದಾರಿಯಲ್ಲ ಅಪ್ಪಣ್ಣ. ನಮ್ಮೆಲ್ಲರಂತೆ ಅವನಿಗೂ ಹಣದ ವ್ಯಾಮೋಹವಿದೆ ಬೇರಿಯಲ್ಲಿ ಎರಚುವಷ್ಟು ಹಣ ಅವನಲ್ಲಿಲ್ಲ ನಿಜ. ಆದರೆ ನಮ್ಮಲ್ಲಿ ಇಲ್ಲದ ಒಂದು ಗುಣ ಅವನಲ್ಲಿದೆ. ಅದು ಮನುಷ್ಯರನ್ನು ನಂಬುವುದು. ಈ ಗುಣ ಅವನನ್ನು ಬಹಳ ಸಲ ಮೋಸಗೊಳಿಸಿದೆ. ಆದರೆ ಅವನು ಅದನ್ನು ಇನ್ನೂ ಬಿಟ್ಟಿಲ್ಲ. ಆ ವಿಧವಾದ ನಂಬಿಕೆಯಿಟ್ಟು ನನಗೆ ಮೂಲಧನಕ್ಕೆ ಸಹಾಯ ಮಾಡಿದಾನೆ. ನಾನು ಕೆಲಸ ಮಾಡುತ್ತೇನೆ. ಲಾಭವನ್ನು ಇಬ್ಬರೂ ಸಮಾನ ವಾಗಿ ಹಂಚಿಕೊಳ್ಳುತ್ತೇವೆ. ಇದೇ ನಮ್ಮ ಒಪ್ಪಂದ" ಎಂದ ಪ್ರಕಾಶ.

ಇದರಲ್ಲಿ ಪ್ರಕಾಶನಿಗೆ ನಷ್ಟವೇನೂ ಇಲ್ಲವೆಂದು ಮನವರಿಕೆಯಾಯಿತು, ಮನೆಯವರಿಗೆಲ್ಲಾ. ಪ್ರಕಾಶನಿಗೆ ಮಾತ್ರ ಅದು ಜೀವನ್ಮರಣ ಸಮಸ್ಯೆ ಯಾಗಿತ್ತು. ತನ್ನ ನೀತಿ-ಪ್ರಾಮಾಣಿಕತೆಗಳನ್ನು ಪಣವಾಗಿಟ್ಟು ಮನುಷ್ಯರ ಒಳ್ಳೆಯತನದೊಂದಿಗೆ ಮಾಡುತ್ತಿದ್ದ ವ್ಯಾಪಾರ ಅದು. ಅದರಲ್ಲಿ ತಕ್ಷಣ ಲಾಭ ಕಾಣಿಸದಿದ್ದರೂ ಬರಬರುತ್ತಾ ಲಾಭ ಬಂದೇ ಬರುತ್ತೆ. ಅದುವರೆವಿಗೂ ತಾನು ಸಹನೆಯಿಂದ ಕೆಲಸಮಾಡುತ್ತಾ ಎದುರು ನೋಡಬೇಕೆಂದುಕೊಂಡ ಪ್ರಕಾಶ.

ಪ್ರಕಾಶ ಎಷ್ಟೋ ಸಹನೆಯಿಂದ ಎದುರು ನೋಡಿಕೊಡಗಿದ. ಒಂದು ದಿನವಲ್ಲ, ಒಂದು ತಿಂಗಳು, ಎರಡು ತಿಂಗಳಲ್ಲ, ಒಂದು ವರ್ಷ ಅತ್ಯಂತ ಸಹನೆ ಯಿಂದ ಕಾದುನೋಡಿದ. ತನ್ನ ಡೈರಿಯಲ್ಲಿ ಸಂತೃಪ್ತಿಕರವಾದ ಒಂದು ವಾಕ್ಯ ಬರೆಯೋಣವೆಂದು. ಅವನಿಗೆ ಡೈರಿ ಬರೆಯುವ ಅಭ್ಯಾಸವಿರಲಿಲ್ಲ. ಆದರೆ ಈ ನಡುವೆ ಬೇಕೆಂದೇ ಅದನ್ನು ಅಭ್ಯಾಸಮಾಡಿಕೊಂಡಿದ್ದ. ತನ್ನ ಸುತ್ತಮುತ್ತ ನವರ ಮಾತುಕತೆ ತನ್ನಲ್ಲಿ ಎಂತಹ ಭಾವನೆಗಳನ್ನುಂಟುಮಾಡುತ್ತವೆಯೋ, ತನ್ನ ಕೆಲಸ ಅವರ ಮೇಲೆ ಯಾವ ರೀತಿಯ ಪ್ರಭಾವವನ್ನು ಬೀರುವುದೋ ತಿಳಿದುಕೊಳ್ಳಲು ದಿನಾ ಬರೆಯುವುದು ಒಳ್ಳೆಯದೆನಿಸಿತು.

ಎಷ್ಟೋ ಸಲ ಆಗಾಗ ಅದನ್ನು ತಿರುವಿಹಾಕುತ್ತಿದ್ದ. ಮನಸ್ಸಿಗೆ

ತಂಪನ್ನೀಯುವ ಮಾತು ಅಲ್ಲಲ್ಲಿ ಅಪರೂಪವಾಗಿ ಕಾಣಿಸುತ್ತಿತ್ತು. ಅದು ಗುರಿ ಕಾಣದ ದಟ್ಟವಾದ ಮಂಜಿನ ಸಮುದ್ರದ ಮಧ್ಯದಲ್ಲಿ ದೋಣಿಯಲ್ಲಿ ಪ್ರಯಾಣಿಸುತ್ತಾ ದಿಕ್ಕುಗಾಣದ ಪರಿಸ್ಥಿತಿಯಲ್ಲಿ ಕಗ್ಗತ್ತಲನ್ನು ಸೀಳಿಕೊಂಡು ಆಕಾಶದ ಅಂಚಿನಲ್ಲಿ ಮಿಂಚಿದ ಮಿಂಚು ಅದು. ಆದ್ದರಿಂದಲೇ ಗುರಿಕಾಣ ದಿದ್ದರೂ ಕತ್ತಲೆಯಲ್ಲಿ ಬೆಳಕನ್ನು ಕಂಡ ಸಂತೃಪ್ತಿ ದೊರೆಯುತ್ತಿತ್ತು ಅವನಿಗೆ. ಅಂತಹ ಮಿಂಚು ಆ ಪೇಜುಗಳಲ್ಲಿ ಅಲ್ಲಲ್ಲಿ ಕಾಣಿಸುತ್ತಿತ್ತು. ಸಹೃದಯರಾ ರಾದರೂ ಅವನು ಮಾಡುತ್ತಿದ್ದ ಕೆಲಸವನ್ನು ಪ್ರಶಂಸಿಸಿದಾಗ ಉತ್ಸಾಹವಂತ ರಾಠಾದರೂ, "ಪ್ರಕಾಶ, ನಿನ್ನಂತಹವರು ಸಮಾಜಕ್ಕೊಂದು ಉದಾಹರಣೆ" ಎಂದು ಭುಜ ತಟ್ಟಿದಾಗಲಾಗಲೀ, ಅಂತಹ ಬೆಳಕು ಕಾಣುತ್ತಿತ್ತು.

ಮೊದಲನೆಯ ಪುಟದ ಮೇಲೆ ಅವನ ದೃಷ್ಟಿ ಬಹಳ ಹೊತ್ತು ನಿಲ್ಲು ತ್ತಿತ್ತು. 'ಆಂಧ್ರರು ಆರಂಭಶೂರತ್ವಕ್ಕೆ ಹೆಸರುವಾಸಿಯೆಂಬ ಗಾದೆಯನ್ನು ನನ್ನ ವಿಷಯದಲ್ಲಿ ನಿಜವಾಗಿಸಬೇಡ ದೇವರೇ, ನಾನು ನಡೆಯುತ್ತಿರುವ ದಾರಿ ಸರಿಯಾದುದೇ ಆದರೆ ನನ್ನನ್ನು ಮುಂದಕ್ಕೆ ನಡೆಸು. ತಾತಮುತ್ತಾತದಿರ ಹೆಜ್ಜೆಯನ್ನು ಅನುಸರಿಸದವರು ಹಾಳಾಗುತ್ತಾರೆಂಬ ಅಭಿಪ್ರಾಯವನ್ನು ಮಾನವರಲ್ಲಿ ಬಲಪಡುವಂತೆ ಮಾಡಬೇಡ. ಕಷ್ಟಪಟ್ಟು ಕೆಲಸ ಮಾಡಿದರೆ ಯಾವ ಕೆಲಸದಲ್ಲಾದರೂ ಅಭಿವೃದ್ಧಿ ಪಡೆಯಬಹುದೆಂಬ ನನ್ನ ನಂಬಿಕೆ ಯನ್ನು ಸುಳ್ಳಾಗಿಸಬೇಡ.'

ಪ್ರಕಾಶ ತನ್ನ ಡೈರಿಯಲ್ಲಿ ಬರೆದಿದ್ದ ದೈವಪ್ರಾರ್ಥನೆ ಇದು. ಅವನ ಜೀವಿತಾಶಯ ಸಹ ಅದೇ. ದಿನಾ ಅವೇ ಮಾತುಗಳನ್ನು ಮನನಮಾಡಿ ಕೊಳ್ಳುತ್ತಿದ್ದ. ಆರುತಿಂಗಳವರೆವಿಗೂ ಅವನ ಹೆಜ್ಜೆ ಇಟ್ಟಲ್ಲಿಯೇ ನಿಂತು ಬಿಟ್ಟಿತ್ತು. ಮನೆಯ ಒಳಗೂ ಹೊರಗೂ ಪ್ರತಿಕೂಲ ವಾತಾವರಣವನ್ನು ಎದುರಿಸಬೇಕಾಗಿ ಬಂದಿತ್ತು.

"ಏನಯ್ಯಾ ಸೋಮಿ, ಓದಿಕೊಂಡೋನು. ನಮ್ಮ ಹೊಟ್ಟೆ ಯಾಕೆ ಹೊಡೀತಿ. ನೌಕರಿ ಮಾಡಬಾರದಾ?" ಎನ್ನುತ್ತಿದ್ದರು, ಮಿಕ್ಕ ಪೇಪರ್ ಮಾಡೋ ಹುಡುಗರು. ಅವರೆಲ್ಲಾ ಸೇರಿ ಅವನಿಗೆ ವ್ಯಾಪಾರ ಸಾಗದಂತೆ ಮಾಡೋರು. ಸೈಕಲ್ ಷಾಪಿನವರಿಗೆ ಲಂಚ ಕೊಟ್ಟು ಅವನಿಗೆ ಬಾಡಿಗೆ ಸೈಕಲ್ ಸಿಗದಂತೆ ಮಾಡುತ್ತಿದ್ದರು.

"ನೀನು ಸೈಕಲ್ ತಗೊಂಡು ಓಡಿಹೋದರೆ ನಾವೆಲ್ಲಿ ಹುಡುಕೋಣ. ಇಪ್ಪತ್ತೈದು ರೂಪಾಯಿ ಡಿಪಾಜಿಟ್ ಕಟ್ಟು. ಗುರ್ತುಪರಿಚಯ ಇಲ್ಲದೋರಿಗೆ ನಾವು ಸೈಕಲ್ ಕೊಡೊಲ್ಲ" ಎನ್ನುತ್ತಿದ್ದ ಮಿಕ್ಕವರಿಂದ ಲಂಚತಿಂದ ಸೈಕಲ್

ಅಂಗಡಿಯ ಯಜಮಾನ.

ಬೇಡಿಕೊಂಡರೆ ಮುರುಕು ಸೈಕಲ್ ಕೊಡುತ್ತಿದ್ದ. ಅದು ಸ್ವಲ್ಪ ದೂರ ಹೋಗುವಷ್ಟರಲ್ಲಿ ಚೈನು ಕಳಚಿಕೊಳ್ಳುತ್ತಿತ್ತು. ಎರಡು ಬೀದಿ ಸುತ್ತುವಷ್ಟರಲ್ಲಿ ಟೈರಿನಲ್ಲಿ ಗಾಳಿ ಹೋಗುತ್ತಿತ್ತು. ಮಿಕ್ಕ ಮನೆಗಳಿಗೆಲ್ಲಾ ತನ್ನೊಂದಿಗೆ ಸೈಕಲನ್ನೂ ತಳ್ಳಿಕೊಂಡು ಹೋಗಬೇಕಾಗುತ್ತಿತ್ತು.

"ಏನಯ್ಯಾ, ಲೇಟುಮಾಡುತ್ತಿ. ಮಿಕ್ಕವರೆಲ್ಲಾ ಕೊಟ್ಟುಹೋಗಿ ಎಷ್ಟು ಹೊತ್ತಾಯಿತು" ಎಂದು ಸಿಡುಕುತ್ತಿದ್ದರು.

ಪ್ರಕಾಶ ಸೈಕಲ್ ತೆಗೆದುಕೊಳ್ಳದೆಯೇ ಒಂದೆರಡು ದಿನ ಓಡುತ್ತಾ ಪೇಪರ್ ಕೊಟ್ಟು ನೋಡಿದ. ಆ ತಣ್ಣನೆಯ ಪ್ರಾತಃಕಾಲ ಸಮಯದಲ್ಲಿ ಸಹ ಅವನ ಬಟ್ಟೆ ಬೆವರಿನಿಂದ ತೊಯ್ದುಹೋಗುತ್ತಿತ್ತು. ಕೆಲಸ ಪೂರ್ತಿಯಾದ ನಂತರ ಹತ್ತುನಿಮಿಷದವರೆವಿಗೂ ಏದುಸಿರು ಬಿಡುತ್ತಾ ಸುಧಾರಿಸಿಕೊಳ್ಳಬೇಕಾಗುತ್ತಿತ್ತು.

ನಾಲ್ಕು ದಿನಕ್ಕೇ ಅದು ಆಚರಣಯೋಗ್ಯವಾದ ಕೆಲಸವಲ್ಲವೆಂದು ಅನುಭವದಿಂದ ತಿಳಿದುಬಂತು. ತಾನು ಈ ವೃತ್ತಿಯನ್ನು ನಿರ್ವಹಿಸಬೇಕಾದರೆ ಎರಡೇ ಎರಡು ಮಾರ್ಗಗಳಿದ್ದುವು. ಒಂದು ಸ್ವಂತ ಸೈಕಲ್ ಆದರೂ ಇರಬೇಕು. ಇಲ್ಲವೇ ಆ ವೃತ್ತಿ ಬಂದವರೊಂದಿಗೆ ಸ್ನೇಹವನ್ನಾದರೂ ಬೆಳೆಸಬೇಕು. ಮೊದಲನೆಯದು ಹಣದೊಂದಿಗೆ ಕೂಡಿದ ವ್ಯವಹಾರ. ಎರಡನೆಯದು ಒಳ್ಳೆಯ ಮಾತಿನಿಂದ ಅನುಕೂಲಿಸಬಹುದು ಎನ್ನಿಸಿತು.

ಪೇಪರ್ ಹುಡುಗರೆಲ್ಲಾ ತಮ್ಮತಮ್ಮ ಪೇಪರುಗಳ ಕಟ್ಟನ್ನು ಸೈಕಲ್‌ಗೆ ಕಟ್ಟಿ, ರೇಸಿಗೆ ಸಿದ್ಧವಾಗಿನಿಂತ ಪಂದ್ಯದ ಕುದುರೆಗಳಂತೆ ಸೈಕಲ್ ಹ್ಯಾಂಡಲ್ ಬಾರ್ ಮೇಲೆ ಕೈಯಿಟ್ಟು ನಿಂತಿದ್ದರು. ಪ್ರಕಾಶ ತನ್ನ ಪೇಪರ್ ಕಟ್ಟನ್ನು ಕೈಯಲ್ಲಿ ಹಿಡಿದು ನಿಂತಿದ್ದ.

"ಏನಯ್ಯಾ ಪೇಪರ್ ಹಂಚೊಲ್ಲವಾ?"

"ಹೇಗೆ ಹಂಚಲಿ? ನಿಮ್ಮಂತೆಯೇ ಬದುಕೋಣ ಅಂತ ಬಂದಿದೀನಿ ನಾನು. ನೀವು ನನ್ನನ್ನು ದೂರ ತಳ್ಳುತ್ತಿದೀರಿ. ನೀವಿಷ್ಟು ಜನ ಇರೋವಾಗ ನಾನೊಬ್ಬ ಹೆಚ್ಚಾಗುತ್ತೇನೆಯೇ, ಹೇಳಿ ಮತ್ತೆ?"

"ಅಲ್ಲ ಕಣಪ್ಪ. ನೀನು ಓದಿಕೊಂಡೋನು. ಬೇರೆ ಏನಾದರೂ ಕೆಲಸ ಮಾಡಿಕೋಬೋದಲ್ಲ. ಇಲ್ಲಿಗ್ಯಾಕೆ ಬಂದೇಂತ!"

"ನೌಕರಿ ಮಾಡುವಷ್ಟು ಓದು ಇದ್ದಿದ್ದರೆ ಇಲ್ಲಿಗೇಕೆ ಬರ್ತಿದ್ದೆ! ಅದು ಇಲ್ಲಾಂತಲೇ ಈ ಕೆಲಸ."

"ಹಾಗಾದರೆ ನಿಂಗೂ ನಮ್ಮಂಗೇ ಓದು ಬರಾ ಇಲ್ಲಾನ್ನು. ಮತ್ತೆ ಷೋಕಾಗಿ ಬಟ್ಟೆ ಆಕ್ತಿ. ನೀಟಾಗಿ ತಲೆ ಬಾಚ್ತಿ. ಎಲ್ಲೋ ದೊಡ್ಡಮನುಷ್ಯಾ ಅಂದುಕೊಂಡ್ವಿ."

ಪ್ರಕಾಶನ ಮಾತು ಅವರಿಗೆ ಹಿತವಾಗಿ ಕಂಡಿತು. ಅವನು ತಮಗಿಂತ ಹೆಚ್ಚು ಎಂಬ ಭಾವನೆ ಅವರಲ್ಲಿತ್ತು. ಆದ್ದರಿಂದಲೇ ಅವನನ್ನು ಮುಂದಕ್ಕೆ ಹೋಗಗೊಡಬಾರದೆಂಬ ಈರ್ಷೆ ಅವರಲ್ಲಿ ತಲೆಯೆತ್ತಿತ್ತು. ಈಗ ಅವನು ತಮ್ಮ ಹಾಗೆಯೇ ಎಂದು ತಿಳಿದ ನಂತರ ಅವರಿಗೆ ಅವನ ಮೇಲೆ ಕನಿಕರ ಹುಟ್ಟಿತು.

"ಕೆಂಪಗನ್ನೆ ಅದಕ್ಕೇ ಅಂಗೆ ಕಾಣ್ತಾನೆ. ಹೋಗಲಿಬಿಡ್ರೋ. ಬಂದೋನು ಎಲ್ಲಿಗೋಗ್ತಾನೆ. ಅವನಿಗೂ ಒಂದು ಸೈಕಲ್ ಕೊಡನ್ನು" ಎಂದ ಅವರಿಗೆಲ್ಲಾ ನಾಯಕನಂತಿದ್ದ ರಾಮು.

ಅಷ್ಟರಿಂದಲೇ ಪ್ರಕಾಶನ ಸಮಸ್ಯೆಗಳೆಲ್ಲಾ ಪರಿಹಾರವಾದುವೆಂದಲ್ಲ. ಹಗಲೆಲ್ಲಾ ಕಷ್ಟಪಟ್ಟರೂ ಸಾಕಷ್ಟು ಹಣ ಕೈಗೆ ಬರುತ್ತಿರಲಿಲ್ಲ. ಸೈಕಲ್ ಬಾಡಿಗೆ, ಕಾಫಿ ಖರ್ಚಿನ ನಂತರ ಕೈಯಲ್ಲಿ ಮಿಕ್ಕ ದುಡ್ಡನ್ನು ನೋಡಿದಾಗ ಇದಕ್ಕೋಸ್ಕರವೇ ತಾನು ಇಷ್ಟು ಕಷ್ಟಪಟ್ಟಿದ್ದು?—ಅನ್ನಿಸುತ್ತಿತ್ತು.

"ಎಲ್ಲೋ ನಿನ್ನ ಸಂಪಾದನೆ? ಮನೆಗೆ ತರೊಲ್ಲವೇನು? ಎಷ್ಟು ಕೂಡಿಟ್ಟಿದ್ದೀ. ಎಲ್ಲಾ ಒಂದೇಸಲ ತೋರಿಸಿ ನಮ್ಮನ್ನು ಆಶ್ಚರ್ಯಪಡಿಸೋಣ ಅಂತ ಇದೀಯಾ?" ಎಂದು ಹಾಸ್ಯ ಮಾಡುತ್ತಿದ್ದ ಅಣ್ಣ.

"ನಾನು ಹೇಳಲಿಲ್ಲವೇನಯ್ಯಾ. ಈ ಕೆಲಸ ಹೊಟ್ಟೆಗೆ ಬಟ್ಟೆಗೆ ಆಗೊಲ್ಲ ಅಂತ. ಯಾವುದಾದರೂ ವ್ಯಾಪಾರ ಮಾಡಪ್ಪಾ ಅಂದರೆ ಕೇಳೊಲ್ಲ" ಎನ್ನುತ್ತಿದ್ದ ಅಪ್ಪಣ್ಣ.

"ವ್ಯಾಪಾರ ಮಾಡೋಕೆ ಇಡುಹಣ ಬೇಕಲ್ಲ. ನನ್ನ ಹತ್ತಿರ ಏನಿದೆ? ಒಂದು ವೇಳೆ ಅದೃಷ್ಟ ಕೂಡಿಬಂದು ಯಾವುದಾದರೂ ವ್ಯಾಪಾರ ಅಂತ ಮಾಡಿದರೂ ಇದಕ್ಕೆ ಸಂಬಂಧಿಸಿದ್ದೇ ಆಗಿರಬೇಕು. ಇದು ಒಂದು ವೃತ್ತಿ ಅಂತ ಕೈಹಿಡಿದಿದೀನಿ. ಇದರ ಕೊನೆ ನೋಡದೆ ಬಿಡೊಲ್ಲ" ಎನ್ನುತ್ತಿದ್ದ ಪ್ರಕಾಶ.

ಆರು ತಿಂಗಳು ಕಳೆಯುವಷ್ಟರಲ್ಲಿ ಪ್ರಕಾಶ ಸ್ವಲ್ಪ ಚೇತರಿಸಿಕೊಂಡ. ಅವನ ಕೆಲಸವನ್ನು ಇರವನ್ನು ಬಹಳ ಜನ ಗುರ್ತಿಸಿದರು. ಸಹೃದಯರಿಂದ ಸಲಹೆಗಳೂ ಬರತೊಡಗಿದುವು. ತನ್ನನ್ನು ತಿಳಿದ ಎಲ್ಲರಿಂದಲೂ ಒಳ್ಳೆಯ ಮಾತನ್ನೇ ಪ್ರತಿಫಲವಾಗಿ ಪಡೆದು ತನ್ನ ಕೈಲಾದಷ್ಟು ಅವರಿಗೆ ಸಹಾಯ ಮಾಡುತ್ತಿದ್ದ ಪ್ರಕಾಶ. ಆ ಒಳ್ಳೆಯ ಅಭಿಪ್ರಾಯವನ್ನೇ ಮೂಲವಾಗಿಟ್ಟುಕೊಂಡು ತಾನು ಅಭಿವೃದ್ಧಿ ಹೊಂದಬಹುದೆಂಬ ನಂಬಿಕೆ ಅವನಿಗಿತ್ತು.

'ಆ ಪೇಪರ್ ಕೊಡೋ ಹುಡುಗಾ ತಾನೇ....ಕೆಂಪಗೆ ಕುಳ್ಳಗೆ ಇರ್ತಾನಲ್ಲಾ....ಆ ಹುಡುಗ ಗೊತ್ತಿಲ್ದೆ ಏನು? ನಮ್ಮ ಹುಡುಗರನ್ನ ದಿನಾ ಸ್ಕೂಲಿಗೆ ಬಸ್ಸು ಹತ್ತಿಸ್ತಾ ಇರ್ತಾನೆ. ದೂರ ನಾಲ್ಕು ಹೆಜ್ಜೇನೇ ಆದರೇನಂತೆ, ಮೆಯಿನ್ ರೋಡ್ ದಾಟಬೇಕಲ್ಲಾ. ಹುಡುಗರು ಎಲ್ಲಿ ಕಾರಿನಡಿ ಸಿಕ್ಕಿಕೊಳ್ತಾರೋಂತ ಭಯ. ಬೆಳಗ್ಗೆ ಕೆಲಸದ ಹೊತ್ತು, ಹತ್ತು ನಿಮಿಷವಾದರೇನಂತೆ, ಮನೆಬಿಟ್ಟು ಹೋಗಬೇಕಾದರೆ ಅವಾಂತರ.'

'ಪರವಾಗಿಲ್ಲಮ್ಮಾ, ಆ ಸಮಯಕ್ಕೆ ನಾನು ಪೇಪರ್ ಕೊಟ್ಟಾಗಿರುತ್ತೆ. ಈ ದಾರೀಲೇ ತಾನೇ ಮನೆಗೆ ಹೋಗೋದು. ಮಕ್ಕಳನ್ನ ಬಸ್ಸು ಹತ್ತಿಸಿ ಹೋಗ್ತೀನಿ ಬಿಡಿ—ಅಂತ ದಿನಾ ಬಂದು ಸಮಯಕ್ಕೆ ಸರಿಯಾಗಿ ಮಕ್ಕಳನ್ನ ಕರಕೊಂಡು ಹೋಗ್ತಾನೆ. ಈಗೆಷ್ಟೋ ನೆಮ್ಮದಿ ಮನಸಿಗೆ' ಎನ್ನುತ್ತಾಳೊಬ್ಬ ಗೃಹಿಣಿ.

'ಇದೇನು ಮಹಾ. ಮೊನ್ನೆ ನಾವು ಮನೆ ಬದಲಾಯಿಸಿದಾಗ ನೋಡಬೇಕಿತ್ತು. ಈ ಹುಡುಗ ಇಲ್ದಿದ್ರೆ ಇಷ್ಟೊಂದು ಕೆಲ್ಸ ಯಾರು ಮಾಡ್ತಿದ್ರಪ್ಪಾ ಅನ್ನಿಸಿಬಿಡ್ತು.' ಮತ್ತೊಬ್ಬ ಗೃಹಿಣಿಯ ಅಭಿಪ್ರಾಯ.

'ಚಿಕ್ಕ, ಪುಟ್ಟ ಕೆಲಸ ಯಾವುದು ಹೇಳಿದರೂ ಮಾಡ್ತಾನಾ? ಒಂದು ದಿನಾನಾರ, 'ಅಮ್ಮಾ, ನಂಗಿದು ಬೇಕು' ಅನ್ನೊಲ್ಲ.' ಮತ್ತೊಬ್ಬ ಮುದುಕಮ್ಮನಿಗೆ ಅವನಲ್ಲಿ ಕಂಡ ಒಳ್ಳೆಯ ಗುಣ.

'ಒಳ್ಳೇ ಮನೆತನಸ್ಥರ ಹುಡುಗಾಂತಲೇ ಕಾಣುತ್ತೆ. ಪಾಪ ಮನೇಲಿ ಹೊಡೆದಾಡಿ ಬಂದಿದಾನೋ, ಇಲ್ಲಾ ಅವರೇ ಓಡಿಸಿಬಿಟ್ಟರೋ, ಸ್ವಲ್ಪ ವಿದ್ಯೆ ಬುದ್ಧಿ ಇದ್ದೋರಹಾಗೇ ಕಾಣ್ತಾನೆ.' ಇದೆಲ್ಲಾ ಪ್ರಕಾಶನ ನಿಜಜೀವನವನ್ನು ಕುರಿತು ಅರಿಯದವರ ಅಭಿಪ್ರಾಯ.

ಕೆಲವು ದಿನ ಕಳೆಯುವಷ್ಟರಲ್ಲಿ ಹಿಂದೆ ಅವನನ್ನು ಹೀಯಾಳಿಸಿದ ಪರಿಚಯಸ್ಥರು ಸಹ ಅವನನ್ನು ಮೆಚ್ಚಿಕೊಂಡರು.

'ಹುಡುಗ ಪರವಾಗಿಲ್ಲ, ಪಟ್ಟು ಹಿಡಿದು ಕೆಲಸ ಮಾಡ್ತಿದಾನೆ. ಆ ಬೀಡಿ ಅಂಗಡಿ ಪಕ್ಕದಲ್ಲೊಂದು ಪುಸ್ತಕದ ಅಂಗಡಿ ತೆಗೆದಿದಾನಂತೆ. ವಾರಪತ್ರಿಕೆಗಳು, ಪುಟ್ಟಪುಟ್ಟ ಕತೆಯ ಪುಸ್ತಕಗಳು, ಬಿಳೀಹಾಳೆ, ಪೆನ್ನು—ಈ ತರಹ ಚಿಲ್ಲರೆ ಸಾಮಾನು ಮಾರುತ್ತಾನಂತೆ....'

'ಬೆಳಿಗ್ಗೆ ಸಾಯಂಕಾಲ ಪೇಪರ್ ಮಾರೋದೇ ಅಲ್ಲದೆ ಮೇಯಿಲ್ ವೇಳೆಗೆ ವಾರಪತ್ರಿಕೆ, ಕತೆಪುಸ್ತಕ ತಗೊಂಡು ಹೋಗಿ ಮಾರುತ್ತಾನಂತೆ. ಮಿಕ್ಕ ಟೈಮಿನಲ್ಲಿ ಅಂಗಡೀಲಿ ಕೂತ್ಕೋತಾನಂತೆ.'

'ಪರವಾಗಿಲ್ಲ, ದಿನದಿನಕ್ಕೆ ಸ್ವಲ್ಪ ವ್ಯಾಪಾರ ಕುದುರಿಸಿಕೋತಾ ಇದಾನೆ, ಹುಡುಗ'

'ಚೆನ್ನಾಯಿತು. ಕಷ್ಟಪಡ್ತಿದಾನೆ. ಪ್ರತಿಫಲ ಅನುಭವಿಸುತ್ತಿದಾನೆ. ದಿನವೆಲ್ಲಾ ದುಡಿತಾ ಇಲ್ವೇನು?'

'ದುಡಿದೇ ಯಾರುಮಾತ್ರ ಸುಮ್ಮನೆ ಕೊಡುಕೋತಿದಾರೆ. ಅದಲ್ಲ ಪ್ರಶ್ನೆ. ಮಾಡುವ ಆ ಕೆಲಸ ಕ್ರಮಬದ್ಧವಾಗಿರಬೇಕು ಗಾಣದೆತ್ತು ದಿನವೆಲ್ಲಾ ಸುತ್ತುತ್ತದೆ. ಆದರೆ ಎಷ್ಟು ದೂರ ಮುಂದಕ್ಕೆ ಹೋಗುತ್ತದೆ ಅನ್ನೋದೇ ಮುಖ್ಯ. ಹಾಗೆ ಸುತ್ತಿದ್ದರೆ ಏನು ಪ್ರಯೋಜನ?'

ಪ್ರಕಾಶನ ಕಿವಿಯವರೆಗೂ ಬಾರದ ಪ್ರಜಾಭಿಪ್ರಾಯ ಹೀಗಿದ್ದರೂ ಅವನು ತನ್ನ ಮನೋಗತ ಅಭಿಪ್ರಾಯವನ್ನು ಆ ದಿನ ತನ್ನ ಡೈರಿಯಲ್ಲಿ ತೃಪ್ತಿಯಿಂದ ಹೀಗೆ ಬರೆದ.

'ಈ ದಿನ ವಿಜಯದಶಮಿ. ಹಿಂದಿನ ವರ್ಷ ಇದೇ ದಿನ ನಾನು ನೆಟ್ಟ ಸಸಿ ಬೇರು ಬಿಟ್ಟು ಈ ದಿನ ಚಿಗುರಿದೆ. ಅಪ್ಪಣ್ಣನಿಗೆ ಕೊಡಬೇಕಾದ ಸಾಲ ಸ್ವಲ್ಪ ತೀರಿದೆ. ಒಂದು ಪತ್ರಿಕೆಯ ಏಜೆನ್ಸಿಗೆ ಹಣ ಡಿಪಾಜಿಟ್ ಕಟ್ಟಿದ್ದೇನೆ....ನೀನು ಯಾವ ಕೆಲಸ ಮೊದಲುಮಾಡಿದರೂ ಸಫಲವಾಗುತ್ತದೆ ಪ್ರಕಾಶ ಎಂದ ಅತ್ತಿಗೆಯ ಆಶೀರ್ವಾದ ಫಲಿಸಿದೆ. ಬದುಕಿನಲ್ಲಿ ನನಗಿನ್ನು ಭಯವಿಲ್ಲ. ಪ್ರಗತಿಯನ್ನು ಕುರಿತು ಸಂದೇಹವಿಲ್ಲ. ಕಷ್ಟಪಟ್ಟು ಸಾಧಿಸಲಾರದ ಕೆಲಸವಿಲ್ಲ. ಇದು ನನ್ನ ವೇದ. ಇದೇ ನನ್ನ ಗೀತೆ. ಇದೇ ನನ್ನ ಪೂಜಾಪಾಠ.'

ಪ್ರಕಾಶ ತನ್ನ ಡೈರಿಯಲ್ಲಿ ಏನು ಬರೆದಿದಾನೆಂದು ಮನೆಯಲ್ಲಿ ಯಾರಿಗೂ ಗೊತ್ತಿರಲಿಲ್ಲ. ಆದರೆ ಅವನ ಮುಖದಲ್ಲಿ ಕಂಡ ಸಂತೃಪ್ತಿಯನ್ನು ಮಾತ್ರ ಎಲ್ಲರೂ ನೋಡಿದರು.

ಮೊದಮೊದಲು ಪ್ರಕಾಶ ಬಳಲಿ ಮನೆಗೆ ಬಂದು ಮನೆಯವರ ಅವಹೇಳನೆ, ಚುಚ್ಚುಮಾತುಗಳಿಂದ ನೊಂದು, ನಿರಾಶೆಯಿಂದ ಕುಳಿತ ಸಮಯಗಳಲ್ಲಿ ಜಾನಕಿ ಅವನಲ್ಲಿ ಉತ್ಸಾಹ ತುಂಬುತ್ತಿದ್ದಳು. "ನೀನಾಗಿ ನೀನು ನಿರ್ಮಿಸಿಕೊಳ್ಳುತ್ತಿರುವ ಹೊಸಹಾದಿ ಇದು. ಕಲ್ಲುಮುಳ್ಳುಗಳನ್ನು ತಪ್ಪಿಸಿಕೊಳ್ಳುತಾ ಮುಂದಕ್ಕೆ ಹೆಜ್ಜೆಯಿರಿಸಬೇಕು. ಕಾಡುಮೇಡುಗಳನ್ನು ಸುನಾಯಾಸವಾಗಿ ದಾಟಬೇಕಾದ ವಯಸ್ಸಿನಲ್ಲಿ ಉತ್ಸಾಹದಿಂದ ಉಕ್ಕುವ ಮನಸಿರುವಾಗ ಈ ಚಿಕ್ಕಚಿಕ್ಕ ಅವರೋಧಗಳಿಗೆ ಹೆದರುತ್ತೀಯಾ? ಒಳ್ಳೇದಕ್ಕೋ, ಕೆಟ್ಟದಕ್ಕೋ, ಒಂದು ದಾರಿ ಆರಿಸಿಕೊಂಡಿದೀಯ. ಅದರಲ್ಲಿಯೇ ಮುಂದಕ್ಕೆ ನಡೆ" ಎನ್ನುತ್ತಿದ್ದಳು.

ಅದು ತನ್ನ ಅಂತರ್ವಾಣಿಗೆ ಪ್ರತಿಧ್ವನಿಯಂತೆನಿಸುತ್ತಿತ್ತು ಪ್ರಕಾಶನಿಗೆ.

* * *

ಆ ವರ್ಷವೆಲ್ಲಾ ಅನಸೂಯಮ್ಮನವರ ಆರೋಗ್ಯ ಅಷ್ಟೇನೂ ಚೆನ್ನಾಗಿರಲಿಲ್ಲ. ನಾಲ್ಕುದಿನ ಎದ್ದು ಓಡಾಡಿದರೆ ಹತ್ತುದಿನ ಹಾಸಿಗೆ ಹಿಡಿದಿರುತ್ತಿದ್ದರು. ಆಕೆಯ ಕೆಲಸದ ನಿರ್ವಹಣೆ ಸಹ ತನ್ನ ಮೇಲೆಯೇ ಬಿದ್ದುದರಿಂದ ಜಾನಕಿಗೆ ಬಾಲವಿಹಾರದ ಕಾರ್ಯಭಾರ ಅಧಿಕವಾಯಿತು. ಜತೆಗೊಬ್ಬರು ಇಲ್ಲದಿದ್ದರೆ ಕೆಲಸಮಾಡುವುದು ತುಂಬಾ ಕಷ್ಟವೆನ್ನಿಸತೊಡಗಿತು.

ವಿಧವಿಧವಾದ ಸ್ವಭಾವ, ಬೇರೆಬೇರೆ ವಯಸಿನಲ್ಲಿರುವ ಹುಡುಗರನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಅಷ್ಟೇನೂ ಸುಲಭವಾದ ಕೆಲಸವಾಗಿರಲಿಲ್ಲ. ಅನಸೂಯಮ್ಮ ಮಾತನಾಡುತ್ತಾ ಓಡಾಡಿಕೊಂಡಿದ್ದರೆ ಎಲ್ಲರೂ ಶಾಂತವಾಗಿ ತಮ್ಮತಮ್ಮ ಕೆಲಸಕಾರ್ಯಗಳನ್ನು ಮಾಡಿಕೊಳ್ಳುತ್ತಿದ್ದರು. ಆಕೆಯ ಮಾತಿನಲ್ಲಿ, ನೋಟದಲ್ಲಿ ಮಕ್ಕಳನ್ನು ವಶಪಡಿಸಿಕೊಳ್ಳುವ ಶಕ್ತಿಯಿದ್ದಂತೆ ಅನ್ನಿಸುತ್ತಿತ್ತು ಜಾನಕಿಗೆ.

ಜಾನಕಿ ಅದಕ್ಕೂ ಹೆಚ್ಚಾಗಿ ಅವರನ್ನು ಸಮಾಧಾನಪಡಿಸುತ್ತಿದ್ದರೂ ಅವಳ ಮಾತಿಗೆ ಹುಡುಗರು ಬೆಲೆಕೊಡುತ್ತಿರಲಿಲ್ಲ. ಅದರಲ್ಲೂ ಸ್ವಲ್ಪ ಬೆಳೆದ ಹುಡುಗರನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಜಾನಕಿಗೆ ತುಂಬಾ ಕಷ್ಟವಾಗುತ್ತಿತ್ತು. ಈ ವಿಷಯವನ್ನು ಕುರಿತು ಅನಸೂಯಮ್ಮನವರೊಂದಿಗೆ ಮಾತನಾಡಿ ಕೆಲವು ದಿನಗಳ ಮಟ್ಟಿಗಾದರೂ ಇನ್ನೊಬ್ಬರನ್ನು ಸಹಾಯಕ್ಕೆ ತೆಗೆದುಕೊಳ್ಳಬೇಕಾದ ಆವಶ್ಯಕತೆಯಿದೆಯೆನಿಸಿತು ಜಾನಕಿಗೆ.

ವರಾಂಡದಲ್ಲಿ ಕುರ್ಚಿಯ ಮೇಲೆ ಕುಳಿತಿದ್ದ ಅನಸೂಯಮ್ಮ ಗೇಟಿನ ಬಳಿ ಜಾನಕಿಯನ್ನು ನೋಡಿದೊಡನೆಯೇ, "ಬಾ ಜಾನಕಿ, ನಿನಗೆ ಹೇಳಿ ಕಳುಹಿಸೋಣಾಂತಿದ್ದೆ. ಅಷ್ಟರಲ್ಲಿ ನೀನೇ ಬಂದೆ" ಎಂದರು.

"ಬಾಲವಿಹಾರದ ವಿಷಯ ಸ್ವಲ್ಪ ನಿಮ್ಮೊಡನೆ ಮಾತನಾಡಬೇಕಿತ್ತು."

"ನಾನೂ ಅದನ್ನೇ ಅಂದುಕೊಳ್ಳುತ್ತಿದ್ದೇನೆ. ಒಂದುಸಲ ನಿನ್ನೊಡನೆ ಹೇಳಿರಲಿಲ್ಲವೇ ನನ್ನ ತಮ್ಮ ಗೋವಿಂದಬಾಬು ಬರ್ತಾನೆ ಅಂತ? ನಿನ್ನೆ ರಾತ್ರಿ ರೈಲಲ್ಲಿ ಬಂದ. ನಿನಗೆ ಪರಿಚಯ ಮಾಡಿಸೋಣ ಅಂತ ಹೇಳಿಕಳುಹಿಸೋಣ ಅಂತಿದ್ದೆ. ಅಷ್ಟರಲ್ಲಿ ನೀನೇ ಬಂದೆ...."

ಆಕೆಯ ಮಾತು ಪೂರ್ತಿಯಾಗುತ್ತಿರುವಷ್ಟರಲ್ಲಿಯೇ ಮುವ್ವತ್ತು ವರ್ಷ ವಯಸ್ಸಿನ ಯುವಕನೊಬ್ಬ ವರಾಂಡಾದಲ್ಲಿ ಹೆಜ್ಜೆಯಿಟ್ಟ. ಪಂಚೆಯುಟ್ಟು

ರೀತಿ, ತಲೆಬಾಚಿದ ಪದ್ಧತಿಯನ್ನು ನೋಡಿದರೆ ಬೆಂಗಾಲಿಯವರಂತಿದ್ದ. ತೆಳ್ಳಗೆ, ಎತ್ತರವಾಗಿ ಸಾದುಗಪ್ಪು ಬಣ್ಣದಲ್ಲಿ, ನೋಡಲು ನವೀನ ಸಂಪ್ರದಾಯಕ್ಕೆ ಸೇರಿದವನಂತೆಯೇ ಇದ್ದ. ಅನಸೂಯಮ್ಮ ಹೇಳುವವರೆಗೂ ಆತನೇ ಆಕೆಯ ತಮ್ಮ ಗೋವಿಂದಬಾಬು ಎಂದು ತಿಳಿಯಲಿಲ್ಲ ಜಾನಕಿಗೆ.

ಗೋವಿಂದಬಾಬು ಎಂಬ ಹೆಸರು ಬೆಂಗಾಲಿ ಹೆಸರಿನಂತಿದ್ದರೂ ಆತ ನೋಡಲು ಸಹ ಬೆಂಗಾಲಿ ಬಾಬುವಿನಂತೆಯೇ ಇರುತ್ತಾನೆಂದು ಊಹಿಸಿರಲಿಲ್ಲ ಜಾನಕಿ. ಈತ ಅನಸೂಯಮ್ಮನಿಗೆ ಯಾವ ತರಹದ ತಮ್ಮನಾಗಿರಬಹುದು ಎಂದು ಆಲೋಚಿಸಿದಳು. ಮುವ್ವತ್ತು ತುಂಬದ ಗೋವಿಂದಬಾಬುವಿಗೂ ಅರವತ್ತು ತುಂಬದ ಅನಸೂಯಮ್ಮನಿಗೂ ಹೋಲಿಕೆಗಾಗಿ ಹುಡುಕುವುದರಲ್ಲಿ ಅರ್ಥವಿಲ್ಲವೆನಿಸಿತು. ಏನಾದರೂ ಪ್ರತ್ಯೇಕತೆಯಿದ್ದರೆ ಆಕೆಯೇ ಹೇಳುತ್ತಾರೆ ಎಂದು ಸುಮ್ಮನಾದಳು.

ಪರಸ್ಪರ ಪರಿಚಯ ಮಾಡಿದನಂತರ ಸಂಭಾಷಣೆ ಮುಖ್ಯ ವಿಷಯದ ಕಡೆ ಹರಿಯಿತು.

"ಜಾನಕಿ ತುಂಬಾ ಒಳ್ಳೇ ಹುಡುಗಿ ಕಣೋ, ಗೋವಿಂದು. ನಾನು ಹಾಸಿಗೆ ಹಿಡಿದ ಈ ವರ್ಷವೆಲ್ಲಾ ತಾನೇ ಎಷ್ಟೋ ಜಾಣ್ಮೆಯಿಂದ ಎಲ್ಲಾ ನೋಡಿಕೋತಿದಾಳೆ ನನ್ನ ಆರೋಗ್ಯ ನೋಡಿದರೆ ಇನ್ನು ನಾನು ಮೊದಲಿನಂತೆ ಎದ್ದು ಓಡಾಡೋದು ಸುಳ್ಳು ಅನ್ನಿಸ್ತಾ ಇದೆ. ಅದಕ್ಕೇ ನಿನಗೆ ಕಾಗದ ಬರೆದೆ. ಜಾನಕಿಗೆ ಸ್ವಲ್ಪ ಕೆಲಸದ ಭಾರಾನೂ ಕಡಿಮೆಯಾಗುತ್ತೆ. ನೀನು ಬಾಲ ವಿಹಾರವನ್ನು ನೋಡಿದಂತೆಯೂ ಆಗುತ್ತದೆ. ಅದಕ್ಕೇ ಬಾ ಅಂತ ಬರೆದೆ.... ಕೆಲವು ದಿನ ನೋಡಿ ನಿನಗೆ ಇಷ್ಟವಾದರೆ ಇಲ್ಲಿಯೇ ಇರಬಹುದು. ನಮಗೆ ಡಾಕ್ಟರ ಆವಶ್ಯಕತೆ ಸದಾ ಇದ್ದೇ ಇರುತ್ತೆ. ಇಷ್ಟು ಜನ ಮಕ್ಕಳಲ್ಲಿ ಯಾವಾಗಲೂ ಯಾರಿಗೋ ಒಬ್ಬರಿಗೆ ಶೀತ, ಉಷ್ಣ ಇದ್ದೇ ಇರುತ್ತೆ, ನೀನಾದರೆ ಬರೀ ವೈದ್ಯನಂತಲ್ಲದೆ ಮಿಕ್ಕ ವಿಷಯಗಳನ್ನೂ ನೋಡಿಕೊಳ್ಳಬಹುದು" ಎಂದರು ಅನಸೂಯಮ್ಮ.

"ಸರಿ, ಆ ವಿಷಯಗಳನ್ನೆಲ್ಲಾ ನಿಧಾನವಾಗಿ ಮಾತನಾಡಿಕೊಳ್ಳೋಣ ಅಕ್ಕಾ. ಮೊದಲು ನನಗೆ ನೀವು ಮಾಡುತ್ತಿರುವ ಕೆಲಸ ಹಿಡಿಸಬೇಕು. ಅನಂತರ ಡಿಸ್ಪೆನ್ಸರಿ ಮುಚ್ಚಿಕೊಂಡು ಬರಬೇಕು. ಒಂದೆರಡು ತಿಂಗಳಾದರೆ ಅಪ್ಪ ನೋಡಿಕೊಳ್ಳುತ್ತಾರೆ. ಸದಾ ಅಂದರೆ ಅವರಿಗೂ ಕಷ್ಟವೇ. ಅವರಿಗೂ ನಿನ್ನ ವಯಸ್ಸೇ ಅಲ್ಲವೇ?"

"ಸರಿ ನಿನಗಿಷ್ಟ ಬಂದ ಹಾಗೆ ಮಾಡು ಅಂದೆನಲ್ಲಾ. ಜಾನಕಿ, ನಾಳೆ

ಗೋವಿಂದಬಾಬೂಗೆ ನಮ್ಮ ಹಾಸ್ಟೆಲ್, ಕ್ಲಾಸ್‌ರೂಮ್ ಎಲ್ಲಾ ತೋರಿಸು. ಜಮಾ-ಖರ್ಚುಗಳನ್ನೂ ತೋರಿಸು. ಒಂದೆರಡು ತಿಂಗಳು ಇರುತ್ತಾನಾದ್ದ ರಿಂದ ಎಲ್ಲಾ ವಿಷಯಗಳನ್ನು ತಿಳಿದುಕೊಳ್ಳುತ್ತಾನೆ. ನಿನಗೂ ಸ್ವಲ್ಪ ಕೆಲಸ ಕಡಿಮೆಯಾಗುತ್ತೆ....ನನಗೆ ಸ್ವಲ್ಪ ಹುಷಾರಾಗಿದ್ದರೆ ನಾನೇ ಬರುತ್ತೇನಿ. ಇಲ್ಲ ದಿದ್ದರೆ ನೀನೇ ಎಲ್ಲರಿಗೂ ಪರಿಚಯ ಮಾಡು. ನನ್ನ ಸ್ಥಾನದಲ್ಲಿ ಈತ ನಿಂತು ಕೆಲಸ ಮಾಡುತ್ತಾನೆಂದು ಹೇಳು."

"ಸರಿ, ನಾಳೆ ಬೆಳಗ್ಗೆ ಇಲ್ಲಿಗೆ ಬಂದು ಗೋವಿಂದಬಾಬು ಅವರನ್ನು ಕರೆದುಕೊಂಡುಹೋಗುತ್ತೀನಿ."

"ನೀನಿನ್ನು ಹೊರಡಮ್ಮ ಕತ್ತಲಾಗುತ್ತಿದೆ" ಎಂದರು ಅನಸೂಯಮ್ಮ.

ಗೋವಿಂದಬಾಬುವಿನೊಂದಿಗೆ ಮಾತನಾಡಿದ ನಂತರ ಆತ ಬೆಂಗಾಲಿ ಹೌದೋ ಅಲ್ಲವೋ ಎಂಬ ಸಂಶಯ ಪರಿಹಾರವಾಯಿತು ಜಾನಕಿಗೆ. ಅವರ ತಾತಮುತ್ತಾತಂದಿರ ಕಾಲದಲ್ಲಿಯೇ ಇವರು ಉದ್ಯೋಗರೀತ್ಯಾ ಕಲಕತ್ತಾಗೆ ಹೊರಟುಹೋಗಿದ್ದರಂತೆ. ಗೋವಿಂದಬಾಬು ಹುಟ್ಟಿದ್ದು, ವಿದ್ಯಾಭ್ಯಾಸ, ಎಲ್ಲಾ ಕಲಕತ್ತಾದಲ್ಲೇನಂತೆ. ಆತನ ತಾತನ ಹೆಸರು ಗೋವಿಂದಯ್ಯ. ಮೊಮ್ಮಗನಿಗೆ ತಾತನ ಹೆಸರಿಟ್ಟರೂ ಬೆಂಗಾಲ್‌ನಲ್ಲಿ ಬೆಳೆದದ್ದರಿಂದಾಗಿ ಗೋವಿಂದ ಬಾಬುವಾಗಿ ಬೆಳೆದಿದ್ದ. ಇವರಿವರಿಗೆ ದೂರದ ಸಂಬಂಧವಿದ್ದರೂ ಅದಕ್ಕಿಂತ ಹೆಚ್ಚಾಗಿ ಅನುಸೂಯಮ್ಮನವರ ಗಂಡ ಮತ್ತು ಗೋವಿಂದ ಬಾಬು ವಿನ ತಂದೆ ಒಳ್ಳೆಯ ಸ್ನೇಹಿತರಾಗಿದ್ದರು. ಹೀಗಾಗಿ ಆ ಎರಡು ಕುಟುಂಬಗಳ ಮಧ್ಯೆ ಬಂಧುತ್ವಕ್ಕಿಂತ ಹೆಚ್ಚಾದ ಸ್ನೇಹ ಬಾಂಧವ್ಯ ಹೆಣೆದುಕೊಂಡಿತ್ತು.

ಗೋವಿಂದ ಬಾಬುವಿಗೆ ಬಾಲವಿಹಾರದಂತಹ ಸೇವಾಸಂಸ್ಥೆಗಳೆಂದರೆ ಆದರಾಭಿಮಾನಗಳಿದ್ದುವು. ಡಾಕ್ಟರಾದನಂತರ ಕಲಕತ್ತೆಯ ಹತ್ತಿರದ ಹಳ್ಳಿಯೊಂದರಲ್ಲಿ ಡಿಸ್ಪೆನ್ಸರಿ ಇಟ್ಟು ದರಿದ್ರರಿಗೂ ಅನಾಥರಿಗೂ ಔಷಧಿ ಕೊಡುತ್ತಾ ಸುತ್ತಮುತ್ತಲ ಗ್ರಾಮಗಳಲ್ಲಿ ಸಂಚಾರೀಆಸ್ಪತ್ರೆಗಳನ್ನು ನಡೆಸು ತ್ತಿದ್ದ. ತಂದೆತಾತಂದಿರು ತಾನು ಹಣ ಸಂಪಾದಿಸಬೇಕಾದ ಆವಶ್ಯಕತೆಯಿಲ್ಲ ದಂತೆ ಮಾಡಿದ್ದರಿಂದ ಗೋವಿಂದಬಾಬು ತನ್ನ ಆದರ್ಶಗಳನ್ನು ನೆರವೇರಿಸಿ ಕೊಳ್ಳುವ ಪ್ರಯತ್ನದಲ್ಲಿದ್ದ.

ತನ್ನ ಉದ್ದೇಶಗಳಿಗೆ ಹತ್ತಿರವಾಗಿದ್ದ ಬಾಲವಿಹಾರವನ್ನು ಅನ ಸೂಯಮ್ಮ ಹೇಗೆ ನಡೆಸುತ್ತಿದ್ದಾರೋ ನೋಡಿ ಬರಬೇಕೆಂಬ ಆಲೋಚನೆ ಯಲ್ಲಿರುವಾಗಲೇ ಅನಸೂಯಮ್ಮನವರಿಂದ ಕಾಗದ ಬಂದಿತ್ತು. ಕೂಡಲೇ ಹೊರಟುಬಂದಿದ್ದ.

ಜಾನಕಿ ಆತನಿಗೆ ಬಾಲವಿಹಾರದ ಎಲ್ಲಾ ಭಾಗಗಳನ್ನೂ ತೋರಿಸಿದ್ದಳು. ಅಲ್ಲಿ ಕೆಲಸ ಮಾಡುತ್ತಿದ್ದವರಿಗೂ ಮಕ್ಕಳಿಗೂ ಆತನನ್ನು ಪರಿಚಯ ಮಾಡಿಸಿದಳು. ಇವರು ಹೋದಾಗ ಅಲ್ಲಿ ಪ್ರಾರ್ಥನೆ ನಡೆಯುತ್ತಿತ್ತು. ಚಿಕ್ಕ ಪುಟ್ಟ ಮಕ್ಕಳೆಲ್ಲ ತಮ್ಮ ಹೂವಿನಂತಹ ಕೈಗಳನ್ನು ಜೋಡಿಸಿ, ಉಪಾಧ್ಯಾಯಿನಿಯ ಮುಖದ ಮೇಲೆ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿ ನಿಂತಿದ್ದರು. ಸ್ವಲ್ಪ ಬೆಳೆದ ಹುಡುಗರು, ಹಾಡನ್ನು ಕಲಿತವರು, ಮಾತು ಬಂದವರು, ಉಪಾಧ್ಯಾಯಿನಿಯೊಂದಿಗೆ ತಾವೂ ಹಾಡುತ್ತಿದ್ದರು.

"ತಂದೆ ನೀನೆ, ತಾಯಿ ನೀನೆ,
ಬಂಧು ಬಳಗವೆಲ್ಲ ನೀನೆ."

ಆ ಎಳೆಯ ಹುಡುಗರ ಬಾಯಿಂದ ಈ ಮಾತು ಬಂದಾಗಲೆಲ್ಲಾ ಜಾನಕಿಯ ಕಣ್ಣಿನಲ್ಲಿ ನೀರು ಬರುತ್ತಿತ್ತು. ಆ ಮಕ್ಕಳಿಗೆ ತಾವು ಹಾಡುತ್ತಿದ್ದ ವಾಕ್ಯಗಳ ಅರ್ಥ ತಿಳಿಯದು. ತಾವು ಊರುಗೋಲಾಗಿ ನಂಬುತ್ತಿದ್ದ ಭಗವಂತನನ್ನು ಕುರಿತೂ ಅವರರಿಯರು. ಅವರಿಗೆ ತಿಳಿದದ್ದೆಲ್ಲಾ ಉಪಾಧ್ಯಾಯಿನಿಯ ಮೆಚ್ಚುಗೆ. 'ಶಭಾಷ್ ಮಗೂ ಚೆನ್ನಾಗಿ ಹಾಡಿದೆ' ಎಂದೋ 'ನೋಡು ಆ ಮಗು ಎಷ್ಟು ಭಕ್ತಿಯಿಂದ ಕಣ್ಣುಮುಚ್ಚಿ ಪ್ರಾರ್ಥನೆ ಮಾಡುತ್ತಿದೆಯೋ' ಎಂದೋ ಅಂದರೆ ಅಷ್ಟೇ ಸಾಕು.

ತಿಳಿದು ಪ್ರಾರ್ಥಿಸಿದರೂ ತಿಳಿಯದೆ ಪ್ರಾರ್ಥಿಸಿದರೂ ಭಗವಂತ ಆ ಅನಾಥಮಕ್ಕಳಿಗೆ ತಂದೆ–ತಾಯಿ ಎಲ್ಲವೂ ತಾನಾಗಿ ಕಾಪಾಡಲೆಂದು ಮನಸ್ಸಿನಲ್ಲಿಯೇ ಪ್ರಾರ್ಥಿಸುತ್ತಿದ್ದಳು ಜಾನಕಿ.

ಪ್ರಾರ್ಥನೆ ಮುಗಿದಕೂಡಲೇ ಮಕ್ಕಳೆಲ್ಲ ಜಾನಕಿಯನ್ನು ಸುತ್ತಗಟ್ಟಿ,

"ಅಕ್ಕಾ, ಅಕ್ಕಾ ಅಮ್ಮ ಬರಲಿಲ್ಲವಾ?" ಎಂದ ಕೇಳಿದರು.

"ಅಮ್ಮನ್ನ ನೋಡಬೇಕು ನಾವು."

"ಅಮ್ಮ ನಿನ್ನೇನು ಬರಲಿಲ್ಲ" ಎಂದು ಗಲಾಟೆ ಮಾಡತೊಡಗಿದರು.

"ಈವತ್ತು ಸಾಯಂಕಾಲ ಅಮ್ಮ ತಪ್ಪದೆ ಬರ್ತಾರೆ. ನಿನ್ನೆ ನೀವು ಕಾಗದದಲ್ಲಿ ತಯಾರು ಮಾಡಿದ ಹಡಗು, ಗಿರುಗಿಟ್ಲೆ ಎಲ್ಲಾ ಭದ್ರವಾಗಿಟ್ಟದೀರಿ ತಾನೆ? ಅಮ್ಮ ಬಂದಾಗ ತೋರಿಸೋಣವಂತೆ."

"ಅಕ್ಕಾ, ಅಕ್ಕಾ, ನಮ್ಮ ಟೀಚರ್ ಏರೋಪ್ಲೇನು ಮಾಡೋದನ್ನ ಹೇಳಿಕೊಟ್ಟಿದ್ದಾರೆ. ಎಷ್ಟು ಚೆನ್ನಾಗಿ ಮಾಡಿದೀನೀಂತ ನಾನು, ತೋರಿಸಲಾ?"

"ಆಮೇಲೆ ತೋರಿಸುವಿಯಂತೆ. ಈಗನೋಡಿ, ನಿಮಗೋಸ್ಕರ ಯಾರನ್ನ ಕರಕೊಂಡು ಬಂದಿದೀನೀಂತ...."

"ಯಾರಕ್ಕಾ ಇವರು?"

"ನಮಗೇನು ಹೇಳಿಕೊಡ್ತಾರೆ?"

"ಒಳ್ಳೊಳ್ಳೆ ಕತೆ ಬರತ್ತಾ?"

"ಇವರನ್ನ ಏನಂತ ಕರೀಬೇಕು ನಾವು?"

ಮಕ್ಕಳೆಲ್ಲಾ ಪ್ರಶ್ನೆಗಳ ಮಳೆ ಸುರಿಸಿದರು.

"ಇವರ ಹೆಸರು ಗೋವಿಂದಬಾಬೂಂತ. ತುಂಬಾ ಒಳ್ಳೆಯವರು. ನಿಮಗೆ ಬೇಕಾದಷ್ಟು ಕತೆ ಹೇಳ್ತಾರೆ. ಬೇಕಾದಷ್ಟು ಹೊಸಹೊಸ ಆಟ ಕೂಡಾ ಬರತ್ತೆ ಇವರಿಗೆ. ಗಲಾಟೆ ಮಾಡದೆ ಕೇಳಿದರೆ ಎಲ್ಲಾ ಹೇಳಿಕೊಡುತ್ತಾರೆ ನಿಮಗೆ. ಅಲ್ಲವೇ ಗೋವಿಂದಬಾಬೂ" ಎಂದಳು ಜಾನಕಿ ಆತನ ಕಡೆ ತಿರುಗಿ.

ಮಕ್ಕಳಿಗೆ ಆ ಹೆಸರು ರುಚಿಸಿದಂತೆ ಕಾಣಲಿಲ್ಲ. ಅವರಲ್ಲಿ ಚಿಕ್ಕಮಕ್ಕಳು ತಾವು ಆ ಹೆಸರನ್ನು ಉಚ್ಚರಿಸಬಲ್ಲೆವೋ ಇಲ್ಲವೋ ಎಂದು ಗುಣಗುಣಿಸ ತೊಡಗಿದರು. ಎಲ್ಲರೂ ತಮ್ಮಲ್ಲಿ ತಾವು ಅಂದುಕೊಳ್ಳುತ್ತಿದ್ದರೂ ಎಲ್ಲರ ಕಂಠ ಗಳೂ ಸೇರಿ ಅದೊಂದು ಗುಜುಗುಂಪಲಾಗಿ ಕೇಳಿಸುತ್ತಿತ್ತು.

"ಹುಷ್, ಸದ್ದು" ಎಂದರು ಉಪಾಧ್ಯಾಯಿನಿ. ಸದ್ದಡಗಿತು.

ಆದರೂ ಮಕ್ಕಳ ಮನಸಿನಲ್ಲಿ ಈ ಹೊಸ ವ್ಯಕ್ತಿಯನ್ನು ತಾವು ಏನೆಂದು ಕರೆಯಬೇಕೆಂಬ ಸಂದೇಹ ಹಾಗೆಯೇ ಉಳಿದಿತ್ತು. ಪ್ರಶ್ನಾರ್ಥಕ ದೃಷ್ಟಿಯಿಂದ ಜಾನಕಿ–ಗೋವಿಂದಬಾಬು ಅವರನ್ನು ನೋಡತೊಡಗಿದರು.

"ಎಲ್ಲರೂ ನಮಸ್ಕಾರ ಹೇಳಿ. ಹುಂ. ನಡೆಯಿರಿ ಇನ್ನು, ಪಾಠಕ್ಕೆ ಹೊತ್ತಾಯಿತು" ಎಂದು ಉಪಾಧ್ಯಾಯಿನಿ ಆವಸರಪಡಿಸಿದರು.

ಮಕ್ಕಳು ಎರಡೂ ಕೈಜೋಡಿಸಿ, "ನಮಸ್ಕಾರ" ಎಂದು ಸುಮ್ಮ ನಾದರು.

"ನನ್ನನ್ನು 'ಅಣ್ಣಾ' ಎಂದು ಕರೆಯಿರಿ, ಸರಿತಾನೇ?" ಎಂದರು ಗೋವಿಂದಬಾಬು.

"ನಮಸ್ಕಾರ ಅಣ್ಣಾ, ನಮಸ್ಕಾರ ಅಣ್ಣಾ" ಎಂದು ಗಟ್ಟಿಯಾಗಿ ಕೂಗುತ್ತಾ ಮಕ್ಕಳು ಅಲ್ಲಿಂದ ಹೊರಟುಹೋದರು.

"ನಡೆಯಿರಿ, ಆಫೀಸ್ ನೋಡುವಿರಂತೆ" ಎಂದು ಆ ಕಡೆ ಹೆಜ್ಜೆ ಹಾಕಿ ದಳು ಜಾನಕಿ. ಸ್ವಲ್ಪ ಹೊತ್ತು ಅಲ್ಲಿನ ಕಾಗದಪತ್ರಗಳನ್ನು ತಿರುವಿಹಾಕಿದ ಗೋವಿಂದಬಾಬು ಹೇಳಿದರು:

"ನಿಮ್ಮ ಬಾಲವಿಹಾರ ಬಹಳ ಚೆನ್ನಾಗಿದೆ, ಜಾನಕಿ. ಆಶಯಗಳೂ ಸುಂದರವಾಗಿಯೇ ಇವೆ. ಅವು ಆಚರಣೆಯಲ್ಲಿ ಎಷ್ಟರಮಟ್ಟಿಗೆ ಸಂತೃಪ್ತಿಕರ

ವಾಗಿದೆಯೆಂಬುದನ್ನು ಮಾತ್ರ ಸ್ವಲ್ಪ ದಿನ ಇದ್ದು ನೋಡಿದ ಹೊರತು ತಿಳಿದು ಕೊಳ್ಳುವುದು ಕಷ್ಟ. ಅಲ್ಪಸ್ವಲ್ಪ ಲೋಪಗಳಿದ್ದರೂ ಅನಸೂಯಕ್ಕ ಮಾಡಿದ ಈ ಕೆಲಸ ನನಗೆ ತುಂಬಾ ಹಿಡಿಸಿತು. ತನಗೆ ಮಕ್ಕಳಿಲ್ಲವೆಂದು ಬೇರೆ ಮಕ್ಕಳನ್ನು ನೋಡಿ ಹೊಟ್ಟೆಕಿಚ್ಚು ಪಡುವುದಕ್ಕಿಂತ ಬೇರೆಯವರ ಮಕ್ಕಳಲ್ಲಿ ತನ್ನ ಮಕ್ಕಳನ್ನು ಕಂಡುಕೊಳ್ಳುತ್ತಾ ಆನಂದಿಸುತ್ತಿದ್ದಾಳೆ.

"ಅಕ್ಕನ ಕೊನೆಯ ಮಗು ತೀರಿಕೊಂಡಾಗ, ಅಕ್ಕ ಮತ್ತೆ ಎಂದಿನ ಮನುಷ್ಯಳಾಗುತ್ತಾಳೇಂತ ಯಾರೂ ನಂಬಿರಲಿಲ್ಲವಂತೆ—ನಮ್ಮ ತಂದೆ ಹೇಳು ತ್ತಿರುತ್ತಾರೆ. ಅನಸೂಯಕ್ಕನ ಗಂಡ ಈಕೆಯನ್ನು ಈತರಹದ ಸತ್ಕಾರ್ಯದ ಕಡೆ ತಿರುಗಿಸಲು ಎಷ್ಟೋ ಕಷ್ಟಪಟ್ಟರಂತೆ. ಭಗವಂತ ಎಲ್ಲಾ ಒಳ್ಳೇದಕ್ಕೇ ಮಾಡ್ತಾನೆ ಅನ್ನಿಸುತ್ತೆ ನನಗೆ. ಅನಸೂಯಕ್ಕ ತನ್ನ ಹಣವನ್ನು ತನ್ನ ಐದು ಜನ ಮಕ್ಕಳಿಗೆ ಮಾತ್ರವೇ ಉಪಯೋಗಿಸದೆ ಇಷ್ಟು ಜನ ಮಕ್ಕಳ ಬದುಕನ್ನು ದಾರಿಗೆ ಹಚ್ಚುತ್ತಿದ್ದಾಳೆ" ಎಂದ ಆತ.

* * *

ಗೋವಿಂದ ಬಾಬು ಬಂದನಂತರ ಬಾಲವಿಹಾರದಲ್ಲಿ ಎಷ್ಟೋ ಬದಲಾ ವಣೆಗಳುಂಟಾದುವು. ಅನಸೂಯಮ್ಮನ ಅನಾರೋಗ್ಯದಿಂದಾಗಿ ಹಿಂದೆಬಿದ್ದ ಸ್ಟಾಫ್ ಕ್ವಾರ್ಟರ್ಸ್‌ನ ಕೆಲಸ ಮತ್ತೆ ಪ್ರಾರಂಭವಾಗಿತ್ತು. ಆ ಕೆಲಸ ಪೂರ್ತಿ ಯಾದರೆ ಬಾಲವಿಹಾರದಲ್ಲಿ ಕೆಲಸ ಮಾಡುತ್ತಿದ್ದವರಿಗೆಲ್ಲಾ ವಸತಿ ಸೌಕರ್ಯ ವುಂಟಾಗುತ್ತಿತ್ತು. ಎಲ್ಲೋ ದೂರದಲ್ಲಿದ್ದು ಕೊಂಡು, ಬಂದುಹೋಗುವುದಕ್ಕಿಂತ ಸ್ಟಾಫ್ ಎಲ್ಲಾ ಮಕ್ಕಳಿಗೆ ಹತ್ತಿರದಲ್ಲಿಯೇ ಇದ್ದರೆ ಅವರ ಒಳಿತು–ಕೆಡುಕು ಗಳನ್ನು ನೋಡಿಕೊಳ್ಳುವುದಕ್ಕೂ ಅವರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳು ವುದಕ್ಕೂ ಈಗ ಇರುವುದಕ್ಕಿಂತ ಹೆಚ್ಚು ಅವಕಾಶ ಇರುತ್ತದೆಯೆಂಬ ಅಭಿ ಪ್ರಾಯದಿಂದ ಆ ಕೆಲಸ ಪ್ರಾರಂಭಿಸಲ್ಪಟ್ಟಿತ್ತು. ಮೂರು ನಾಲ್ಕು ತಿಂಗಳು ಸರಿಯಾಗಿ ಕೆಲಸ ಮಾಡಿದರೆ ಕಟ್ಟಡ ಪೂರ್ತಿಯಾಗುವಂತಿತ್ತು.

ಮಕ್ಕಳ ಆಟದ ಸ್ಥಳವನ್ನು ವಿಶಾಲಗೊಳಿಸಿ ಮತ್ತೂ ಹೊಸಹೊಸ ಆಟಗಳನ್ನು ಪರಿಚಯ ಮಾಡಿಸಿದ ಗೋವಿಂದ ಬಾಬು. ಆತ ಚಿಕ್ಕಂದಿನಲ್ಲಿ ಒಳ್ಳೆಯ ಆಟಗಾರ. ಈಗಲೂ ಮಕ್ಕಳೊಂದಿಗೆ ಮಗುವಾಗಿ ತಾನೂ ಆಡುತ್ತಾ, ಕುಣಿಯುತ್ತಿದ್ದರೆ ಮನುಷ್ಯ ಎಂತಹ ವಯಸಿನಲ್ಲಿಯೂ ಬಾಲ್ಯಚಾಪಲ್ಯವನ್ನು ಬಿಡಲಾರ ಅನ್ನಿಸುತ್ತಿತ್ತು, ಜಾನಕಿಗೆ.

ಇಂತಹ ಸೇವಾಸಂಸ್ಥೆಗಳು ಮತ್ತಷ್ಟು ಯಶಸ್ವಿಯಾಗಿ ನಡೆಯಬೇಕಾದರೆ

ಈಗ ರೂಢಿಯಲ್ಲಿರುವ ಪದ್ಧತಿಗಳಲ್ಲಿ ಕೆಲವು ಬದಲಾವಣೆಗಳುಂಟಾಗಬೇಕೆಂದೂ ಆಗಲೇ ಅದು ಸತ್ಫಲಿತವನ್ನು ಕೊಡುತ್ತದೆಯೆಂದೂ ಗೋವಿಂದ ಬಾಬು ದೃಢ ವಾಗಿ ನಂಬಿದ್ದ. ಅರೆಬಿರಿದ ಮೊಗ್ಗುಗಳಂತಿದ್ದ ಬಾಲವಿಹಾರದ ಮಕ್ಕಳು ಆತನ ಆಶಯಗಳಿಗೆ ಜೀವ ತುಂಬಿದ್ದರು. ಬೇಕಾದ ವಾತಾವರಣ, ಹಣ, ಅಧಿಕಾರ ಕೈಗೆ ಬಂದ ಕೂಡಲೇ ಗೋವಿಂದ ಬಾಬು ತನ್ನ ಆಲೋಚನೆಗಳನ್ನು ಕಾರ್ಯ ರೂಪಕ್ಕೆ ತರಲು ನಿಶ್ಚಯಿಸಿಕೊಂಡ.

ಅನಸೂಯಮ್ಮ ಬಾಲವಿಹಾರದ ಅಭಿವೃದ್ಧಿಗೆ ತನ್ನ ಸಹಾಯ, ಅಂಗೀಕಾರ, ಸಂಪೂರ್ಣ ಸಹಕಾರ ಲಭಿಸುತ್ತದೆಯೆಂಬ ಭರವಸೆಯನ್ನಿತ್ತಿದ್ದರು. ತನ್ನ ಅನಾರೋಗ್ಯದ ಸಮಯದಲ್ಲಿ ಆತ ಬಂದು ಬಾಧ್ಯತೆಯನ್ನು ವಹಿಸಿ ಕೊಂಡದ್ದು ಬಾಲವಿಹಾರದ ಮಕ್ಕಳ ಅದೃಷ್ಟವೆಂದು ಸಂತೋಷಿಸಿದರಾಕೆ.

ಎಲ್ಲರ ಆಲೋಚನೆಗಳೂ ಒಂದೇ ವಿಧವಾಗಿರುವುದಿಲ್ಲವಲ್ಲ!— ಅನಸೂಯಮ್ಮನ ಅನಾರೋಗ್ಯ ಪರಿಸ್ಥಿತಿಯನ್ನು ನೆಪಮಾಡಿಕೊಂಡು ಆಕೆಯ ನಂತರ ಆಸ್ತಿಯನ್ನೆಲ್ಲಾ ತನ್ನದಾಗಿಸಿಕೊಳ್ಳುವ ಉದ್ದೇಶದಿಂದ ಗೋವಿಂದ ಬಾಬು ಈ ಸೋಗು ಹಾಕುತ್ತಿದ್ದಾನೆಂದು ಕೆಲವರು ಅಭಿಪ್ರಾಯಪಟ್ಟರು.

"ನೋಡುತ್ತಾ ಇರಿ. ಇವನ ಕೈಗೆ ಅಧಿಕಾರ ಬಂದಕೂಡಲೇ ಹುಡುಗ ರನ್ನೆಲ್ಲಾ ಓಡಿಸಿ ಬಾಲವಿಹಾರಕ್ಕೆ ಬೀಗ ಹಾಕ್ತಾನೆ. ಪಾಪ! ಆ ಮಕ್ಕಳ ಗತಿಯೇನಾಗುತ್ತೋ ಕಾಣೆ" ಎಂದು, ಎಂದೋ ಏನೋ ನಡೆಯುತ್ತದೆಂದು ಊಹಿಸಿ, ಮಕ್ಕಳಮೇಲೆ ಇಲ್ಲದ ಕನಿಕರ ತೋರಿಸುತ್ತಿದ್ದರು, ಕೆಲವರು ದಯಾಮಯರು.

"ಈ ಅನಸೂಯಮ್ಮನಿಗೆ ಒಂದಿಷ್ಟು ತಿಳುವಳಿಕೆ ಇದೆ ಅಂತಿದ್ದೆನಲ್ಲಾ, ಈ ಆಷಾಡಭೂತೀನ ಹೇಗೆ ನಂಬಿದಳೂಂತ. ನಮ್ಮಂತಹ ನಾಲ್ಕು ಜನರನ್ನ ಟ್ರಸ್ಟಿಗಳನ್ನಾಗಿ ಮಾಡಿದ್ದರೆ ಆಗುತ್ತಿರಲಿಲ್ಲವೇ?" ಎಂದರು ಕೆಲವರು.

ಯಾರು ಏನಂದುಕೊಂಡರೂ ಗೋವಿಂದಬಾಬು ಲಕ್ಷ್ಯಮಾಡದೆ ಮತ್ತೂ ಕೆಲವುದಿನ ಅಲ್ಲಿರಬೇಕೆಂದು ನಿಶ್ಚಯಿಸಿಕೊಂಡ. "ನಾನು ಹಿಂತಿರುಗು ವವರೆಗೂ ನೀವು ಬೇರೆ ಯಾರನ್ನಾದರೂ ಸಹಾಯಕ್ಕೆ ಇರಿಸಿಕೊಂಡು ಡಿಸ್ಪೆನ್ಸರಿ ನಡೆಸಿ. ನನಗೋಸ್ಕರ ಈ ಶ್ರಮ ವಹಿಸಬೇಕಾಗಿ ಪ್ರಾರ್ಥಿಸುತ್ತೇನೆ" ಎಂದು ತಂದೆಗೆ ಕಾಗದ ಬರೆದ.

ಗೋವಿಂದಬಾಬು ಬರುವುದಕ್ಕೆ ಮುಂಚೆ ಇಲ್ಲಿನ ಕೆಲಸ ಮುಗಿಸಿ ಕೊಂಡು ಎಂದಿಗೆ ಮನೆ ಸೇರುತ್ತೇನೋ ಎನಿಸುತ್ತಿತ್ತು ಜಾನಕಿಗೆ. ಈ ಮಕ್ಕಳ ಮೇಲೆ ತಾನು ತೋರಿಸುತ್ತಿರುವ ಅಭಿಮಾನವೆಲ್ಲಾ ತಾನು ನಿಜವಾಗಿ

ಪ್ರೀತಿಸುತ್ತಿರುವ ಕೆಲವರ ಪುರೋಗತಿಗಾಗಿ ಎಂಬ ವಿಷಯ ಸದಾ ನೆನೆಸಿನಲ್ಲಿರುತ್ತಿತ್ತು ಅವಳಿಗೆ. ಈ ಕೆಲಸ ಬಿಟ್ಟ ಕ್ಷಣದಿಂದ ತನಗೂ, ಈ ಮಕ್ಕಳಿಗೂ ಏನೂ ಸಂಬಂಧವಿರುವುದಿಲ್ಲ. ಹಾಗೆ ಕಡಿದುಕೊಳ್ಳಲಾರದ ಅಭಿಮಾನ ಇನ್ನೊಂದು ಕಡೆ ಇದೆಯೆಂಬ ಆಲೋಚನೆ ಅವಳನ್ನು ಮನೆಯ ಕಡೆ ಆಕರ್ಷಿಸುತ್ತಿತ್ತು.

ಈ ನಡುವೆ ಅವಳ ಆಲೋಚನೆಗಳ ರೀತಿಯೇ ಬದಲಾಗಿತ್ತು. ಗೋವಿಂದ ಬಾಬುವಿನೊಂದಿಗೆ ಪರಿಚಯವಾದನಂತರ ಅವಳ ಆಲೋಚನೆಗಳಲ್ಲೂ, ಕೆಲಸ ಕಾರ್ಯಗಳಲ್ಲೂ, ಒಳಿತು-ಕೆಡುಕುಗಳನ್ನು ಕುರಿತು ಕ್ಷಣ ಕ್ಷಣಕ್ಕೂ ಆಲೋಚಿಸುವ ಅಭ್ಯಾಸ ಏರ್ಪಟ್ಟಿತ್ತು. ಈ ಆತ್ಮಪರಿಶೋಧನೆಗೆ ತಕ್ಕಷ್ಟು ಅವಕಾಶವಿರುತ್ತಿತ್ತು—ಅವರ ಸಂಭಾಷಣೆಯಲ್ಲಿ.

"ನಾವು ಈ ಮಕ್ಕಳನ್ನು ಇಷ್ಟೊಂದು ಪ್ರೀತಿಸುತ್ತಿದ್ದೇವಲ್ಲಾ, ಅವರಿಗೋಸ್ಕರ ಹಣ ಖರ್ಚು ಮಾಡುತ್ತಿದೇವಲ್ಲಾ, ಅವರೂ ನಮ್ಮನ್ನು ಪ್ರೀತಿ ಅಭಿಮಾನಗಳಿಂದ ನೋಡುತ್ತಿದ್ದಾರೆಂದೇ ಅನ್ನಿಸುತ್ತದೆ. ಆದರೆ ಆ ಅಭಿಮಾನ ಸಹಜವಾಗಿ ಅವರ ಮನಸಿನಲ್ಲಿ ಹುಟ್ಟಿದ್ದಲ್ಲವೇನೋ ಎಂಬ ಅನುಮಾನ ಬರುತ್ತದೆ. ಅವರಿಗೆ ನಮ್ಮ ಮೇಲೆ ಕೃತಜ್ಞತೆಯ ಹೊರತು ಮತ್ತೇನೂ ಇಲ್ಲವೇನೋ ಅನ್ನಿಸುತ್ತದೆ. ಅದೇ ನಮ್ಮ ಮನೆಯಲ್ಲಿನ ಮಕ್ಕಳಾದರೆ...."

"ಹಾಗನ್ನಬೇಡಿ ಜಾನಕಿ. ಅವರಮೇಲೆ ನಾವು ದಯೆ, ಸಹಾನುಭೂತಿಗಳನ್ನು ತೋರಿಸಿ ಪ್ರೀತಿಸುತ್ತಿದೀವಿ ಅಂದುಕೊಳ್ಳುತ್ತಿದೀವಿ. ಅದಕ್ಕೆ ಪ್ರತಿಫಲವಾಗಿ ಆಪ್ಯಾಯತೆಯನ್ನು ಅಪೇಕ್ಷಿಸುತ್ತಿದ್ದೇವೆ. ಇದು ಅನ್ಯಾಯವಲ್ಲವೇ? ಸಹಾನುಭೂತಿಗೆ ಪ್ರತಿಫಲ ಕೃತಜ್ಞತೆ. ಪ್ರೀತಿಗೆ ಪ್ರತಿಫಲ ಆಪ್ಯಾಯತೆ. ನಿಮ್ಮ ಮನೆಯಲ್ಲಿ ನಿಮ್ಮ ಒಡಹುಟ್ಟಿದವರು ಹಟಮಾಡಿ ತಮ್ಮ ಬೇಡಿಕೆಗಳನ್ನು ಪೂರೈಸಿಕೊಂಡಂತೆ ಇವರು ಮಾಡಲಾರರು. ಏಕೆನ್ನುತ್ತೀರಿ? ಆ ಹಕ್ಕು ನಿಮ್ಮ ಹತ್ತಿರ ತಮಗೆ ಇಲ್ಲವೆಂದು ಅವರ ಅಭಿಪ್ರಾಯ. ಸಹಾನುಭೂತಿಯಿಂದ ಹುಟ್ಟಿದ ಪ್ರೀತಿಯಲ್ಲಿ ಆ ಹಕ್ಕು ಅವರಿಗೆ ಇರದು. ಆದ್ದರಿಂದಲೇ ಅಂತಹವರ ಪ್ರೀತಿಯಲ್ಲಿ ಆಪ್ಯಾಯತೆ ಲೋಪಿಸಿ, ಕೃತಜ್ಞತೆ ತುಂಬಿರುತ್ತದೆ."

ಗೋವಿಂದಬಾಬು ಹೇಳಿದ್ದರಲ್ಲಿ ಸತ್ಯವಿದೆಯೆನ್ನಿಸಿತು, ಜಾನಕಿಗೆ. ಇಷ್ಟು ದಿನ ಅವಳು ಬಾಲವಿಹಾರದ ಮಕ್ಕಳನ್ನು ಹಣಕ್ಕಾಗಿಯೇ ಪ್ರೀತಿಸಿದ್ದಳು. ಅಥವಾ ತಾಯಿತಂದೆಯರಿಲ್ಲದ ಅನಾಥಮಕ್ಕಳೆಂದು ಕರುಣೆ ತೋರಿದ್ದಳು. ಆದರೆ ಎಂದೂ ಹೃದಯಪೂರ್ವಕವಾದ ಪ್ರೇಮಾಭಿಮಾನ ಅವಳ ಮನಸಿನಲ್ಲಿ

ಹುಟ್ಟಿರಲಿಲ್ಲ. ಅವರನ್ನು ನೋಡುತ್ತಿದ್ದಾಗ ಶಾಂತ, ಸಾಂಬು ಪ್ರಕಾಶರನ್ನು ನೋಡಿದಾಗ ಉಂಟಾಗುತ್ತಿದ್ದ ಅನುಭೂತಿ ಉಂಟಾಗುತ್ತಿರಲಿಲ್ಲ.

ತನ್ನಲ್ಲಿ ಇಲ್ಲದ್ದು ಅನಸೂಯಮ್ಮನಲ್ಲಿ ಇರುವುದು ಅದೇ ಎಂದು ಗ್ರಹಿಸಿದಳು ಜಾನಕಿ. ಆದ್ದರಿಂದಲೇ ಮಕ್ಕಳು ಆಕೆಯನ್ನು ಹಚ್ಚಿಕೊಳ್ಳುತ್ತಾರೆಂದೂ ತನ್ನನ್ನು ಲಕ್ಷ್ಯಮಾಡುವುದಿಲ್ಲವೆಂದೂ ಅನ್ನಿಸಿತು. ಕೆಲವು ಜಂತುಗಳಿಗೆ ಇದ್ದಂತೆಯೇ ಮಕ್ಕಳಿಗೆ ಕೂಡಾ ತಮ್ಮನ್ನು ಪ್ರೀತಿಸುವವರ ಮನಸ್ಸನ್ನು ಅರ್ಥಮಾಡಿಕೊಳ್ಳುವ ಪ್ರತ್ಯೇಕ ಜ್ಞಾನ ಇರುತ್ತದೆಯೇನೋ, ತಾನು ತನ್ನ ಪ್ರೇಮಾಭಿಮಾನಗಳನ್ನು ಮನೆಯ ಬಳಿ ಬಚ್ಚಿಟ್ಟು ಇಲ್ಲಿ ನಟಿಸಲು ಪ್ರಯತ್ನಿಸಿದರೆ ಆ ಮಕ್ಕಳು ತನ್ನ ನಟನೆಯನ್ನು ಗ್ರಹಿಸಿ ಅದಕ್ಕೆ ತಕ್ಕಂತೆ ನಡೆದುಕೊಂಡರೆಂದುಕೊಂಡಳು ಜಾನಕಿ.

ಜಾನಕಿಯ ಅಭಿಪ್ರಾಯದಲ್ಲಿ ಬಂದ ಬದಲಾವಣೆ ಮಕ್ಕಳ ಕಣ್ಣಿನಲ್ಲೂ ಕಾಣಿಸತೊಡಗಿತು. ಅವರ ಮಾತಿನಲ್ಲಿ ಪ್ರೀತಿಯ ಸೆಲೆ ಉಕ್ಕುತ್ತಿದ್ದಂತೆ ಅನ್ನಿಸತೊಡಗಿತು. ಇಷ್ಟು ದಿನ ಜಾನಕಿ ಮಕ್ಕಳ ಕಣ್ಣುಗಳಲ್ಲಿ ತನ್ನ ಪ್ರತಿಬಿಂಬವನ್ನೇ ಕಾಣುತ್ತಿದ್ದಳು. ತನ್ನ ಪ್ರೀತಿಯಲ್ಲಿ ಕಶ್ಮಲವಿದ್ದಷ್ಟು ದಿನವೂ ಮಕ್ಕಳ ಕಣ್ಣುಗಳಲ್ಲಿ ಅದೇ ಪ್ರತಿಫಲಿಸುತ್ತಿತ್ತು.

"ತೊಳೆದ ಕನ್ನಡಿಯಂತಹ ಎಳೆಯ ಮಕ್ಕಳ ಮನಸ್ಸಿನಲ್ಲಿ, ನಮ್ಮ ಕೃತ್ರಿಮ ರೂಪದ ನೆರಳನ್ನು ನೋಡಿ ಆ ಕಶ್ಮಲವನ್ನು ಅವರಿಗೆ ಆಪಾದಿಸಲು ಪ್ರಯತ್ನಿಸುತ್ತೇವೆ" ಎನ್ನುತ್ತಿದ್ದ ಗೋವಿಂದಬಾಬು.

ಆತನೊಂದಿಗೆ ಮಾತನಾಡುತ್ತಿದ್ದರೆ ಜಾನಕಿಗೆ ವೇಳೆ ಕಳೆದುದೇ ಗೊತ್ತಾಗುತ್ತಿರಲಿಲ್ಲ. ಎಷ್ಟೋ ಸಲ ವೇಳೆ ಮೀರಿ ಮನೆಗೆ ಹೋಗಿ ತಾಯಿ–ಅಣ್ಣಂದಿರ ಕೈಲಿ ಬೈಸಿಕೊಳ್ಳುತ್ತಿದ್ದಳು.

ಸಾಧಾರಣವಾಗಿ ಅನಸೂಯಮ್ಮ, ಗೋವಿಂದಬಾಬು, ಜಾನಕಿ, ಆಫೀಸಿನ ಕೆಲಸ ಮುಗಿದಮೇಲೆ ಲಾನ್‌ನಲ್ಲಿ ಕುಳಿತು ಮಾತನಾಡುತ್ತಾ ಕೆಲ ಸಮಯ ಕಳೆಯುತ್ತಿದ್ದರು. ಬಾಲವಿಹಾರವನ್ನು ಮುಖ್ಯ ವಿಷಯವನ್ನಾಗಿ ಇಟ್ಟುಕೊಂಡು ಪ್ರಾರಂಭಿಸುತ್ತಿದ್ದ ಮಾತುಕತೆ, ಅವರು ಊಹಿಸಿದಷ್ಟು ದೂರ ಬೆಳೆದ ವಿಸ್ತೃತಗೊಳ್ಳುತ್ತಿತ್ತು. ಸಂಕುಚಿತವಾದ ಮಾನವ ಸ್ವಭಾವವನ್ನು ಶುಭ್ರಗೊಳಿಸುತ್ತಾ ಹೋದರೆ ಕೊನೆಗೆ ತಾನು ಎಂಬ ಪದಾರ್ಥವೇ ಇಲ್ಲದಂತಾಗುತ್ತದೆಯೆನ್ನಿಸುತ್ತಿತ್ತು ಜಾನಕಿಗೆ.

ಗೋವಿಂದಬಾಬು ಬಂದ ಹೊಸದರಲ್ಲಿ ಆತನ ಮಾತುಕತೆ, ವ್ಯವಹಾರಗಳಮೇಲೆ ಅನಸೂಯಮ್ಮ ಒಂದು ಕಣ್ಣಿಟ್ಟಿದ್ದರೂ ಬರಬರುತ್ತಾ ಆತನ

ಕಾರ್ಯದೀಕ್ಷೆ ಸತ್ಪ್ರವರ್ತನೆಗಳಿಂದ ತೃಪ್ತಿಪಟ್ಟು ಬಾಧ್ಯತೆಗಳನ್ನು ಆತನಿಗೇ ಪೂರ್ತಿಯಾಗಿ ಒಪ್ಪಿಸಿ ವಿಶ್ರಾಂತಿ ಪಡೆಯಲಾರಂಭಿಸಿದರು.

ಬಾಲವಿಹಾರದ ಅಭಿವೃದ್ಧಿಗೆ ಸಂಬಂಧಿಸಿದ ಸಂಭಾಷಣೆಗಳಲ್ಲಿ ಆಗೆ ಆಗಾಗ ಭಾಗವಹಿಸುತ್ತಿದ್ದರು. "ಉತ್ಸಾಹವಂತರಾದ ಹುಡುಗರು ನೀವು. ಎಲ್ಲಾ ಸಾಧಕಬಾಧಕಗಳನ್ನೂ ಆಲೋಚಿಸಿ ನಿರ್ಣಯಗಳನ್ನು ಮಾತ್ರ ನನಗೆ ತಿಳಿಸಿದರೆ ಸಾಕು. ಅಂಗೀಕಾರವಂತೂ ಒತ್ತಿಕೊಡುತ್ತೇನೆ" ಎನ್ನುತ್ತಿದ್ದರು ನಗುತ್ತಾ.

ಆ ವರ್ಷ ಸಂಕ್ರಾಂತಿಗೆ ಮಕ್ಕಳಿಗೆ ಹೊಸ ಬಟ್ಟೆ ಕೊಳ್ಳಲು ಪೇಟೆಗೆ ಹೊರಟಿದ್ದರು ಜಾನಕಿ-ಗೋವಿಂದಬಾಬು. ಹಿಂದಿನ ದಿನ ಮಕ್ಕಳನ್ನು ಕರೆದು "ಹಬ್ಬಕ್ಕೆ ನಿಮಗೆಂತಹ ಬಟ್ಟೆ ಬೇಕು?" ಎಂದು ಮಕ್ಕಳನ್ನು ಕೇಳಿದಳು ಜಾನಕಿ.

"ಆವತ್ತು ತೋಟಕ್ಕೆ ಹೋದಾಗ ಕಾರಿನಲ್ಲಿ ಕುಳಿತಿದ್ದ ಹುಡುಗಿ ಹಾಕಿಕೊಂಡಿದ್ದಳು ನೋಡು. ಆ ಥರದ್ದು ಕೆಂಪು ಫ್ರಾಕು ಬೇಕು ನಂಗೆ." ಒಂದು ಪುಟಾಣಿಯ ಬೇಡಿಕೆ.

"ಪಾರ್ಕಿನಲ್ಲಿ ಚೆಂಡಾಟ ಆಡೋವಾಗ ಹುಡುಗರು ಹಾಕ್ಕೊಂಡಿರ್ತಾರಲ್ಲಾ ಅಂತಾ ಡ್ರೆಸ್ಸು ಬೇಕು ನಂಗೆ"—ಒಬ್ಬ ಹುಡುಗನ ಅಭಿಲಾಷೆ.

"ಮೊನ್ನೆ ಸಿನಿಮಾದಲ್ಲಿ ಪುಟ್ಟಪಾಪ ತೊಟ್ಟುಕೊಂಡಿತ್ತಲ್ಲಾ ಅಂತಾ ಗೌನು ನಮ್ಮ ಸುಧನಿಗೆ ತಾ ಅಕ್ಕಾ"—ಆ ಫ್ರಾಕನ್ನು ತಾನು ತೊಟ್ಟುಕೊಳ್ಳಲಾಗದಿದ್ದರೂ ಅದರ ಮೇಲಿನ ಆಸೆಯನ್ನು ಹೀಗಾದರೂ ತೀರಿಸಿಕೊಳ್ಳಬೇಕೆಂದು ಒಬ್ಬ ಹುಡುಗಿಯ ಆಸೆ.

ಹೀಗೆ ಪ್ರತಿಯೊಬ್ಬರೂ ತಾವು ನೋಡಿದ, ತಾವು ಊಹಿಸಿ ಕನಸು ಕಾಣುತ್ತಿದ್ದುದನ್ನು ಕುರಿತು ಬಗೆಬಗೆಯಾಗಿ ವರ್ಣಿಸಿ ಹೇಳತೊಡಗಿದರು. ಎಲ್ಲಾ ಹೇಳಿ ಕೊನೆಯಲ್ಲಿ, "ನಿಂಗೆ ಚೆನ್ನಾಗಿದೆ ಅನ್ನಿಸಿದ್ದನ್ನು ತಗೊಂಬಾ, ಅಕ್ಕಾ" ಎಂದರು.

ಸಾಧ್ಯವಾದಷ್ಟು ಮಟ್ಟಿಗೆ ಮಕ್ಕಳ ಆಸೆ ಪೂರೈಸೋಣವೆಂದು ಪೇಟೆಯೆಲ್ಲಾ ಸುತ್ತಿದರು ಅವರು.

ಬಟ್ಟೆಯ ಅಂಗಡಿಯೊಂದರಿಂದ ಹೊರಬರುತ್ತಿದ್ದ ಜಾನಕಿಗೆ ಕಾಣಿಸಿದ ಪ್ರಕಾಶ, "ಇಲ್ಲೇನು ಮಾಡ್ತಿದೀಯಕ್ಕಾ?" ಎಂದು ಕೇಳಿದ.

"ಮಕ್ಕಳಿಗೆ ಬಟ್ಟೆ ಖರೀದಿ ಮಾಡ್ತಿದೀವಿ ಕಣೋ. ನಿನ್ನ ಕೆಲಸ ಏನಾಯಿತು? ಅಂಗಡಿ ತೆರೆಯಲಿಲ್ಲವೇನು ಈವತ್ತು?"

"ಪುಸ್ತಕದ ಅಂಗಡಿ ಸಂದಿಯೊಳಗಿದೆ ಅಕ್ಕಾ. ಚೆನ್ನಾಗಿ ತಿಳಿದವರಿಗೆ ಹೊರತು, ಅಲ್ಲಿ ಅಂಗಡಿ ಇದೆ ಅನ್ನೋದೇ ಗೊತ್ತಾಗೊಲ್ಲ. ಸಂದಿಯ ಮೊದಲಲ್ಲಿ ಬೋರ್ಡು ಹಾಕಿದೀನಿ ಅನ್ನು. ಆದರೂ ಸ್ಥಳ ಅಷ್ಟು ಅನುಕೂಲವಾಗಿಲ್ಲ, ಅನ್ನಿಸುತ್ತೆ. ಇಲ್ಲೆಲ್ಲೋ ಅಂಗಡಿ ಖಾಲಿ ಇದೆ ಅಂತ ತಿಳೀತು. ಬಾಡಿಗೆ ಎಷ್ಟೊಂತ ವಿಚಾರಿಸೋಣಾಂತ ಬಂದೆ."

ಕೊಂಡ ಬಟ್ಟೆಗಳಿಗೆ ಹಣ ಕೊಟ್ಟು ಹೊರಗೆ ಬಂದ ಗೋವಿಂದಬಾಬು ಇನ್ನು ಹೋಗೋಣವೇ, ಜಾನಕಿ?" ಎಂದ.

ಆತನನ್ನು ನೋಡಿದ ಪ್ರಕಾಶನಿಗೆ, 'ಈತ ಯಾರಕ್ಕಾ' ಎಂದು ಕೇಳಬೇಕೆನ್ನಿಸಿತು. ಆದರೆ ನಾಲಗೆಯ ತುದಿಯವರೆಗೂ ಬಂದ ಮಾತನ್ನು ತಡೆದುಕೊಂಡು, "ಬರ್ತೀನಕ್ಕಾ" ಎಂದಂದು ಹೊರಟುಹೋದ. ಆ ವ್ಯಕ್ತಿಯನ್ನು ಕುರಿತು ಏನಾದರೂ ಹೇಳಬೇಕಾದದ್ದಿದ್ದರೆ ಅಕ್ಕ ತಾನೇ ಹೇಳುತ್ತಾಳೆ ಎಂಬ ಭರವಸೆ ಅವನಿಗೆ.

"ಆ ಹುಡುಗ ಯಾರು?" ಗೋವಿಂದಬಾಬು ಪ್ರಶ್ನಿಸಿದ.

"ನನ್ನ ತಮ್ಮ."

"ಏನು ಓದುತ್ತಿದ್ದಾನೆ?"

"ಓದು ನಿಲ್ಲಿಸಿ ಪುಸ್ತಕದ ಅಂಗಡಿ ಇಟ್ಟುಕೊಂಡಿದ್ದಾನೆ."

"ಹಾಗೇನು? ನಮ್ಮ ಮಕ್ಕಳಿಗೆ ಬೇಕಾದ ಪುಸ್ತಕ ಇವನ ಕಡೆಯಿಂದ ತರಿಸಬಹುದಲ್ಲಾ. ಆ ಕಮಿಷನ್ ಅವನಿಗೆ ಬರುತ್ತೆ. ಇನ್ಯಾರಿಗೋ ಕೊಡೋದೇಕೆ?"

ಜಾನಕಿ ಕೃತಜ್ಞತೆಯಿಂದ, "ಸಂತೋಷ" ಎಂದಳು.

ತಾವು ಕೊಂಡುತಂದ ಬಟ್ಟೆಗಳನ್ನು ಮಕ್ಕಳಿಗೆ ತೋರಿಸಿ ಅವರನ್ನು ಒಪ್ಪಿಸಿ ಹೊರಗೆ ಬರುವ ವೇಳೆಗೆ ಸಾಕುಸಾಕಾಯಿತು. ಪ್ರತಿಯೊಬ್ಬರಿಗೂ ತಮಗೆ ತಂದ ಬಟ್ಟೆಗಳಿಗಿಂತ ಬೇರೆಯವರಿಗೆ ತಂದದ್ದೇ ಚೆನ್ನಾಗಿ ಕಾಣುತ್ತಿತ್ತು. ಹೋಗಲಿ ಅದೇ ತಗೋ ಅಂದರೆ "ಊಹುಂ" ಅಂತಾರೆ.

"ನಂಗೋಸ್ಕರ ತಂದದ್ದು ಇದು ತಾನೇ! ಇನ್ನೊಬ್ಬರದು ನಂಗ್ಯಾಕೆ?" ಅನ್ನುತ್ತಾರೆ ಮುಖ ದಪ್ಪಗೆ ಮಾಡಿಕೊಂಡು.

ಸರಿ, ಜಾನಕಿ ಅವರನ್ನೆಲ್ಲಾ ಹತ್ತಿರ ಕೂಡಿಸಿಕೊಂಡು ಆ ಬಟ್ಟೆಗಳಿಗಾಗಿ ತಾವು ಎಷ್ಟೊಂದು ಅಂಗಡಿ ಸುತ್ತಿದ್ದು, ಆರಿಸಿದ್ದು, ಅದು ಅವರಿಗೆ ಎಷ್ಟು ಚೆನ್ನಾಗಿ ಒಪ್ಪುತ್ತದೆ, ಆ ಡ್ರೆಸ್ಸಿನಲ್ಲಿನ ಸೊಗಸು, ಅದನ್ನು ತೊಟ್ಟವರು ಎಷ್ಟು ಚೆನ್ನಾಗಿ ಕಾಣೋದು ಇದನ್ನೆಲ್ಲಾ ವಿವರಿಸಿ ಅವರನ್ನು ತೃಪ್ತಿಪಡಿಸುವ ವೇಳೆಗೆ

ಗೋಡೆಯ ಗಡಿಯಾರದ ಮುಳ್ಳು ಒಂಬತ್ತು ಗಂಟೆ ತೋರಿಸುತ್ತಿತ್ತು.

"ತುಂಬಾ ಹೊತ್ತಾಗಿದೆ ಮಲಕ್ಕೊಳ್ಳಿ ಇನ್ನು" ಎಂದು ಅವರನ್ನು ಕಳುಹಿಸಿ, ಅನಸೂಯಮ್ಮನವರಿಗೆ ಹೇಳಿ ಹೋಗೋಣವೆಂದು ಬಂದಳು ಜಾನಕಿ.

"ಹೇಗೂ ಹೊತ್ತಾಗಿದೆ, ಊಟಮಾಡಿ ಹೋಗು" ಎಂದರು ಆಕೆ.

ಇದೆಲ್ಲಾ ಅಭ್ಯಾಸವಿಲ್ಲದ ಜಾನಕಿಗೆ ಏನು ಮಾಡಬೇಕೆಂದು ಒಂದು ಕ್ಷಣ ತೋಚಲಿಲ್ಲ.

"ಇಲ್ಲಾ, ಮನೇಲಿ ಎದುರುನೋಡುತ್ತಾ ಇರುತ್ತಾರೆ. ತುಂಬಾ ಹೊತ್ತಾಗಿದೆ. ಹೋಗ್ತೀನಿ."

"ಪರವಾಗಿಲ್ಲ, ಜಾನಕಿ. ಈವತ್ತಿಗೆ ಊಟಮಾಡಿ ಹೋಗು. ದಿನಾ ಕರೆಯೊಲ್ಲವಲ್ಲಾ. ಹೆಚ್ಚು ಕೆಲಸ ಮಾಡಿದರೆ ದೊಡ್ಡ ಆಫೀಸುಗಳಲ್ಲಿ ಓವರ್ ಟೈಮ್ ಕೊಡುತ್ತಾರೆ. ನಮ್ಮದು ಚಿಕ್ಕ ಸಂಸ್ಥೆ. ಹಣ ಕೊಡದಿದ್ದರೆ ಹೋಗಲಿ ಒಂದು ಹೊತ್ತು ಊಟವನ್ನಾದರೂ ಹಾಕಬೇಡವೇ?" ಎಂದರು ನಗುತ್ತಾ ಅನಸೂಯಮ್ಮ.

ಮೂವರೂ ಹರಟೆಹೊಡೆಯುತ್ತಾ ಊಟ ಮುಗಿಸುವ ವೇಳೆಗೆ ಗಂಟೆ ಹತ್ತಾಯಿತು.

"ಕತ್ತಲಲ್ಲಿ ಒಬ್ಬರೇ ಹೇಗೆ ಹೋಗುತ್ತೀರಿ? ನಡೆಯಿರಿ ನಾನು ಬಿಟ್ಟು ಬರುತ್ತೇನೆ" ಎಂದ ಗೋವಿಂದಬಾಬು.

"ನಿಮಗೇಕೆ ಶ್ರಮ? ದಿನಾ ಬರುವ ದಾರಿಯಲ್ಲವೇ? ನಾನು ಹೋಗ ಬಲ್ಲೆ."

"ನಿಮಗೋಸ್ಕರ ನಾನೇನೂ ಪ್ರತ್ಯೇಕವಾಗಿ ಬರುವುದಿಲ್ಲ. ಊಟವಾದ ಮೇಲೆ ಒಂದಿಷ್ಟು ದೂರ ನಡೆಯುವುದು ಅಭ್ಯಾಸ ನನಗೆ" ಎಂದ ಗೋವಿಂದ ಬಾಬು.

ದಾರಿಯಲ್ಲಿ ಯಾರೂ ಮಾತನಾಡಲಿಲ್ಲ. ದೂರದಿಂದಲೇ ತಮ್ಮ ಮನೆ ಯಲ್ಲಿನ ದೀಪದ ಬೆಳಕು ಕಾಣಿಸಿತು, ಜಾನಕಿಗೆ. ತನಗಾಗಿ ಯಾರೋ ಕಾದು ಕುಳಿತಂತೆ ಕಾಣಿಸಿತು.

"ಅದೇ ನಮ್ಮ ಮನೆ. ನಾನು ಹೋಗಬಲ್ಲೆ ಇನ್ನು. ನಮಸ್ಕಾರ" ಎಂದಳು ಜಾನಕಿ.

ಗೋವಿಂದಬಾಬು ಜಾನಕಿಯ ಮುಖ ನೋಡಿದ. ತಾನು ಅವರ ಮನೆಗೆ ಬರುವುದು ಆಕೆಗೆ ಇಷ್ಟವಿಲ್ಲವೆಂದು ಅರ್ಥಮಾಡಿಕೊಂಡ.

"ಸರಿ, ನೀವು ಹೋಗಿ. ನೀವು ಮನೆ ಸೇರುವವರೆಗೂ ನಾನು ಇಲ್ಲಿಯೇ ನಿಂತಿರುತ್ತೇನೆ, ನಮಸ್ಕಾರ" ಎಂದ.

ಜಾನಕಿ ಮನೆಯಕಡೆ ಹೆಜ್ಜೆ ಹಾಕಿದಳು. ಅವಳು ಮನೆ ಸೇರಿ ಬಾಗಿಲು ಮುಚ್ಚಿಕೊಂಡನಂತರ ಗೋವಿಂದಬಾಬು ಹಿಂತಿರುಗಿದ.

ಬಾಗಿಲಲ್ಲಿಯೇ ಜಾನಕಿಗೆ ಎದುರಾದ ಶ್ರೀಹರಿ. ಸುಂದರಮ್ಮ ನಡುಮನೆಯಲ್ಲಿ ಕುಳಿತಿದ್ದರು.

ಜಾನಕಿ ಬಾಗಿಲು ಮುಚ್ಚಿ ಅಗುಣಿ ಹಾಕುತ್ತಿದ್ದಾಗ ಶ್ರೀಹರಿ ಕೇಳಿದ:

"ಇಷ್ಟು ಹೊತ್ತಾಯಿತೇಕೆ?"

"ಆಫೀಸಿನಲ್ಲಿ ಕೆಲಸ ಇತ್ತು."

"ಇಷ್ಟು ರಾತ್ರಿಯಲ್ಲೀ?"

"ಹುಂ. ಮಕ್ಕಳಿಗೆ ಹಬ್ಬಕ್ಕೆ ಬಟ್ಟೆ ಕೊಂಡು ತಂದೆವು. ಅವನ್ನೆಲ್ಲಾ ಸರಿ ನೋಡುವ ವೇಳೆಗೆ ಲೇಟಾಯಿತು."

"ಒಬ್ಬಳೇ ಬಂದೆಯಾ?"

ಒಂದು ಕ್ಷಣ ಆಲೋಚಿಸಿದಳು ಜಾನಕಿ. 'ಗೋವಿಂದಬಾಬು ತನ್ನ ಜತೆ ಬಂದರೆಂದು ಹೇಳಿದರೆ 'ಯಾರದು?' ಎಂದು ಪ್ರಶ್ನಿಸುತ್ತಾರೆ. ಇಷ್ಟು ರಾತ್ರಿಯಲ್ಲಿ ಹೆಣ್ಣುಮಗಳು ಪರಪುರುಷನೊಂದಿಗೆ ಬರುವುದನ್ನು ಎಂತಹ ಪರಿಸ್ಥಿತಿಯಲ್ಲೂ ತನ್ನ ಅಣ್ಣ ಒಪ್ಪುವುದಿಲ್ಲ. ಹೇಳದಿರುವುದೇ ವಾಸಿ' ಎಂದುಕೊಂಡಳು.

"ಜವಾಬು ಕೊಡು. ಸುಮ್ಮನಾದೆಯೇಕೆ?"

"ಯಾವುದಕ್ಕೆ?"

"ಇಷ್ಟು ರಾತ್ರಿಯಲ್ಲಿ ಒಬ್ಬಳೇ ಬಂದೆಯಾ ಅಂತ ಕೇಳ್ತಿದೀನಿ."

"ಹುಂ."

"ನೀನು ಮನೆಯ ಒಳಕ್ಕೆ ಬರುವವರೆಗೆ ಆ ಲೈಟುಕಂಬದ ಹತ್ತಿರ ನಿಂತಿದ್ದುದು ಯಾರು? ಸರಿರಾತ್ರಿಯುವರೆವಿಗೂ ಅವನ ಜತೆ ತಿರುಗಿದ್ದಲ್ಲದೆ ಸುಳ್ಳು ಬೇರೆ ಹೇಳ್ತೀಯಾ?" ಶ್ರೀಹರಿ ಕೋಪದಿಂದ ಹಲ್ಲುಕಡಿಯುತ್ತಾ ಕೈಯೆತ್ತಿದ.

"ತಡೆ ಅಣ್ಣಾ, ಬಾಯಿಗೆ ಬಂದಂತೆಲ್ಲ ಮಾತನಾಡಿದರೆ ಇಲ್ಲಿ ಕೇಳೋರು ಯಾರೂ ಇಲ್ಲ. ಆತ ನಮ್ಮ ಬಾಸ್. ಒಂಟಿಯಾಗಿ ಬರುತ್ತಿದೇನಲ್ಲಾಂತ ಜತೆಗೆ ಬಂದರು. ನಿಮ್ಮ ಬುದ್ಧಿ ಗೊತ್ತಿದೆ ನನಗೆ. ಆದ್ದರಿಂದಲೇ ಮನೆಗೆ ಕರೆದು ಅವಮಾನಿಸಲು ಇಷ್ಟವಿಲ್ಲದೆ ಅವರನ್ನು ಅಲ್ಲಿಂದಲೇ ಕಳುಹಿಸಿದೆ."

"ಯಾರೇ ಆ ಬಾಸ್? ಸಾಯಂಕಾಲ ಪೇಟೇಲಿ ಕಿಲಕಿಲನೆ ನಗುತ್ತಾ ಹರಟುತ್ತಾ ಹೋಗುತ್ತಿದ್ದುದು ಇವನೊಂದಿಗೆ ತಾನೆ?"

'ಯಾರು ಹೇಳಿದರು ಅಣ್ಣನಿಗೆ? ಪ್ರಕಾಶ ಹೇಳಿರಬಹುದೇ? ಅವನು ಆ ತರಹದ ಸ್ವಭಾವದವನಲ್ಲವಲ್ಲಾ. ಸರಿ. ಹೇಗೋ ತಿಳಿದಿದೆ ಅಣ್ಣನಿಗೆ. ತಿಳಿದರೆ ಏನಂತೆ, ಏನಿದೆ ಇದರಲ್ಲಿ' ಎಂದುಕೊಂಡಳು ಜಾನಕಿ.

"ಇವನಿಗೆ ಹೇಗೆ ಗೊತ್ತಾಯಿತೂಂತ ಆಲೋಚಿಸುತ್ತಿದೀಯಾ? ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿಯುತ್ತಾ, ಪ್ರಪಂಚವೆಲ್ಲಾ ಕತ್ತಲಾಗಿದೆ, ನನ್ನನ್ನಾರು ನೋಡುತ್ತಾರೆ ಅಂದುಕೊಳ್ಳುತ್ತಂತೆ. ಎರಡು ಮೂರು ತಿಂಗಳಿಂದ ನಿನ್ನ ಆಫೀಸಿನಲ್ಲಿ ಕೆಲಸ ಏಕೆ ಹೆಚ್ಚಾಗಿದೆಯೋ ನನಗೆ ಗೊತ್ತಿಲ್ಲ ಎಂದುಕೊಂಡೆಯಾ? ಪಾಪ ಮಕ್ಕಳನ್ನು ಪಿಕ್ನಿಕ್ಕಿಗೆ ಕರಕೊಂಡು ಹೋಗ್ತಾಳೆ, ಸಿನಿಮಾಕೆ ಕರಕೊಂಡು ಹೋಗ್ತಾಳೆ, ಇದನ್ನೆಲ್ಲಾ ನೋಡಿ ಅನಸೂಯಮ್ಮ ಸಂಬಳ ಹೆಚ್ಚುಮಾಡಿದಾಳೆ, ಅಲ್ಲಾ?....ಯಾರಿಗೆ ಹೇಳಿಕೊಡ್ತಿಯೇ ಈ ಬೂಟಾಟಿಕದ ಮಾತನ್ನ! ಆ ದುಡ್ಡು ಇವನು ಕೊಟ್ಟದ್ದು ತಾನೆ? ಕಟ್ಟಿಕೊಂಡ ಗಂಡನ್ನ ಬಿಟ್ಟು ಕಂಡೋರಾ ಜತೆ ತಿರುಗ್ತಾ...."

"ಛೀ! ಎಂಥ ಮಾತಾಡ್ತೀಯಣ್ಣ. ನನ್ನನ್ನ, ನನ್ನ ಸ್ವಭಾವವನ್ನ ಅರಿಯದವರು ಏನಾದರೂ ಅಂದರೆ ನನಗೇನೂ ದುಃಖವಿಲ್ಲ. ಆದರೆ ನೀನು.... ಇಷ್ಟು ದಿನದಿಂದ ನನ್ನನ್ನ ನೋಡಿ ಅರ್ಥಮಾಡಿಕೊಂಡು ಇಂತಹ ಮಾತಾಡ್ತೀಯಾಂದ್ರೆ ನಂಬೋಕೆ ಆಗುತ್ತಿಲ್ಲ. ಅಣ್ಣಾ, ಅರ್ಧ ರಾತ್ರಿ ಹಿರಿಯರು ಕಟ್ಟಿದ ಈ ಮನೆಯಲ್ಲಿ ನಿಂತು ಈ ಮಾತು ಹೇಳ್ತಿದೀನಿ, ಜ್ಞಾಪಕ ಇಟ್ಟುಕೋ! ನೀವು ಆ ದಿನ ತಾಳಿ ಕಟ್ಟಿಸಿ, ಮಾರನೆಯ ದಿನವೇ ಅದಕ್ಕೆ ಬೆಲೆಯಿಲ್ಲದಂತೆ ಮಾಡಿದಿರಲ್ಲಾ, ಆ ತಾಳಿ ನನ್ನನ್ನು ಬಂಧಿಸಿ ನಿಲ್ಲಿಸಿಲ್ಲ. ನನಗೆ ಗಂಡಸಿನ ಆವಶ್ಯಕತೆಯಿದೆಯೆನಿಸಿದಾಗ ನನ್ನಂತೆಯೇ ಧೈರ್ಯ ಇರುವವನನ್ನು ನಾಲ್ಕು ಜನದ ಮುಂದೆಯೇ ಮದುವೆ ಮಾಡಿಕೊಳ್ಳುತ್ತೀನಿ. ನನಗಿಷ್ಟವಿಲ್ಲದ ಗಂಡನೊಡನೆ ಸಂಸಾರ ಮಾಡು ಎಂದು ಯಾವ ಕೋರ್ಟೂ ನನ್ನನ್ನು ಶಾಸಿಸುವುದಿಲ್ಲ. ನಿಮ್ಮ ಹಾಗೆ ಕುಟುಂಬ ಗೌರವ ಅಂತ ಮೂಲೆಯಲ್ಲಿ ಕುಳಿತುಕೊಳ್ಳುವುದು ನನ್ನಿಂದಾಗದು. ನನಗೆ ನ್ಯಾಯ ಧರ್ಮ ಅನ್ನಿಸಿದ್ದನ್ನ ನಾಲ್ಕು ಜನದ ಮುಂದೆ ಎಲ್ಲರಿಗೂ ತಿಳಿಯುವಂತೆಯೇ ಮಾಡುತ್ತೇನೆ."

ಮಾತು ಪೂರ್ತಿಮಾಡಿ ಸರ್ರೆಂದು ಅಲ್ಲಿಂದ ಕೋಣೆಯೊಳಕ್ಕೆ ಹೊರಟು ಹೋದಳು ಜಾನಕಿ.

ರಾತ್ರಿ ಬಹಳ ಹೊತ್ತಿನವರೆಗೂ ಶ್ರೀಹರಿ, ಸುಂದರಮ್ಮ ಪಿಸುದನಿಯಲ್ಲಿ

ಮಾತನಾಡಿಕೊಳ್ಳುತ್ತಲೇ ಇದ್ದರು.

"ನೋಡಿದೆಯಾ ಅಮ್ಮ, ಇವಳ ಗರ್ವ? ಅವನ ಜತೇಲಿ ಬೀದಿಯಲ್ಲಿ ತಿರುಗೋದೇ ಅಲ್ಲದೆ ತಾನು ಮಾಡಿದ್ದರಲ್ಲಿ ತಪ್ಪೇನೂ ಇಲ್ಲಾಂತ ವಾದಿಸುತ್ತಾಳೆ. ಆದಕ್ಕೇ ಹೇಳಿದ್ದು ಈ ಕೆಲಸ, ಗಿಲಸ ಬೇಡ, ಮರ್ಯಾದೆಯಾಗಿ ಮನೇಲಿ ಬಿದ್ದಿರಲಿ ಅಂದ್ರೆ ಕೇಳಲಿಲ್ಲ ನೀನು."—ಶ್ರೀಹರಿಯ ಕಂಠ ಸ್ಪಷ್ಟವಾಗಿಯೇ ಕೇಳಿಸಿತು.

"ಇವಳು ಹೀಗೆ ಆಗ್ತಾಳೇಂತ ನಾನುಮಾತ್ರ ಕನಸುಕಂಡೆನೇನೋ, ನಿನಗೂ ಒಂದಿಷ್ಟು ಸಹಾಯವಾಗುತ್ತೆ, ಅವಳಿಗೂ ಹೊತ್ತುಹೋಗುತ್ತೆ ಅಂದುಕೊಂಡೆ...."

"ಈಗೇನು ಮಾಡೋಣ?"

"ಕೆಲಸ ಬಿಟ್ಟುಬಿಡೂನ್ನು."

"ಬಿಡು ಅಂದ್ರೆ ಬಿಡ್ತಾಳೇನಮ್ಮ? ಒಂದುಸಲ ಹೊಸಲುದಾಟಿದ ಹೆಣ್ಣು ಮತ್ತೆ ಮನೇಲಿ ಇರೋದು ಅಷ್ಟು ಸುಲಭ ಅಲ್ಲ."

"ಹೋಗಲಿ, ಅವರ ಮನೆಗೊಂದುಸಲ ಹೋಗಿ ಕೈಕಾಲುಕಟ್ಟಿಕೊಂಡು ಬೇಡಿಕೊಂಡರೆ? ಇಷ್ಟು ಹೊತ್ತಿಗೆ ಅವರ ಕೋಪ ಆರಿರಬಹುದು. ಹೇಗೋ ಹಾಗೆ ಅವಳನ್ನು ಅತ್ತೆಯ ಮನೆಗೆ ಕಳುಹಿಸಿಕೊಟ್ಟರೆ ಅಷ್ಟೇ ಸಾಕು."

ತಾಯಿ ಹೇಳಿದ್ದು ಸರಿ ಅನ್ನಿಸಿತು, ಶ್ರೀಹರಿಗೆ. ಜಾನಕಿಯನ್ನು ದಾರಿಗೆ ಹಚ್ಚಬೇಕಾದರೆ ಅದಕ್ಕಿಂತ ಒಳ್ಳೆಯಮಾರ್ಗ ಬೇರೊಂದಿಲ್ಲ ಅನ್ನಿಸಿತು. ತಾಯಿ ಹೇಳಿದಂತೆಯೇ ಮಾಡಬೇಕೆಂದು ನಿಶ್ಚಯಿಸಿಕೊಂಡ ಶ್ರೀಹರಿ.

* * *

ಸಂಕ್ರಾಂತಿ ಬಂದು ಹೋಗಿತ್ತು. ಆ ದಿನದ ಸಂಭಾಷಣೆಯ ನಂತರ ಜಾನಕಿ–ಶ್ರೀಹರಿ ಒಬ್ಬರೊಂದಿಗೊಬ್ಬರು ಮಾತನಾಡಿರಲಿಲ್ಲ. ಇಬ್ಬರೂ ತಮ್ಮ ತಮ್ಮ ನಿರ್ಣಯಗಳನ್ನು ಮನಸಿನಲ್ಲಿರಿಸಿಕೊಂಡು ಮಳೆ ಬೀಳುವ ಮುನ್ನ ಚಲನವಿಲ್ಲದ ಆಕಾಶದಲ್ಲಿನ ಮೋಡಗಳಂತಿದ್ದರು.

ಹಬ್ಬ ಕಳೆದ ಹತ್ತು ದಿನಗಳಿಗೆ ಪ್ರಕಾಶ ತನ್ನ ಅಂಗಡಿಯನ್ನು ಪೇಟೆ ಬೀದಿಗೆ ಬದಲಾಯಿಸಿದ್ದ. ಕೆಲವರು ತಿಳಿದವರಿಂದ ಒಂದೆರಡು ಪತ್ರಿಕೆಗಳಿಗೆ ಏಜೆನ್ಸಿ ಕೂಡಾ ಸಿಕ್ಕಿತ್ತು. ಮನೆಮನೆಗೂ ಹೋಗಿ ಹಳೆಯ ಪುಸ್ತಕಗಳನ್ನು ಕೊಂಡು ಸೆಕೆಂಡ್‌ಹ್ಯಾಂಡ್ ಬುಕ್‌ಸ್ಟಾಲೊಂದನ್ನು ಹೊಸದಾಗಿ ಪ್ರಾರಂಭಿಸಿದ್ದ. ಹಿಂದೆ ಪ್ರಕಾಶನ ಸಹಾಯ ಪಡೆದವರೆಲ್ಲಾ ಅವರೇ ಕರೆದು ತಮ್ಮ ಮನೆಯಲ್ಲಿದ್ದ ಹಳೆಯ ಪುಸ್ತಕಗಳನ್ನು ಕೊಟ್ಟಿದ್ದರು. ನೋಡನೋಡುತ್ತಿರು

ವಾಗಲೇ ಅಂಗಡಿಯಲ್ಲಿನ ಬಹಳ ಭಾಗ ಹಳೆಯ ಪುಸ್ತಕಗಳಿಂದ ತುಂಬಿ ಹೋಗಿತ್ತು.

ಯಾವುದಾದರೂ ಒಂದು ಪುಸ್ತಕವನ್ನು ಕುರಿತು ಕೊಳ್ಳುವವರಿಗೆ ಹೇಳಬೇಕಾದರೆ ಮಾರುವವನಿಗೆ ಅವುಗಳನ್ನು ಕುರಿತು ಸ್ವಲ್ಪವಾದರೂ ತಿಳಿದಿರುವುದು ಆವಶ್ಯವೆಂದು ಭಾವಿಸಿದ ಪ್ರಕಾಶ. ಅವನ ಮನಸಿನಲ್ಲಿ ಹೊಳೆದ ಉದ್ದೇಶ ಕಾರ್ಯರೂಪಕ್ಕೆ ತರಲು ಹೆಚ್ಚು ಸಮಯ ಹಿಡಿಸುತ್ತಿರಲಿಲ್ಲ. ಮಾರನೆಯ ದಿನದಿಂದ ಮರೆತುಹೋಗಿದ್ದ ಓದನ್ನು ನೆನಪುಮಾಡಿಕೊಳ್ಳುತ್ತಾ ಪುಸ್ತಕಗಳನ್ನು ಓದಲು ಪ್ರಾರಂಭಿಸಿದ. ಬಿಡುವಿದ್ದಾಗ ಹಗಲು ಓದುತ್ತಿದ್ದ. ಅಲ್ಲದೆ ರಾತ್ರಿ ಮನೆಗೆ ಕೂಡಾ ಪುಸ್ತಕಗಳನ್ನು ತೆಗೆದುಕೊಂಡು ಹೋಗಿ ಓದುತ್ತಿದ್ದ. ಆ ಪುಸ್ತಕಗಳಲ್ಲಿ ಒಳ್ಳೆಯವೂ, ಕೆಟ್ಟವೂ ಎರಡು ಬಗೆಯವೂ ಇರುತ್ತಿದ್ದುವು.

"ಇಂಥಾ ಪುಸ್ತಕ ಏಕೆ ಓದುತ್ತೀಯೋ ಪ್ರಕಾಶಾ?" ಎನ್ನುತ್ತಿದ್ದಳು ಜಾನಕಿ.

"ಮನುಷ್ಯರಲ್ಲಿ ಒಳ್ಳೆಯವರೂ, ಕೆಟ್ಟವರೂ ಕೂಡಾ ಇರುತ್ತಾರಲ್ಲಕ್ಕಾ. ಒಳ್ಳೆಯವರನ್ನು ಮಾತ್ರ ಊರಲ್ಲಿಟ್ಟುಕೊಂಡು ಕೆಟ್ಟವರನ್ನು ಓಡಿಸಬೇಕೆಂದರೆ ಅವರೆಲ್ಲಾ ಎಲ್ಲಿ ಹೋಗುತ್ತಾರೆ? ನಿಜ ಹೇಳಬೇಕೆಂದರೆ ತಮ್ಮೊಂದಿಗೆ ಕೆಟ್ಟವರಿದ್ದಾರಾದ್ದರಿಂದಲೇ ಒಳ್ಳೆಯವರ ಒಳ್ಳೆಯತನ ಎತ್ತಿ ಕಾಣುತ್ತದೆ. ಒಂದು ಕೆಟ್ಟ ಪುಸ್ತಕ ಓದಿ ಅನಂತರ ಒಳ್ಳೆಯ ಪುಸ್ತಕ ಓದಿದರೆ ಅದರಲ್ಲಿನ ಒಳಿತು ಮತ್ತೂ ಚೆನ್ನಾಗಿ ಅರ್ಥವಾಗುತ್ತದೆ."

"ನೀನು ವಾದಿಸುವುದರಲ್ಲಿ ಅರ್ಥವಿಲ್ಲಕಣೋ, ಸುಟ್ಟಕಡೆ ಎಣ್ಣೆ ಹಚ್ಚಿದರೆ ತಣ್ಣಗಿರುತ್ತದೆಯೆಂದು ತಿಳಿದುಕೊಳ್ಳಬೇಕಾದರೆ ಕೈ ಸುಟ್ಟುಕೋಬೇಕೆ? ಒಳ್ಳೆಯ ಪುಸ್ತಕಗಳನ್ನು ಓದಿದರೆ ಮನಸ್ಸು ವಿಕಸಿಸುತ್ತದೆ. ಆಲೋಚನಾ ಶಕ್ತಿ ವೃದ್ಧಿಹೊಂದಿ ಯಾವ ವಿಷಯದಲ್ಲಾದರೂ ತನ್ನಷ್ಟಕ್ಕೆ ತಾನು ಆಲೋಚಿಸಿ ತನ್ನ ಅಭಿಪ್ರಾಯಕ್ಕೆ ಅನುಗುಣವಾಗಿ ನಡೆಯುವ ಅವಕಾಶ ಉಂಟಾಗುತ್ತೆ."

"ಕೆಟ್ಟ ಪುಸ್ತಕಗಳನ್ನು ಓದಿದರೆ ಇಂತಹ ಸಮಸ್ಯೆ ಏನೂ ಇರೊಲ್ಲ ಬಿಡು. ಅದರಲ್ಲಿ ಆಲೋಚಿಸಿ ತಿಳಿದುಕೊಳ್ಳಬೇಕಾದ್ದು ಏನೂ ಇರೊಲ್ಲ" ಎಂದು ಸಂಭಾಷಣೆಯನ್ನು ಮುಕ್ತಾಯಗೊಳಿಸುತ್ತಿದ್ದ ಪ್ರಕಾಶ.

"ಈ ಶ್ರದ್ಧೆ ಓದಿಕೊಳ್ಳುವಾಗ ಇದ್ದಿದ್ದರೆ ಇಷ್ಟುಹೊತ್ತಿಗೆ ಅವರಣ್ಣನೊಂದಿಗೆ ಬಿ.ಎ. ತರಗತಿಯಲ್ಲಿರುತ್ತಿದ್ದ" ಎಂದುಕೊಳ್ಳುತ್ತಿದ್ದರು ಸುಂದರಮ್ಮ.

ಜಾನಕಿ ನೋಡಿದಾಗಲೆಲ್ಲಾ ಸಾಂಬಶಿವ ಕೈಯಲ್ಲಿ ಪುಸ್ತಕ ಹಿಡಿದು

ಕೊಂಡೇ ಕಾಣಿಸುತ್ತಿದ್ದ.

"ಅಷ್ಟು ವಿಪರೀತವಾಗಿ ಓದುತ್ತೀಯಲ್ಲೋ ಸಾಂಬೂ. ಪರೀಕ್ಷೆ ಆದ ಮಾತ್ರಕ್ಕೇ ಮನುಷ್ಯನ ಮನಸಿಗೆ ಸ್ವಲ್ಪ ವಿಶ್ರಾಂತಿ ಬೇಡವೇನೋ" ಎನ್ನು ತ್ತಿದ್ದಳು ಜಾನಕಿ.

"ಏನು ಓದೋ ನನಗೆ ಗೊತ್ತಿಲ್ಲಕ್ಕಾ. ಮೊನ್ನೆ ಪರೀಕ್ಷೇಲಿ ಎಲ್ಲಾ ಹಾಳು ಮಾಡಿಟ್ಟೆ. ಪೇಪರ್ ಕೈಗೆ ತೆಗೆದುಕೊಳ್ಳುವವರೆಗೂ ಎಲ್ಲಾ ಬಂದ ಹಾಗೆ ಅನ್ನಿಸುತ್ತಿತ್ತು. ಈ ಪರೀಕ್ಷೆ ಬರೆದರೆ ಕ್ಲಾಸಿನಲ್ಲಿ ನನ್ನ ಸ್ಥಾನ ಏನು ಎಂದು ಅಂದಾಜುಮಾಡಿಕೊಳ್ಳಬಹುದೆಂದಿದ್ದೆ. ಪೆನ್ನು ಕೈಗೆ ತೆಗೆದುಕೊಂಡ ಕೂಡಲೇ ತಲೆಯಲ್ಲಿ ಇದ್ದದ್ದೆಲ್ಲಾ ಎಲ್ಲಿಹೋಯಿತೋ ಕಾಣೆ. ಓದಿದ್ದೆಲ್ಲಾ ಎಲ್ಲಿ ಹಾರಿಹೋಯಿತೋ ಕಾಣೆ. ಒಂದು ವಿಷಯವೂ ನೆನಪಿಗೆ ಬರಲಿಲ್ಲ.... ಹಾಲಿನಿಂದ ಹೊರಗೆ ಬಂದ ಕೂಡಲೇ ನಾನು ಬರೆದ ಉತ್ತರಗಳನ್ನು ನೆನೆಸಿ ಕೊಂಡು ನನಗೇ ನಾಚಿಕೆಯಾಯಿತು. ಕ್ಲಾಸ್ ಪರೀಕ್ಷೆಯಲ್ಲಿಯೇ ಹೀಗಿರು ವಾಗ ಇನ್ನು ಪಬ್ಲಿಕ್ ಪರೀಕ್ಷೆಗಳಲ್ಲಿ ನಾನು ಪಾಸಾಗೋದು ನಿಜವೇ?...." ಎಂದ ಸಾಂಬು.

"ಸಾಂಬೂ, ನೀನು ಬುದ್ಧಿವಂತ, ಚೆನ್ನಾಗಿ ಓದಿಪಾಸಾಗಬಲ್ಲೆ. ಆದರೆ ಓದಿನ ಬಗ್ಗೆ ಮನುಷ್ಯನಲ್ಲಿ ಭಯಹುಟ್ಟಲೇ ಬಾರದು....ಅದಕ್ಕೆ ತಕ್ಕಹಾಗೆ ಪ್ರೋತ್ಸಾಹಿಸುತ್ತಿದ್ದಾನೆ ನಿಮ್ಮಣ್ಣ" ಎಂದಳು ಜಾನಕಿ.

"ಅವನೇನು ಮಾಡಿದನೇ ಈಗ? ಮನೇಲಿ ಎಲ್ಲರೂ ಅವನನ್ನ ಅನ್ನೋರೆ. ಎಲ್ಲರಿಗೂ ಒಂದಿಷ್ಟು ವಿದ್ಯೆಬುದ್ಧಿ ಕಲಿಸಿ, ಮದುವೆ ಮಾಡಿ, ಒಂದು ದಾರಿಗೆ ತರಬೇಕೂಂತ ಪ್ರಯತ್ನ ಪಡುತ್ತಿದಾನಲ್ಲಾಂತಲೇನು?" ಸುಂದರಮ್ಮ ಹಿರಿಯ ಮಗನ ಪರ ವಾದಿಸಿದರು.

"ಇನ್ನೂ ಏನು ಮಾಡಬೇಕಮ್ಮಾ? ಆ ವಕೀಲ ರಾಮರಾಯರ ಸಂಬಂಧ ಇವನ ತಲೆಗೆ ಕಟ್ಟಿದ. ಅದರೊಂದಿಗೆ ಶಾಂತನ ಮದುವೆ ಗಂಟು ಹಾಕಿದ. ಶಾಂತನ ಮದುವೆಯೊಂದಿಗೆ ತನ್ನ ಮಾನ–ಮರ್ಯಾದೆ ಸೇರಿಸಿದ. ಅದೃಷ್ಟ ವಕ್ರಿಸಿ ಸಾಂಬು ಫೇಲಾದರೆ—ಹಾಗಾಗೊಲ್ಲ ಅಂತಿಟ್ಟುಕೊ— ಅಣ್ಣನ ಗೌರವಕ್ಕೆ ಸಾಂಬು ಕುಂದುತಂದಂತಾಗುತ್ತೆ. ಈ ಪರಿಸ್ಥಿತೀಲಿ ನಾನಾಗಲೀ ಪ್ರಕಾಶನಾಗಲೀ ಇದ್ದಿದ್ದರೆ ಅಣ್ಣನ ಗೌರವ ಮರ್ಯಾದೆ ಗಳನ್ನು ಭದ್ರವಾಗಿ ಮೂಟೆಕಟ್ಟಿಟ್ಟು ನಮ್ಮ ಕೆಲಸ ನಾವು ನೋಡಿಕೊಳ್ಳುತ್ತ ಇದ್ದೆವು. ದುರದೃಷ್ಟವಶಾತ್ ಈ ಭಾರ ಸಾಂಬೂನ ಮೇಲೆ ಬಿದ್ದಿದೆ."

"ವಿಚಿತ್ರವಾಗಿ ಮಾತಾಡ್ತೀಯಲ್ಲೇ ಜಾನಕಿ. ಅಣ್ಣಾ ಅಂದದ್ದಾದರೂ

ಏನು? ಶ್ರದ್ಧೆಯಿಂದ ಓದಪ್ಪಾ. ದೊಡ್ಡವರ ಮನೆ ಹೆಣ್ಣನ್ನ ತಂದು ಮದುವೆ ಮಾಡ್ತೀನಿ, ಮಾವನವರು ಮುಂದಕ್ಕೆ ಓದಿಸ್ತಾರೆ. ಮಹಾರಾಜನಂತೆ ಬದುಕ ಬಹುದೂಂತ. ತಪ್ಪೇನು?"

"ತಪ್ಪೋ, ಒಪ್ಪೋ ನಾನು ಕಾಣೆನಮ್ಮಾ, ಮುಖ್ಯ ಸಾಂಬು ಓಗೂ ಇದಕ್ಕೂ ಗಂಟು ಹಾಕೋದು ಸರಿಯಲ್ಲಾಂತಲೇ ನಾನು ಹೇಳೋದು, ಅವನು ಮೊದಲೇ ಭಯಸ್ಥ, ಅಣ್ಣ ಹೀಗೆ ಸದಾ ಬೋಧಿಸುತ್ತ ಇದ್ದರೆ ಅವನ ಮನಸಿನ ಸ್ಥಿಮಿತ ಕೆಡುತ್ತೆ ಅಂತ, ಅಷ್ಟೆ!"

"ಆ ಹುಡುಗೀನ ಸಾಂಬಣ್ಣ ಮದುವೆ ಮಾಡಿಕೊಳ್ಳೋದೇ ನನಗಿಷ್ಟ ವಿಲ್ಲಕಾ. ಕಪ್ಪಗೆ ಹಳೆಯ ಹುಣಸೆಹಣ್ಣಿನ ಬಣ್ಣದಲ್ಲಿರ್ತಾಳಂತೆ. ತಲೇಲಿ ಕೂದಲೆ ಇಲ್ಲವಂತೆ. ದೊಣ್ಣೆ ಮೂಗಂತೆ...." ಶಾಂತಾ ಮದುಮಗಳನ್ನು ವರ್ಣಿಸು ತ್ತಿದ್ದುದನ್ನು ಕೇಳಿ ಸಾಂಬು ಹೆದರಿಕೆಯಿಂದ ಸೂಕ್ಷ್ಮವಾಗಿ ಕಂಪಿಸತೊಡಗಿದ.

"ನೀನು ಯಾವಾಗ ನೋಡಿದೆಯೋ, ಶಾಂತಾ?" ಪ್ರಕಾಶ ಕೇಳಿದ.

"ನನ್ನ ಸ್ನೇಹಿತೆ ಶಾರದೆಯ ಚಿಕ್ಕಮ್ಮನ ಮಗಳೇ ತಾನೇ? ಅಣ್ಣನಿಗೆ ಕೊಡ್ತಾರೇಂತ ತಿಳಿದು ಹೇಳಿದಳು."

"ಅಷ್ಟೇ ಅಲ್ಲದೆ ಅವರ ಮನೇಲೇ ಇಟ್ಟುಕೋತಾರಂತೆ! ನಾನು ಹೇಳಿದರೆ ಅವರೆಲ್ಲಿ ಕೇಳ್ತಾರೆ? ಇಂಥಾ ಮನೇಲಿ ಹುಟ್ಟಿದ ದೊರೆಯಂಥಾ ಹುಡುಗನ್ನಾ ಗತಿಯಿಲ್ಲದವರಂತೆ ಮನೆ ಅಳಿಯನಾಗಿ ಕಳುಹಿಸಬೇಕೆ?" ಎಂದಳು ಕನಕ.

"ಸಾಂಬೂ, ನಾನು ಈ ಮದುವೆ ಮಾಡಿಕೊಳ್ಳೊಲ್ಲ ಅಂತ ಖಂಡಿತ ವಾಗಿ ಹೇಳಿಬಿಡೋ ಅಣ್ಣನಿಗೆ. ಶಾಂತನ ಮದುವೆಗೋಸ್ಕರ ನಿನ್ನ ಬದುಕು ಹಾಳುಮಾಡಿಕೋತೀಯಾ? ಶಾಂತನಿಗೆ ನಾವು ಮದುವೆ ಮಾಡಲಾರದೆ ಹೋದರೆ ಈಗೇನೂ ಮುಳುಗಿ ಹೋಗೊಲ್ಲ. ಅಕ್ಕನ ಹಾಗೆ ಕೆಲಸ ಮಾಡಿ ಕೋತಾಳೆ. ಅಕ್ಕನಿಗೋಸ್ಕರ, ತಂಗಿಗೋಸ್ಕರ ಅಂತ ನೀನೇಕೆ ನಿನ್ನ ಬದುಕು ಹಾಳುಮಾಡಿಕೋಬೇಕು?"

"ಅಬ್ಬಾ, ಸುಮ್ಮನಿರ್ರೋ ನೀವೆಲ್ಲಾ ಸೇರಿ ನನ್ನ ತಲೆ ಕೆಡಿಸಬೇಡಿ. ನನ್ನ ಪಾಡು ನಾನು ನೋಡಿಕೋತೀನಿ, ಬಿಡಿ" ಎಂದ ಸಾಂಬಶಿವ ಎರಡೂ ಕೈ ಜೋಡಿಸುತ್ತಾ.

"ಹೋಗ್ರೋ ಎದ್ದು, ಅವನು ಓದಿಕೊಳ್ಳಲಿ. ತಾಕೆಟ್ಟ ಕೋತಿ ವನಾ ನೆಲ್ಲಾ ಕೆಡಿಸ್ತಂತೆ. ನೀವು ಅವನಿಗೇನೂ ಬುದ್ಧಿ ಹೇಳಿಕೊಡಬೇಕಾಗಿಲ್ಲ. ನನ್ನ ಮಗ ಲಕ್ಷ್ಮಣಸ್ವಾಮಿಯಂಥವನು. ಅಣ್ಣನ ಮಾತು ನಡೆಸೇ ತೀರುತ್ತಾನೆ" ಎಂದರು ಸುಂದರಮ್ಮ.

* * *

ಸಾಂಬುವಿನ ಪರೀಕ್ಷೆ ಹತ್ತಿರವಾಗತೊಡಗಿತ್ತು. ವಕೀಲ ರಾಮರಾಯರಿಂದ ಕಾಗದಗಳೂ ಬರತೊಡಗಿದ್ದುವು. ಕಾಗದ ಬಂದ ದಿನ ಶ್ರೀಹರಿ ತಮ್ಮನಿಗೆ ಒಂದುಗಂಟೆಯಾದರೂ ಉಪದೇಶಮಾಡಿ ಅವನ ಬಾಧ್ಯತೆಗಳನ್ನು ನೆನಪು ಮಾಡುತ್ತಿದ್ದ.

"ನನ್ನ ಆಸೆಯೆಲ್ಲಾ ನಿನ್ನಮೇಲೇ ಇಟ್ಟುಕೊಂಡಿದೀನಿ ಕಣೋ. ಮನೆಯಲ್ಲಿ ಎಲ್ಲರೂ ನನ್ನ ಮೇಲೆ ಕತ್ತಿಕಟ್ಟಿದಂತೆ ಇದಾರೆ. ನೀನಾದರೂ ನನಗೆ ಒತ್ತಾಸೆ ಕೊಡದಿದ್ದರೆ ನನ್ನ ಗತಿ ದೇವರೇ ಗತಿ. ನಾಲ್ಕು ಜನದಲ್ಲಿ ಎಂದಿಗೂ ತಲೆಯೆತ್ತಿ ತಿರುಗುವಂತಿಲ್ಲ" ಎನ್ನುತ್ತಿದ್ದ.

"ಹಾಗೇ ಆಗಲಣ್ಣಾ. ನನಗೆ ಶಕ್ತಿಯಿದ್ದಷ್ಟು ಮಟ್ಟಿಗೂ ನಿನಗೆ ಸಹಾಯ ಮಾಡಲು ಪ್ರಯತ್ನಿಸುತ್ತೇನೆ" ಎನ್ನುತ್ತಿದ್ದ ಸಾಂಬೂ.

ಮನೆಯಲ್ಲಿ ಮಿಕ್ಕವರೆಲ್ಲಾ ಶ್ರೀಹರಿಯನ್ನು ವ್ಯತಿರೇಕಿಸುತ್ತಿದ್ದ ಹಾಗೆಲ್ಲಾ, ಸಾಂಬಶಿವನಿಗೆ ಅಣ್ಣನಮೇಲೆ ಸಹಾನುಭೂತಿ ಹೆಚ್ಚಾಗುತ್ತಿತ್ತು. ಅಣ್ಣ ತನ್ನ ಸುಖವನ್ನು ಮರೆತು ಯಾರ ಶ್ರೇಯಸ್ಸಿಗೋಸ್ಕರ ದುಡಿಯುತ್ತಿದಾನೋ, ಅವರೇ ಆತನಿಗೆ ಎದುರುಬೀಳುತ್ತಿರುವುದು ಅನ್ಯಾಯ ಅನ್ನಿಸುತ್ತಿತ್ತು ಅವನಿಗೆ. ಕನಿಷ್ಟಪಕ್ಷ ತಾನಾದರೂ ಅಣ್ಣನ ಆಸೆಆಕಾಂಕ್ಷೆಗಳಿಗೆ ನೀರೆರೆಯಬೇಕೆಂದು ನಿಶ್ಚಯಿಸಿಕೊಂಡ.

ಸಾಂಬಶಿವನ ಪರೀಕ್ಷೆ ಹತ್ತುದಿನ ಇದೆಯೆನ್ನುವಾಗಲೇ ಉಗಾದಿಹಬ್ಬ ಬಂದಿತ್ತು. ಬೇವು-ಬೆಲ್ಲ ದೇವರ ಮುಂದಿಟ್ಟು ಮುಂಚೆ ಸಾಂಬಶಿವನ ಕೈಯಲ್ಲಿ ಹಾಕಿದರು. ಸಾಂಬಶಿವ ಬೇವು-ಬೆಲ್ಲವನ್ನು ಕಣ್ಣಿಗೊತ್ತಿಕೊಂಡು, ಬಾಯಿಗೆ ಹಾಕಿಕೊಂಡು, "ಅಬ್ಬಾ, ಇಷ್ಟು ಕಹಿಯಾಗಿದೆಯೇನಮ್ಮಾ?" ಎಂದ.

"ಬೇವು-ಬೆಲ್ಲ ಇನ್ನು ಹೇಗಿರುತ್ತೋ! ಸಿಹಿ, ಕಹಿ ಬದುಕಿನಲ್ಲಿನ ಕಷ್ಟ ಸುಖಗಳಂತೆ."

"ಹಾಗಾದರೆ ಈ ವರ್ಷ ನನಗೆ ಬರೀ ಕಷ್ಟಗಳೇ ಇರುವಂತಿದೆ. ಬರೀ ಕಹಿ ಸಿಗುತ್ತಿದೆ ನಲಿಗೆಗೆ. ಸಿಹಿ ಇಲ್ಲವೇ ಇಲ್ಲ" ಎಂದ ಸಾಂಬು.

"ಅತ್ತೇ, ಪುಡಿಮಾಡಿಟ್ಟ ಬೆಲ್ಲ ಕಲಸಲಿಲ್ಲವೇ? ಇಲ್ಲಿಯೇ ಇದೆಯಲ್ಲಾ" ಎಂದಳು ಕನಕ ಅಡಿಗೆಮನೆಯಿಂದ.

ಸುಂದರಮ್ಮನವರ ಮುಖ ಕಪ್ಪಿಟ್ಟಿತು. ತಮ್ಮ ಮರೆವಿಗೆ ತಮ್ಮನ್ನು ತಾವೇ ಬೈದುಕೊಂಡರು. ತಾನು ಎಷ್ಟೋ ಪ್ರೀತಿಯಿಂದ ಮಗನನ್ನು ಆಶೀರ್ವದಿಸೋಣವೆಂದು ಬಂದು, ಅವನ ಬಾಯಿ ಕಹಿ ಮಾಡಿದ್ದರು. "ಇದು

ಅವನ ಬದುಕಿಗೆ ಅಪಶಕುನವಾಗದಿರಲಿ ದೇವರೇ" ಎಂದು ದೇವರನ್ನು ಪ್ರಾರ್ಥಿಸಿದರು ಸುಂದರಮ್ಮ.

"ಅಲ್ಲವೇ ಮತ್ತೆ, ಎಲ್ಲರಿಗಿಂತ ಮುಂಚೆ ಅವನಿಗೆ ಕೊಡೋಣಾಂತ ಅಂದುಕೊಂಡರೆ ಇನ್ನೇನಾಗುತ್ತೆ? ಅಮ್ಮಾ, ದೇವರು ಯಾರಿಗೆ ಪಕ್ಷಪಾತ ಬುದ್ಧಿ ಇದ್ದರೂ ಸಹಿಸುತ್ತಾನಂತೆ. ಹೆತ್ತತಾಯಿ ಪಕ್ಷಪಾತ ಬುದ್ಧಿ ತೋರಿಸಿದರೆ ಮಾತ್ರ ಸಹಿಸೊಲ್ಲವಂತೆ, ನಿಜಾನೆ ಆಯಿತು ನೋಡು" ಎಂದು ತಾಯಿಯನ್ನು ರೇಗಿಸಿದ ಪ್ರಕಾಶ.

"ಚಿಕ್ಕ ಮಗುವಿನಂತಾಡ್ತೀಯಲ್ಲೋ ಪ್ರಕಾಶ. ನಿನಗೆ ಹುಳಿ, ಕಹಿ ಎರಡೂ ಇಷ್ಟವಿಲ್ಲ ತಾನೇ? ಬೆಲ್ಲದ ಚೂರು ಪ್ರಸಾದ ನಿನಗಾಗಿ ಇಟ್ಟಿದೀನಿ. ಬಾ ತಗೋ" ಎಂದಳು ಕನಕ.

ಪ್ರಕಾಶ ಸರ್ರನೆ ರೂಮಿನೊಳಕ್ಕೆ ಹೋಗಿ ಒಂದು ಕಾಗದದ ಪ್ಯಾಕೆಟ್ ತಂದ.

ಅತ್ತಿಗೆ ಕೊಟ್ಟ ಪ್ರಸಾದ ತೆಗೆದುಕೊಂಡು ಪ್ಯಾಕೆಟ್ ಆಕೆಯ ಕೈಯಲ್ಲಿಟ್ಟು ಬಾಗಿ ನಮಸ್ಕರಿಸಿದ.

"ಇದೇನೋ ಪ್ರಕಾಶ?"

"ನೋಡಿ" ಎಂದ ಪ್ರಕಾಶ, ಕಿರುನಗೆ ನಗುತ್ತಾ.

ಕನಕ ಪ್ಯಾಕೆಟ್ ಬಿಚ್ಚಿ ನೋಡಿದಳು. ಅದು ತಿಳಿನೀಲಿ, ಹಸಿರು ಬೆರೆತ ನೂಲು ಸೀರೆ.

"ನಂಗ್ಯಾಕೋ?" ಎಂದಳು ಕನಕ

"ಅತ್ತಿಗೆ, ನೀವು ನಮ್ಮ ಮನೆಗೆ ಮೊದಲ ಸಲ ಬಂದಾಗ ಈ ತರಹದ ಸೀರೆ ಉಟ್ಟಿದ್ದಿರಿ. ಮಿಕ್ಕ ವಿಷಯಗಳೇನೂ ನನಗೆ ನೆನಪಿಲ್ಲದಿದ್ದರೂ ಈ ಸೀರೆಯ ಬಣ್ಣ ಮಾತ್ರ ಚೆನ್ನಾಗಿ ನೆನಪಿದೆ. ಈ ತರದ ಸೀರೆ ನೀವು ಉಟ್ಟಿಕೊಂಡದ್ದನ್ನು ಮತ್ತೆ ನೋಡಬೇಕೆಂಬುದು ನನ್ನ ಬಹಳ ವರ್ಷದ ಆಸೆ. ನಿನ್ನೆ ಅಕಸ್ಮಾತ್ತಾಗಿ ಒಂದು ಅಂಗಡಿಯಲ್ಲಿ ಈ ಸೀರೆ ಕಾಣಿಸಿತು. ತಂದುಬಿಟ್ಟೆ. ನೀವು ಉಟ್ಟುಕೊಳ್ಳಿ. ನನಗೆ ಹೊರಗೆ ಕೆಲಸವಿದೆ. ನೋಡಿ ಹೊರಟು ಹೋಗುತ್ತೇನೆ" ಎಂದ ಪ್ರಕಾಶ ಉತ್ಸಾಹದಿಂದ.

ಕನಕ ತಪ್ಪುಮಾಡಿದವಳಂತೆ ನಿಂತುಬಿಟ್ಟಿದ್ದಳು. ಮನೆಯಲ್ಲಿ ಇಬ್ಬರು ಹೆಣ್ಣುಮಕ್ಕಳಿರುವಾಗ ತಾನು ಹೊಸ ಸೀರೆ ಉಟ್ಟರೆ ಚೆನ್ನಾಗಿರುತ್ತದೆಯೇ?

"ಉಟ್ಟುಕೋ ಅತ್ತಿಗೇ, ಅವನು ಅಭಿಮಾನದಿಂದ ಕಾದಿದಾನೆ" ಎಂದಳು ಜಾನಕಿ.

"ನನಗೇಕೆ? ನೀನಾಗಲೀ, ಶಾಂತನಾಗಲೀ ಉಟ್ಟುಕೊಳ್ಳಿ" ಎಂದಳು ಜಾನಕಿ.

ಬಾಯಲ್ಲಿ ಹೇಳಿದರೂ ಅವಳ ಮನಸ್ಸು ಸೀರೆಯನ್ನು ಬಿಟ್ಟು ಕದಲಲಿಲ್ಲ. ಆ ಸೀರೆಯ ಬಣ್ಣದಲ್ಲಿ ಆಕೆ ಅನುಭವಿಸಿದ ಎಷ್ಟೋ ಮಧುರ ಭಾವನೆಗಳು ತುಂಬಿದ್ದುವು. ತಂದೆ, ತಾಯಿ, ಒಡಹುಟ್ಟಿದವರು, ಅತ್ತೆಯ ಮನೆಯಲ್ಲಿ ಕಾಲಿಟ್ಟ ಮೊದಲ ದಿನಗಳ ನೆನಪು ಅದರಸುತ್ತಲೂ ಸುತ್ತುತ್ತಿದ್ದುವು. ಎಷ್ಟೋ ಸಲ ಗಂಡನನ್ನು ಆ ತರಹದ ಸೀರೆ ತರುವಂತೆ ಕೇಳಬೇಕೆಂದುಕೊಳ್ಳುತ್ತಿದ್ದಳು. ಆದರೆ ಏನೇನೋ ಅಡಚಣೆಗಳಿಂದಾಗಿ ಆ ಅವಕಾಶವೇ ಬಂದಿರಲಿಲ್ಲ. ತನಗೆ ಆ ಸೀರೆಯ ಮೇಲಿದ್ದ ಆಸೆ ಪ್ರಕಾಶನಿಗೆ ಹೇಗೆ ಗೊತ್ತಾಯಿತು—ಎಂದುಕೊಂಡಳು.

"ನಮಗೇಕೆ ಬಿಡತ್ತಿಗೆ. ನಮ್ಮ ಮೇಲೆ ಅಭಿಮಾನವಿದ್ದಿದ್ದರೆ ನಮಗೂ ತರುತ್ತಿದ್ದ. ನಿಂಗೋಸ್ಕರ ತಂದಿದ್ದು ನೀನೇ ಉಟ್ಟುಕೋ" ಎಂದಳು ಶಾಂತ ಮುಖದಪ್ಪಗೆ ಮಾಡಿಕೊಂಡು.

ಈ ವಿಷಯದಲ್ಲಿ ಪ್ರಕಾಶ ತಪ್ಪುಮಾಡಿದ ಎನ್ನಿಸಿತು ಜಾನಕಿಗೆ. ಹೊಸ ಬಟ್ಟೆ, ಆಭರಣಗಳೆಂದರೆ ಶಾಂತನಿಗಿದ್ದ ಹಂಬಲ ತಿಳಿದೂ ಕೂಡಾ, ಹಬ್ಬದ ದಿನ ಅತ್ತಿಗೆಗೆ ಮಾತ್ರ ಸೀರೆ ತಂದದ್ದು ಸರಿಯಲ್ಲವೆನಿಸಿತು ಅವಳಿಗೆ. ಪ್ರಕಾಶ ಅಷ್ಟುದೂರ ಆಲೋಚಿಸಿರಲಾರ. ಮನಸಿನಲ್ಲಿದ್ದ ಬಣ್ಣದ ಸೀರೆ ಕಂಡಕೂಡಲೇ ಹಿಂದೆಮುಂದೆ ಆಲೋಚಿಸದೆ ತಂದುಬಿಟ್ಟಿದ್ದಾನೆ ಎಂದುಕೊಂಡಳು ಜಾನಕಿ.

ಪ್ರಕಾಶ ಹಿಂದಿರುಗಿ ಬಂದು, "ಅತ್ತಿಗೇ, ಇನ್ನೂ ಹೊಸ ಸೀರೆ ಉಡಲಿಲ್ಲವೇ?" ಎಂದ.

"ಶಾಂತನಿಗೂ ಯಾವುದಾದರೂ ತರಬಾರದಿತ್ತೇ?" ಎಂದಳು ಜಾನಕಿ ವಿಷಯ ವಿವರಿಸುತ್ತಿರುವಂತೆ.

"ಅರೆರೆ....ಎಂಥ ಕೆಲಸ ಆಯಿತಲ್ಲಾ, ಸರಿ ಸರಿ. ಈಗ ತಾನೇ ಏನು ಮುಳುಗಿಹೋಯಿತು. ಹಬ್ಬ ಇನ್ನೂ ಬೇಕಾದಷ್ಟು ಹೊತ್ತಿದೆ. ಈಗಲೇ ಹೋಗಿ ತರುತ್ತೇನೆ" ಎಂದ ಪ್ರಕಾಶ.

ಶಾಂತನ ಮುಖ ಊರಗಲವಾಯಿತು. ತನಗೆ ಬೇಕಾದ ಸೀರೆಯಬಣ್ಣ, ಅಂಚು, ಸೆರಗು ಇವುಗಳನ್ನು ಕುರಿತು ವಿವರವಾಗಿ ಹೇಳತೊಡಗಿದಳು.

ಕನಕ ಒಳಕ್ಕೆ ಹೋಗಿ ಹೊಸಸೀರೆ ಉಟ್ಟು ಬಂದಳು. ಪ್ರಕಾಶ ಅತ್ತಿಗೆಯನ್ನು ಕಣ್ಣುತುಂಬಾ ನೋಡುತ್ತಾ "ಅತ್ತಿಗೇ, ಉಗಾದಿಗೆ ಪ್ರತಿಸಲವೂ ನೀವು ಈ ತರಹದ ಸೀರೆ ಉಡಬೇಕೂಂತ ನನ್ನನ್ನಾಶೀರ್ವದಿಸಿ" ಎಂದ.

ಕನಕ ಆಶ್ಚರ್ಯದಿಂದ "ನಾನು ಸೀರೆ ಉಟ್ಕೊಕೋಬೇಕೊಂತ ನಿನ್ನನ್ನು ಆಶೀರ್ವದಿಸೋದೇನು ಬಂತೋ?" ಎಂದಳು.

"ಹೌದು ಮತ್ತೆ. ನನ್ನ ಸಂಪಾದನೆ ಚೆನ್ನಾಗಿದ್ದರಲ್ಲವೇ? ನಾನು ನಿಮಗೆ ಸೀರೆ ಕೊಳ್ಳೋದು? ಈ ಬಣ್ಣ ನನಗೂ ನಿಮಗೂ ಮಾತ್ರವೇ ಇಷ್ಟಾಂತ ಕಾಣುತ್ತೆ. ನಾನು ಈ ಸೀರೆ ತಗೋತಾ ಇದ್ದರೆ ಅಲ್ಲಿದ್ದ ಹುಡುಗಿಯರು ನನ್ನನ್ನು ವಿಚಿತ್ರಮೃಗವನ್ನು ನೋಡುವಂತೆ ನೋಡಿದರು. ನಾನಲ್ಲದೆ ಬೇರೆ ಯಾರೂ ನಿಮಗೀ ಬಣ್ಣದ ಸೀರೆ ತಂದುಕೊಡೊಲ್ಲ" ಎಂದ ಪ್ರಕಾಶ.

"ನೀನು ದೊಡ್ಡ ವ್ಯಾಪಾರಸ್ಥನಾದರೂ ಅತ್ತಿಗೆಗೆ ಈ ತರಹದ ನೂಲು ಸೀರೇನೇ ತರುತ್ತೀಯೇನು?" ಎಂದಳು ಜಾನಕಿ.

"ನೂಲಿನ ಸೀರೆ ಅಲ್ಲದಿದ್ದರೆ ರೇಷ್ಮೆ ಸೀರೆ. ಆದರೆ ಬಣ್ಣ ಮಾತ್ರ ಇದೇ" ಎಂದು ನಗುತ್ತಾ ಹೊರಟುಹೋದ ಪ್ರಕಾಶ.

"ಅಣ್ಣಾ, ನನ್ನ ಸೀರೆ...." ಶಾಂತ ಕೂಗಿ ಹೇಳಿದಳು.

"ಅದಕ್ಕೇ ಹೋಗ್ತಿದೀನಿ. ಸೀರೆ ತಗೊಂಡೇ ಬರ್ತೀನಿ" ಎಂದ ಪ್ರಕಾಶ, ಹೊಸಿಲು ದಾಟುತ್ತಾ.

ತಂಗಿಯನ್ನು ನೋಯಿಸಲಾರದೆ ಹಾಗೆ ಹೇಳಿದ್ದ ಪ್ರಕಾಶ. ಆದರೆ ಅವನ ಕೈಯಲ್ಲಿ ಚಿಲ್ಲರೆಯ ಹೊರತು ಬೇರೆ ಹಣವಿರಲಿಲ್ಲ. ತನ್ನ ಹತ್ತಿರ ಇದ್ದ ಹಣದಲ್ಲಿ ಅತ್ತಿಗೆಗೆ ಸೀರೆ ಕೊಂಡುಕೊಂಡಿದ್ದ. ಸಾಲ ತರೋದು ಅವನಿಗೆ ಅಭ್ಯಾಸವಿರಲಿಲ್ಲ. 'ಹಣವಿದ್ದ ದಿನ ಖರ್ಚುಮಾಡು. ಇಲ್ಲದ ದಿನ ಕೋರಿಕೆಗಳನ್ನು ಮುಂದಕ್ಕೆ ಹಾಕು' ಎಂಬುದೇ ಅವನ ನಿನಾದ.

ತುರ್ತು ಪರಿಸ್ಥಿತಿಯಲ್ಲಿ ದೊಡ್ಡದೊಡ್ಡ ಸಂಸ್ಥೆಗಳೂ ಸಹ ಕೆಲವು ನಿಯಮಗಳನ್ನು ಅನುಸರಿಸಬೇಕಾಗಿಲ್ಲವೆಂದು ತೀರ್ಮಾನಿಸುತ್ತವೆ. ಆದ್ದರಿಂದ ಆ ದಿನ ಹಣ 'ಇಲ್ಲ'ದ ದಿನವಾದರೂ ಶಾಂತನಿಗೋಸ್ಕರ ಹದಿನೈದು ರೂಪಾಯಿ ಖರ್ಚುಮಾಡಲು ನಿರ್ಧರಿಸಿದ ಪ್ರಕಾಶ. ಅಭ್ಯಾಸಬಲದಿಂದ ಅವನ ಕಾಲು ಅವನನ್ನು ಅಪ್ಪಣ್ಣನ ಅಂಗಡಿಯ ಮುಂದೆ ನಿಲ್ಲಿಸಿದುವು. ಮುಚ್ಚಿದ್ದ ಅಂಗಡಿಯ ಬಾಗಿಲನ್ನು ನೋಡಿ ಅವನಿಗೆ ವಿಷಯ ನೆನಪಾಯಿತು. ಅಪ್ಪಣ್ಣ ಯಾರೋ ಬಂಧುಗಳ ಮನೆಯಲ್ಲಿ ಮದುವೆಯೆಂದು ಊರಿಗೆ ಹೋಗಿದ್ದ. ಹಿಂತಿರುಗಿ ಬರಲು ಎರಡು ದಿನ ಬೇಕಾಗಿತ್ತು.

ಪ್ರಕಾಶ ಮತ್ತೆ ಪೇಟೆಯ ಕಡೆ ಹೊರಟ. ಗಾಜಿನ ಬೀರುಗಳಲ್ಲಿ ಅಣಿಯಾಗಿ ಜೋಡಿಸಿದ್ದ ನೂಲುಸೀರೆಗಳು, ಮಿಲ್ ಸೀರೆಗಳು, ರೇಷ್ಮೆ ಸೀರೆಗಳು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದುವು. ಅಂಗಡಿಗಳ ಮುಂದಿನಿಂದ ಹಾದು

ಹೋದ ಪ್ರಕಾಶ. ಒಳಕ್ಕೆ ಕಾಲಿಡಲು ಅವನಿಗೆ ಆತ್ಮಾಭಿಮಾನ ಅಡ್ಡ ಬಂದಿತ್ತು. ಮನೆಗೆ ಹೋಗಿ, 'ಈ ದಿನ ತರಲಾಗಲಿಲ್ಲ, ನಾಳೆನಾಡಿದ್ದು ತರುತ್ತೇನೆ' ಎಂದು ಹೇಳಿಬಿಡೋಣವೆಂದು ಹಿಂದಿರುಗಿದ. ಅಷ್ಟರಲ್ಲಿ ದೂರದಿಂದಲೇ ತನಗಾಗಿ ಆಸೆಯಿಂದ ಎದುರುನೋಡುತ್ತಿರುವ ಶಾಂತನ ಮುಖ ಮನಸಿನಲ್ಲಿ ಪ್ರತ್ಯಕ್ಷ ವಾಯಿತು.

ಧೈರ್ಯ ಮಾಡಿ ಒಂದು ಅಂಗಡಿಯಲ್ಲಿ ಕಾಲಿಟ್ಟ. ಕೊನೆಯ ಗಳಿಗೆ ಯವರೆಗೂ ದುಡ್ಡಿಗೋಸ್ಕರ ಪ್ರಯತ್ನಿಸಿ, 'ಇನ್ನು ಪ್ರಯೋಜನವಿಲ್ಲ, ಹಬ್ಬ ಕಳೆದುಹೋಗುತ್ತಿದೆ' ಎಂದು ಸಾಲಕ್ಕೋಸ್ಕರ ಹೊರಟ ಜನಗಳಿಂದ ಆ ಅಂಗಡಿ ಕಿಕ್ಕಿರಿದಿತ್ತು.

ಹಬ್ಬದ ದಿನ ಬರೀ ಸಾಲದ ಗಿರಾಕಿಗಳನ್ನು ಕಂಡು ಅಂಗಡಿಯವನಿಗೆ ಬೇಸರವಾಗಿತ್ತು. ವರ್ಷದ ಮೊದಲ ದಿನ, ಮೊದಲ ಹಬ್ಬದ ದಿನ ಬಂದ ಗಿರಾಕಿಗಳನ್ನು ಬಿಡಲಾರದೆ, ಕಟ್ಟಿಕೊಂಡರೆ ಮತ್ತೆ ಸಾಲ ವಸೂಲು ಮಾಡೋದು ಹೇಗಪ್ಪಾ ಎಂದೂ ಅಂಗಡಿಯ ಯಜಮಾನ ಸಂದಿಗ್ಧ ಸ್ಥಿತಿ ಯಲ್ಲಿ ಸಿಕ್ಕಿದ್ದ.

ಪ್ರಕಾಶ ಸೀರೆಯೊಂದನ್ನು ಆರಿಸಿಕೊಂಡು ಕೌಂಟರಿನ ಮುಂದೆ ನಿಂತ. ಅವನ ಮುಂದಿದ್ದವರಲ್ಲಿ ಕೆಲವರು ಹಣ ಕೊಟ್ಟರು. ನಾಲ್ಕಾರು ಜನ ಲೆಕ್ಕದಲ್ಲಿ ಬರೆಸಿದರು. ಪ್ರಕಾಶನ ಮುಂದಿದ್ದವನು, "ಲೆಕ್ಕದಲ್ಲಿ ಬರೆದುಕೊಳ್ಳಿ" ಎಂದ ಕೂಡಲೇ ಅಂಗಡಿಯವನು ಕೋಪದಿಂದ, "ಅಂಗಡಿಲಿರೋ ಸರಕನ್ನೆಲ್ಲಾ ಸಾಲ ಕೊಟ್ಟರೆ ನಾವು ವ್ಯಾಪಾರ ಮಾಡೋದು ಹೇಗಯ್ಯಾ" ಎಂದು ರೇಗಿದ.

ಪ್ರಕಾಶ ಸೀರೆ ಕೊಳ್ಳಲು ಬಂದುದಕ್ಕಾಗಿ ತನ್ನನ್ನು ತಾನು ನಿಂದಿಸಿ ಕೊಂಡ. ಪ್ರತಿಯೊಂದಕ್ಕೂ ಹಠಹಿಡಿಯುವ ಶಾಂತಳನ್ನು ಬೈದುಕೊಂಡ. ಹಿಂದಿನ ದಿನ ಆ ಸೀರೆ ತನ್ನ ಕಣ್ಣಿಗೆ ಬಿದ್ದ ಸಮಯವನ್ನೂ, ಸ್ಥಳವನ್ನೂ ನಿಂದಿಸಿಕೊಂಡ. ತಾನೇಕೆ ಆ ರಸ್ತೆಗೆ ಹೋಗಿದ್ದೆ ಎಂದು ಆಲೋಚಿಸುತ್ತಿರು ವಾಗಲೇ ಅವನ ಸರದಿ ಬಂದಿತ್ತು.

ಅಂಗಡಿಯವನು ಸೀರೆಯ ಬೆಲೆ ನೋಡಿ ಬಿಲ್ ಬರೆಯಹೋದಾಗ "ಬಾಕಿ ಬರೆದುಕೊಳ್ಳಿ" ಎಂದ ಪ್ರಕಾಶ. ಆತ ಪ್ರಕಾಶನ ಕಡೆ ನಿಧಾನವಾಗಿ ನೋಡಿ ತನ್ನಲ್ಲಿ ತಾನೆ ಗೊಣಗಿಕೊಳ್ಳುತ್ತಾ ಬರೆಯತೊಡಗಿದ. ಆ ಮಾತು ಪ್ರಕಾಶನಿಗೆ ಕೇಳಿಸದಿದ್ದರೂ ಭಾವ ಅರ್ಥವಾಗಿತ್ತು.

"ಹೆಚ್ಚು ದಿನ ಮಾಡುವುದಿಲ್ಲ. ಒಂದೆರಡು ದಿನದಲ್ಲಿಯೇ ಕೊಟ್ಟುಬಿಡು ತ್ತೇನೆ" ಎಂದ ಪ್ರಕಾಶ.

ಬಿಲ್ಲು ಬರೆದು ಸರ್‍ರನೆ ಹರಿದು ಪ್ರಕಾಶನ ಕಡೆ ತಳ್ಳಿದ ಆತ.

ಪ್ರಕಾಶ ಸೀರೆ ಕೈಲಿ ಹಿಡಿದು ಮನೆ ಸೇರುವ ವೇಳೆಗೆ ತುಂಬಾ ಹೊತ್ತಾಗಿತ್ತು. ಮನೆಯಲ್ಲಿ ಹೆಚ್ಚು ಕಡಿಮೆ ಎಲ್ಲರದೂ ಊಟವಾಗಿತ್ತು.

"ಶಾಂತ ಎಲ್ಲಿ?" ಎಂದ ಪ್ರಕಾಶ.

"ಈವತ್ತು ಶಾರದ ಅವಳನ್ನ ಊಟಕ್ಕೆ ಕರೆದಿದಾಳಂತೆ. ನೀನು ಸೀರೆ ತರ್‍ತೀಯೋನೋ ಉಟ್ಕೊಂಡು ಹೋಗೋಣಾಂತ ಕಾದೂ, ಕಾದು ಈಗ ತಾನೇ ಹಳೇ ಸೀರೇನೇ ಉಟ್ಕೊಂಡು ಹೋದಳು. ಪೇಟೆಗೆ ಹೋದೋನು ಇಷ್ಟು ಹೊತ್ತೇ ಮಾಡೋದು? ನೀನೇನು ನೂರಾರ್‍ರೂಪಾಯಿ ವ್ಯಾಪಾರ ಮಾಡಬೇಕಿತ್ತೇ? ಒಂದು ಸೀರೆ ತರೋಕೆ ಇಷ್ಟು ಹೊತ್ತು ಬೇಕೇ? ಇನ್ಯಾವಾಗ ಉಟ್ಕೋತಾಳೆ ಪಾಪ! ಹಬ್ಬ ಮುಗಿದಮೇಲೇನು?" ಎಂದರು ಸುಂದರಮ್ಮ.

"ಜೇಬಿನಲ್ಲಿ ದುಡ್ಡು, ಮನೆ ಮುಂದೆ ಕಾರು ಇದ್ದರೆ ಬೇಕಾದ ವಸ್ತು ಐದು ನಿಮಿಷದಲ್ಲಿ ತರಬಹುದು. ನಾನಷ್ಟು ಹಣವಂತನಲ್ಲ" ಎನ್ನುತ್ತಾ ಮತ್ತೆ ಹೊಸಿಲು ದಾಟುತ್ತಿದ್ದ ಪ್ರಕಾಶನನ್ನು, "ಊಟಮಾಡಿ ಹೋಗೋ" ಎಂದು ಕೂಗಿದಳು ಜಾನಕಿ.

"ಶಾಂತನಿಗೆ ಸೀರೆ ಕೊಟ್ಟು ಬರ್‍ತೀನಕ್ಕಾ. ಶಾರದನ ಮನೆಗೆ ತಾನೇ ಹೋಗಿರೋದು?"

"ಹೂಂ. ಊಟಮಾಡಿ ಹೋಗಬಾರದೇನೋ?"

"ಈಗಲೇ ಬಂದುಬಿಡ್ತೀನಿ" ಎನ್ನುತ್ತಾ ಬೇಗಬೇಗ ಹೊರಟ ಪ್ರಕಾಶ.

ಬೀದಿ ಬಾಗಿಲಲ್ಲೇ ಶಾರದನ ತಾಯಿ ಕಾಣಿಸಿದರು.

"ನಮ್ಮ ಶಾಂತ ಇದಾಳಾ? ಕರೀತೀರಾ" ಎಂದ ಪ್ರಕಾಶ ವಿನಯದಿಂದ.

"ಶಾಂತಾನೇ ನಮ್ಮನೇಗೆ ಬರ್‍ಲಿಲ್ಲವಲ್ಲಾ. ಶಾರದ ಊಟಮಾಡಿ ರುಕ್ಮಿಣಿ ಮನೆಗೆ ಹೋಗಿದಾಳೆ" ಎಂದರು ಆಕೆ.

ಪ್ರಕಾಶನಿಗೆ ಆಶ್ಚರ್ಯವಾಯಿತು. ಶಾರದ ಊಟಕ್ಕೆ ಕರೆದಿದಾಳೆ ಅಂತ ಶಾಂತ ಹೇಳಿದರೆ ಈಕೆ ಶಾರದ ಊಟಮಾಡಿ ಹೋಗಿದಾಳೆ ಅಂತಾರಲ್ಲಾ ಅಂದುಕೊಂಡ. ಶಾರದನ್ನ ಕೇಳಿದರೆ ವಿಷಯ ತಿಳಿಯುತ್ತದೆಯೆಂಬ ಉದ್ದೇಶದಿಂದ ರುಕ್ಮಿಣಿಯ ಮನೆಯ ಅಡ್ರಸ್ ತಿಳಿದುಕೊಂಡು ಅಲ್ಲಿಂದ ಹೊರಟ. ಪ್ರಕಾಶ ಅಲ್ಲಿಗೆ ಹೋಗುವ ವೇಳೆಗೆ ಶಾರದ-ರುಕ್ಮಿಣಿ ಮ್ಯಾಟನಿ ಷೋಗೆ ಹೋಗಿದಾರೆಂದು ತಿಳಿಯಿತು. ಅವರೊಂದಿಗೆ ಶಾಂತ ಇದಾಳೋ ಇಲ್ಲವೋ ಅವರಿಗೆ ಗೊತ್ತಿರಲಿಲ್ಲ.

ಹಿಂತಿರುಗಿ ಮನೆಗೆ ಹೋಗೋಣವೆಂದುಕೊಂಡ ಪ್ರಕಾಶ ಮನಸ್ಸು ಬದಲಾಯಿಸಿಕೊಂಡು ಸಿನಿಮಾ ಹಾಲಿನ ಕಡೆ ಹೆಜ್ಜೆಹಾಕಿದ. ಹನ್ನೆರಡು ಗಂಟೆಯ ಆಟ ಬಿಡಲು ಇನ್ನೂ ಸಮಯವಿತ್ತು. ಪಕ್ಕದ ಹೋಟೆಲಿನಲ್ಲಿ ಕಾಫಿ ಕುಡಿದು ಬಂದ. ಸ್ವಲ್ಪ ಹೊತ್ತು ಕಾದನಂತರ ಸಿನಿಮಾ ಮುಗಿದು ಜನ ಹೊರ ಬರಲಾರಂಭಿಸಿದರು. ಗೇಟಿನ ಪಕ್ಕದಲ್ಲಿ ನಿಂತು ನೋಡತೊಡಗಿದ ಪ್ರಕಾಶ. ದೂರದಲ್ಲಿ ಶಾರದ-ರುಕ್ಮಿಣಿ ಬರುತ್ತಿರುವುದು ಕಾಣಿಸಿತು.

ಹತ್ತಿರ ಬಂದನಂತರ, "ನಮ್ಮ ಶಾಂತ ನಿನ್ನೊಂದಿಗೆ ಬರಲಿಲ್ಲವೇ?" ಎಂದು ಕೇಳಿದ.

"ಇಲ್ಲಾರಿ. ಈವತ್ತು ಸಿನಿಮಾಗೆ ಹೋಗೋಣಾಂತ ಕರೆದರೆ ನಿಮ್ಮ ಬಂಧುಗಳ ಮನೇಲಿ ಏನೋ ಶುಭಕಾರ್ಯ ಇದೆಯಂತಲ್ಲಾ. ಅಲ್ಲಿಗೆ ಹೋಗಬೇಕೂಂದಳು" ಎಂದಳು ಶಾರದ.

ಬೆಳಗಿನಿಂದ ತಿಂಡಿ ತಿನ್ನದೆ ಅಲೆಯುತ್ತಿದ್ದ ಪ್ರಕಾಶನಿಗೆ ತಲೆ ತಿರುಗಿದಂತಾಯಿತು. ಸ್ವಲ್ಪ ಹೊತ್ತು ಹಾಗೆಯೇ ನಿಂತುಬಿಟ್ಟ. ಸಿನಿಮಾಕ್ಕೆ ಬಂದವರೆಲ್ಲಾ ಒಳಕ್ಕೆ ಹೊರಟುಹೋದರು. ಸ್ವಲ್ಪ ಹೊತ್ತಿಗೆ ಮುಂಚೆ ಮನುಷ್ಯರಿಂದ ಕಿಕ್ಕಿರಿದಿದ್ದ ಸ್ಥಳ ಖಾಲಿಯಾಗಿ ವಿಶಾಲವಾಗಿ ಕಾಣಿಸುತ್ತಿತ್ತು.

ಆ ದಿನ ಪ್ರಕಾಶ ಎಷ್ಟು ಉತ್ಸಾಹದಿಂದ ಎದ್ದಿದ್ದನೋ ಅಷ್ಟೇ ಬೇಸರ ಬಂದಿತ್ತು. ಶಾಂತನಿಗಾಗಿ ಕೊಂಡ ಸೀರೆ ಅವಳಿಗೆ ಕೊಡಲಾರದೆ ಹೋದೆನಲ್ಲ ಎಂಬ ಚಿಂತೆಯೊಂದು ಕಡೆ, ಶಾರದನ ಮನೆಗೆ ಹೋಗುತ್ತೇನೆಂದು ಸುಳ್ಳು ಹೇಳಿ ಶಾಂತ ಎಲ್ಲಿ ಹೋಗಿರಬಹುದು ಎಂಬ ಸಂದೇಹ—ಎಲ್ಲಾ ಸೇರಿ ಅವನ ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು.

ಇನ್ನು ಮನೆಯ ಕಡೆ ಹೋಗಬೇಕೆನಿಸಲಿಲ್ಲ, ಪ್ರಕಾಶನಿಗೆ. ಶಾಂತನಿಗಿಂತ ಮುಂಚೆ ತಾನು ಮನೆಗೆ ಹೋದರೆ ಇದನ್ನೆಲ್ಲಾ ಹೇಳಬೇಕಾಗುತ್ತೆ. ಪ್ರತಿಯೊಂದು ವಿಷಯಕ್ಕೂ ರಾದ್ಧಾಂತ ಮಾಡುವ ಅಣ್ಣ ಇದಕ್ಕೇನು ಗಲಾಟೆ ಮಾಡುತ್ತಾನೋ ಸ್ವಲ್ಪ ಹೊತ್ತು ಅಂಗಡಿಯಲ್ಲಿ ಕುಳಿತಿದ್ದು ಹೋದರೆ ಅಷ್ಟು ಹೊತ್ತಿಗೆ ಶಾಂತ ಮನೆಗೆ ಬಂದಿರಬಹುದು. ತಾನೇನೂ ಹೇಳಬೇಕಾದ ಅವಶ್ಯಕತೆ ಇರೋಲ್ಲ ಎನಿಸಿತು.

ಯಾವುದೋ ಪುಸ್ತಕ ಓದುತ್ತಾ ಬೆಂಚಿನ ಮೇಲೆ ಮಲಗಿದ್ದ ಪ್ರಕಾಶನಿಗೆ ತೂಕಡಿಕೆ ಬಂದು ಕಣ್ಣುಮುಚ್ಚಿದ. ಮತ್ತೆ ಎಚ್ಚರವಾಗುವ ವೇಳೆಗೆ ಬಿಸಿಲು ಇಳಿದಿತ್ತು. ಅಂಗಡಿಗೆ ಬೀಗಹಾಕಿ ಮನೆಯಕಡೆ ಹೆಜ್ಜೆ ಹಾಕಿದ.

ಪಾರ್ಕಿನಲ್ಲಿ ಜನ ವಿರಳವಾಗಿದ್ದರು. ಜನ ಗುಂಪುಗುಂಪಾಗಿ ಸೇರಲು

ಇನ್ನೂ ಸಮಯವಿತ್ತು. ರೇಡಿಯೋದಲ್ಲಿ "ಫೌಜಿ ಭಾಯಿಯೋಂಕೊ" ಕಾರ್ಯಕ್ರಮ ಪ್ರಸಾರವಾಗುತ್ತಿತ್ತು. ಪ್ರಕಾಶನಿಗೆ ದೇಶಭಕ್ತಿಗೀತೆಗಳೆಂದರೆ ತುಂಬಾ ಇಷ್ಟ. ಪಾರ್ಕಿನೊಳಕ್ಕೆ ಹೋಗಿ ಒಂದು ಬೆಂಚಿನ ಮೇಲೆ ಕುಳಿತು ಶ್ರದ್ಧೆಯಿಂದ ಕೇಳತೊಡಗಿದ. ಶಾಂತನಿಗೋಸ್ಕರ ಆಗಾಗ ತೋಟದ ಮಾಲಿಗೆ ಹತ್ತುಪೈಸೆ ಕೊಟ್ಟು ಹೂ ಕೊಂಡುಕೊಳ್ಳುತ್ತಿದ್ದುದುಂಟು. ಈ ದಿನವೂ ಮಾಲಿಗೋಸ್ಕರ ಸುತ್ತಲೂ ಹುಡುಕುತ್ತಿದ್ದ ಅವನ ದೃಷ್ಟಿ ಅಕಸ್ಮಾತ್ ಒಂದು ಕಡೆ ನಿಂತುಬಿಟ್ಟಿತು.

"ಹೌದು, ಅದು ಶಾಂತ" ಅವನ ಬುದ್ಧಿ ಎಚ್ಚರಿಸಿತು. ಮೆಲ್ಲನೆ ಆ ಕಡೆ ಹೆಜ್ಜೆ ಹಾಕಿದ. ಸೊಂಪಾಗಿ ಬೆಳೆದಿದ್ದ ಸಂಪಿಗೆ ಗಿಡಕ್ಕೆ ಒರಗಿ ಕುಳಿತಿದ್ದಳು ಶಾಂತ. ಕೈಯಲ್ಲಿದ್ದ ಕರ್ಚೀಫನ್ನು ವಿಲಾಸದಿಂದ ತಿರುಗಿಸುತ್ತಾ ಉತ್ಸಾಹದಿಂದ ಮಾತನಾಡುತ್ತಿದ್ದಳು. ಹತ್ತು ಗಜ ದೂರಕ್ಕೇ ಬೆಲೆ ಬಾಳುವ ಸೆಂಟಿನ ಪರಿಮಳ ಬರುತ್ತಿತ್ತು.

ತೆಳುವಾದ ಕೆಂಪು ತುಟಿ, ವಿಶಾಲವಾದ ಕಣ್ಣು, ಗಾಳಿಗೆ ಹಾರಾಡುತ್ತಿರುವ ಮುಂಗುರುಳು, ಆ ಮರ್ಕ್ಯುರಿ ದೀಪದ ಬೆಳಕಿನಲ್ಲಿ ಮಿರಮಿರನೆ ಹೊಳೆಯುತ್ತಿರುವ ಶರೀರ....ಯಾರನ್ನಾದರೂ ಕ್ಷಣಮಾತ್ರದಲ್ಲಿ ಆಕರ್ಷಿಸುವಂಥ ರೂಪು....ಆ ದಿನ ಅವಳ ಕಣ್ಣಿನಲ್ಲಿದ್ದ ಕಾಂತಿಯನ್ನು ಪ್ರಕಾಶ ಇದಕ್ಕೆ ಮುಂಚೆ ಎಂದೂ ನೋಡಿರಲಿಲ್ಲ.

ನಮ್ಮ ಶಾಂತ ಇಷ್ಟು ರೂಪವತಿಯೇ ಎಂದುಕೊಂಡ ಆಶ್ಚರ್ಯದಿಂದ.

ಪಕ್ಕದಿಂದ ಬರುತ್ತಿದ್ದ ಪ್ರಕಾಶನಿಗೆ ಶಾಂತನ ಕೈಗಳೊಡನೆ ಹೆಣೆದುಕೊಂಡಿದ್ದ ಮತ್ತೆರಡು ಕೈಗಳು ಕಾಣಿಸಿದುವು. ಅವಳ ಮಾತಿನೊಂದಿಗೆ ಬೆರೆತ ನಗು, ಗಂಡು ಧ್ವನಿ ಕೇಳಿಸಿತು.

"ಯಾರದು? ಯಾರದು?" ಪ್ರಕಾಶನಲ್ಲಿದ್ದ ಸನಾತನ ಹೊಂದುವ ರಕ್ತ ಸಲ ಸಲ ಕುದಿಯತೊಡಗಿತು. ಶರೀರ ಸೆಟೆದು ನಿಂತಿತು. ರೋಷ ಭುಗಿಲ್ಲನೆ ಮೇಲೆದ್ದಿತು.

ಇದೆಲ್ಲಾ ಕೇವಲ ಒಂದು ಕ್ಷಣ ಮಾತ್ರ. ಮರುಕ್ಷಣದಲ್ಲಿ ಪ್ರಕಾಶ ಚೇತರಿಸಿಕೊಂಡಿದ್ದ. ಆ ದಿನ ತನ್ನೊಡನೆ ಮಾತನಾಡುತ್ತಿದ್ದ ಅಕ್ಕನ ಭುಜದ ಮೇಲೆ ಕೈಯಿರಿಸಿ ಗೋವಿಂದಬಾಬು 'ನಡೆ ಜಾನಕಿ' ಎಂದಾಗ ತನ್ನಲ್ಲಿ ಬಾರದ ಭಾವನೆ ಈ ದಿನ ಶಾಂತನ ಕೈಗಳೊಂದಿಗೆ ಹೆಣೆದುಕೊಂಡ ಪುರುಷಹಸ್ತಗಳನ್ನು ಕಂಡಾಗ ಏಕೆ ಉಂಟಾಯಿತು ಎಂದು ಆಲೋಚಿಸಿದ. ಅದು ಅಕ್ಕ ಮತ್ತು ಶಾಂತಳ ಸ್ವಭಾವದ ಮಧ್ಯೆ ಇದ್ದ ಅಂತರದಿಂದಲೇ ಅಥವಾ ಪರಿಸರ

ಪರಿಸ್ಥಿತಿಯ ಪ್ರಭಾವದಿಂದಲೇ ಎಂದು ತನ್ನನ್ನು ತಾನು ಪ್ರಶ್ನಿಸಿಕೊಂಡ.

ತನ್ನೆದುರಿಗೆ ನಿಂತ ಪ್ರಕಾಶನನ್ನು ನೋಡಿ ಶಾಂತ ಗಾಬರಿಯಿಂದ ಎದ್ದು ನಿಂತಳು. ಆ ವ್ಯಕ್ತಿ ಒಂದು ಹೆಜ್ಜೆ ಹಿಂದಿಟ್ಟ.

"ಇವರು....ಇವರು...." ಎಂದು ಶಾಂತ ತಡವರಿಸಿದಳು.

"ಸ್ನೇಹಿತರಿರಬಹುದು" ಎಂದು ತಾನೇ ಮಾತನ್ನು ಪೂರ್ತಿಮಾಡಿದ.

"ಹೌದು, ಹೌದು. ನೀವು ಸರಿಯಾಗಿ ಊಹಿಸಿದಿರಿ. ನಾನೂ ಶಾಂತಾ ದೇವಿ ಒಳ್ಳೇ ಸ್ನೇಹಿತರು. ಚಿಕ್ಕಂದಿನಿಂದ ಒಂದೇ ಸ್ಕೂಲಿನಲ್ಲಿ ಕಲೆತು ಓದಿ ದವರು. ನಾಲ್ಕನೇ ಕ್ಲಾಸೋ ಐದನೇ ಕ್ಲಾಸೋ ಇರಬೇಕು ಅಲ್ಲವೇನ್ರೀ ಶಾಂತಾದೇವಿ...."

"ಹೌದು, ಹೌದು. ನಿಜ, ನಿಜ...." ಶಾಂತ ಕರ್ಚಿಫ್‌ನಿಂದ ಮುಖ ಒರೆಸಿ ಕೊಳ್ಳುತ್ತಾ ಹೇಳಿದಳು.

ಪ್ರಕಾಶ ಅವರಿಬ್ಬರ ಕಡೆ ನೋಡಿ ಫಕ್ಕನೆ ನಕ್ಕ. ಇಬ್ಬರೂ ಹೆದರುತ್ತಾ ಅವನ ಕಡೆ ನೋಡಿದರು.

"ನಾಲ್ಕನೇ ಕ್ಲಾಸಿನಿಂದ ಒಟ್ಟಿಗೆ ಓದಿಕೊಂಡ ಆಪ್ತಮಿತ್ರರು ಏನ್ರಿ, ಬನ್ರಿ ಎಂದು ಮಾತನಾಡುತ್ತಾರೇನು? ಆಂ....ನಿಮ್ಮ ಹೆಸರೇನೋ ನನಗೆ ತಿಳಿಯದು ಮಿಸ್ಟರ್...."

"ನನ್ನ ಹೆಸರೇ....ಸುದರ್ಶನಾಂತ...."

"ನನ್ನ ಹೆಸರು ಪ್ರಕಾಶ. ಶಾಂತಳ ಅಣ್ಣ. ನಿಮಗೇನೂ ಅರ್ಜೆಂಟ್ ಕೆಲಸವಿಲ್ಲದಿದ್ದರೆ ಕುಳಿತುಕೊಳ್ಳಿ. ನಮ್ಮ ಶಾಂತನ ಮಿತ್ರರೊಂದಿಗಿನ ಸ್ನೇಹ ನನಗೂ ಇಷ್ಟ. ಸ್ವಲ್ಪ ಹೊತ್ತು ಏನಾದರೂ ಹರಟೆಹೊಡೆಯೋಣ" ಎಂದ ಪ್ರಕಾಶ.

ಸುದರ್ಶನ ತನ್ನ ರಿಸ್ಟ್‌ವಾಚ್ ನೋಡಿಕೊಂಡು,

"ಇಲ್ಲರೀ, ನಾನು ಸ್ಟೇಷನ್ನಿಗೆ ಹೋಗಬೇಕು. ನಮ್ಮ ತಾಯಿ ಬರ್ತಾರೆ. ಇನ್ನೊಂದು ಸಲ ಸೇರೋಣ. ನಮಸ್ಕಾರ" ಎಂದು ಓಟದ ನಡಿಗೆಯಲ್ಲಿ ಹೊರಟುಹೋದ.

ಆ ವ್ಯಕ್ತಿ ಕಣ್ಮರೆಯಾಗುವವರೆಗೂ ನೋಡುತ್ತಿದ್ದು ಪ್ರಕಾಶ ಶಾಂತನ ಕಡೆ ತಿರುಗಿ,

"ಶಾಂತ, ಏನಿದು ನಾಟಕ?" ಎಂದ ಕೋಪದಿಂದ.

"ಅಲ್ಲಣ್ಣಾ, ಸುದರ್ಶನ ತುಂಬಾ ಒಳ್ಳೇವರು. ಕ್ಲಾಸಿನಲ್ಲಿ ಅವರದೇ ಫಸ್ಟ್‌ಮಾರ್ಕು. ಎಷ್ಟು ಬುದ್ಧಿವಂತರೂಂತ. ಬಿ.ಎಸ್ಸಿ. ಆದ ಕೂಡಲೇ

ಮದ್ರಾಸಿಗೆ ಹೋಗಿ ಇಂಜನಿಯರಿಂಗ್ ಓದುತ್ತಾರಂತೆ."

ಶಾಂತಳ ಮಾತನ್ನು ನಂಬಲಾಗಲಿಲ್ಲ ಪ್ರಕಾಶನಿಗೆ. ಶಾಂತನಿಗೆ ಅವನನ್ನು ಕುರಿತ ವಿವರಗಳೇನೂ ಗೊತ್ತಿಲ್ಲವೆನಿಸಿತು. ಅವನ ವೇಷಭಾಷೆಗಳನ್ನು ನೋಡಿದರೆ ಕಾಲೇಜ್ ಸ್ಟೂಡೆಂಟ್ ಅನ್ನಿಸಲಿಲ್ಲ. ಫಸ್ಟಿಯರ್ ಬಿ.ಎಸ್ಸಿ.ಯಲ್ಲಿದ್ದ ಆತ ಶಾಂತನಿಗೆ ಕ್ಲಾಸ್‌ಮೇಟಂತೂ ಅಲ್ಲವೆಂದು ನಿರ್ಧರಿಸಿಕೊಂಡ.

ಅವನನ್ನು ನೋಡಿದರೆ ಸ್ವಲ್ಪ ದುಡ್ಡಿದ್ದವನಂತೆ ಕಾಣುತ್ತಿದ್ದ. ಇದ್ದರೂ ಇರಬಹುದು. ಅದರಿಂದಲೇ ಶಾಂತ ಆಕರ್ಷಿತಳಾಗಿರುತ್ತಾಳೆ. ಎರಡು ಮೂರು ಸಲ ಹೋಟಲಿಗೆ ಕರೆದುಕೊಂಡು ಹೋಗಿ ಮತ್ತೆರಡು ಸಲ ಬಾಲ್ಕನಿ ಟಿಕೆಟ್ ತೆಗೆದು ಸಿನಿಮಾ ತೋರಿಸಿದರೆ ಸಾಕು. ಶಾಂತನಂತಹ ಚಪಲಚಿತ್ತದ ಹುಡುಗಿಯರು ಬಲೆಗೆ ಬೀಳುತ್ತಾರೆ. ಸಣ್ಣಪುಟ್ಟ ಪ್ರೆಸೆಂಟ್ಸ್ ಸಹ ಕೊಟ್ಟಿರಬಹುದು. ಇನ್ನೇನು ಬೇಕು? ಸುದರ್ಶನನಂಥ ಒಳ್ಳೆಯವರು ಮತ್ತೊಬ್ಬರಿಲ್ಲ ಅಂದುಕೋತಾಳೆ ಅವಳು, ಎಂದುಕೊಂಡ ಪ್ರಕಾಶ.

ಮಾರನೆಯ ದಿನ ಶಾಂತ ಮನೆಯಲ್ಲಿಲ್ಲದಾಗ ಅವಳ ಪೆಟ್ಟಿಗೆಯ ಬೀಗ ಹೇಗೋ ತೆಗೆದು ನೋಡಿದ. ಎರಡು ಸಿಲ್ಕ್ ಕರ್ಚಿಫ್, ಹಿಂದಿನ ದಿನ ಶಾಂತ ಹಚ್ಚಿಕೊಂಡಿದ್ದಂತಹ ಸೆಂಟ್‌ಬಾಟಲ್, ಇನ್ನೂ ಕೆಲವು ಸುಂದರವಾದ ಬ್ರೋಚ್ ಇಂತಹವು ಕಾಣಿಸಿದುವು. ಇದು ಹೊಸ ಸ್ನೇಹ ಅಲ್ಲವೆಂದೂ ಈ ನಾಟಕ ಬಹಳ ದಿನಗಳಿಂದ ನಡೆಯುತ್ತಿರಬೇಕೆಂದೂ ಊಹಿಸಿದ ಪ್ರಕಾಶ.

ಕಾಲೇಜಿಗೆ ಹೋಗಿ ಬಿ.ಎಸ್ಸಿ. ಎಲ್ಲಾ ಸಬ್ಜೆಕ್ಟುಗಳಲ್ಲಿಯೂ ಇದ್ದ ಹುಡುಗರನ್ನು ವಿಚಾರಿಸಿದ. ಅವರಲ್ಲಿ ಸುದರ್ಶನ ಎಂಬ ಹೆಸರಿನ ಹುಡುಗ ಫೈನಲ್ ಇಯರ್ ಬಿ.ಎಸ್ಸಿ ನಲ್ಲಿ ಮಾತ್ರ ಇದ್ದ. ಅದೃಷ್ಟವಶಾತ್ ಆ ಹುಡುಗನನ್ನು ಹೆಚ್ಚು ಕಷ್ಟವಿಲ್ಲದೆಯೇ ನೋಡಿದ ಪ್ರಕಾಶ. ಆದರೆ ಆ ಹುಡುಗ ಹಿಂದಿನ ದಿನ ತಾನು ಶಾಂತನೊಂದಿಗೆ ನೋಡಿದ ಹುಡುಗನಲ್ಲ. "ಸುದರ್ಶನ ಎಂಬ ಹೆಸರಿನವರು ನಾನಲ್ಲದೆ ಬೇರೆ ಯಾರೂ ಇಲ್ಲ" ಎಂದ ಆ ಹುಡುಗ.

ಹೆದರಿಕೆಯಿಂದ ಸುಳ್ಳು ಹೆಸರು ಹೇಳಿರಬೇಕೇನೋ ಎಂದು ಆ ಹುಡುಗನ ರೂಪು, ರೇಖೆಗಳನ್ನು ವರ್ಣಿಸಿ ಅಂತಹ ಹುಡುಗ ಇದಾನೆಯೇ ಎಂದು ವಿಚಾರಿಸಿದ. "ನಮಗೆ ತಿಳಿದಮಟ್ಟಿಗೆ ಅಂತಹವರು ಯಾರೂ ಇಲ್ಲಿಲ್ಲ" ಎಂದರು ವಿದ್ಯಾರ್ಥಿಗಳು.

ಆ ದಿನ ರಾತ್ರಿ ಶಾಂತನನ್ನು ಗುಟ್ಟಾಗಿ ಕರೆದು ಛೀಮಾರಿ ಹಾಕಿದ ಪ್ರಕಾಶ. ಅವನೊಂದಿಗೆ ಯಾವ ವಿಧವಾದ ಸಂಬಂಧವನ್ನೂ ಇರಿಸಿಕೊಳ್ಳಕೂಡದೆಂದೂ ಎಚ್ಚರಿಸಿದ. ಮತ್ತೊಂದು ಸಲ ಅವನ ಜತೆ ಕಾಣಿಸಿದರೆ ಮನೆ

ಯಲ್ಲಿ ಎಲ್ಲರಿಗೂ ಹೇಳಿಬಿಡುತ್ತೇನೆಂದು ಹೆದರಿಸಿದ.

"ಇಲ್ಲಣ್ಣಾ. ಆತ ಅಂಥವರಲ್ಲ. ನೀನೆಲ್ಲೋ ತಪ್ಪು ತಿಳಿದುಕೊಂಡಿದ್ದಿ." ಶಾಂತನಿಗಿನ್ನೂ ಪರದಾಟ.

"ತಪ್ಪೋ, ಒಪ್ಪೋ ನಿಂಗದೆಲ್ಲಾ ಬೇಡ. ನಾನು ಚೆನ್ನಾಗೇ ವಿಚಾರಿಸಿದೀನಿ. ನೀನು ಮಾತ್ರ ಆ ಹುಡುಗನೊಂದಿಗೆ ಎಂಥಾ ಸಂಬಂಧಾನೂ ಇಟ್ಟುಕೋಬಾರದು. ಮತ್ತೆ ಅವನನ್ನ ನೋಡೋ ಪ್ರಯತ್ನ ಮಾಡಬೇಡ. ತಿಳಿತೇನು?" ಗದ್ದರಿಸಿದಂತೆ ಮಾತನಾಡಿದ ಪ್ರಕಾಶ.

ಯಾವಾಗಲೂ ವಿದೂಷಕನಂತೆ ಮಾತನಾಡುತ್ತಾ ಮನೆಯಲ್ಲಿ ಓಡಾಡಿಕೊಂಡಿರುವ ಅಣ್ಣ ಇಷ್ಟು ಪೌರುಷವಾಗಿ ಮಾತನಾಡಬಲ್ಲನೆಂದೂ ಕಠಿಣವಾಗಿ ಆಜ್ಞಾಪಿಸಬಲ್ಲನೆಂದೂ ಶಾಂತ ತಿಳಿದಿರಲಿಲ್ಲ. ಅವಳು ಆಶ್ಚರ್ಯದಿಂದ ಚೇತರಿಸಿಕೊಂಡು ತಲೆಯೆತ್ತಿ ನೋಡುವ ವೇಳೆಗೆ ಪ್ರಕಾಶ ಅಲ್ಲಿರಲಿಲ್ಲ.

* * *

ಶಾಂತನ ಸೀರೆಗಾಗಿ ಆ ಅಂಗಡಿಯಲ್ಲಿ ಮಾಡಿದ ಸಾಲವನ್ನು ಎಷ್ಟು ಬೇಗ ತೀರಿಸಬೇಕೆಂದು ಪ್ರಕಾಶ ಆತುರಪಟ್ಟಿದ್ದನೋ ಅಷ್ಟೂ ಸಾವಕಾಶವಾಗ ತೊಡಗಿತ್ತು. ಅಪ್ಪಣ್ಣ ಬಂದ ಕೂಡಲೇ ಹಣ ತೆಗೆದುಕೊಂಡು ಸಾಲತೀರಿಸಿದ ರಾಯಿತೆಂಬ ಭರವಸೆಯಿತ್ತು ಪ್ರಕಾಶನಿಗೆ. ಆದರೆ ಅಪ್ಪಣ್ಣ ಬರುತ್ತಾ ಒಂದಿಷು ಖರ್ಚು ಮುಂದಿಟ್ಟುಕೊಂಡು ಬಂದಿದ್ದ.

"ಪ್ರಕಾಶಯ್ಯ, ಇನ್ನೊಂದೆರಡು ತಿಂಗಳು ಕೊಂಚ ಹಣ ಸಹಾಯ ಬೇಕು ನಂಗೆ" ಅಂದಿದ್ದ.

ಎಂದೂ ಅಪ್ಪಣ್ಣನ ಬಾಯಿಂದ ಹಣ ಸಹಾಯದ ಮಾತು ಕೇಳಿರಲಿಲ್ಲ ಪ್ರಕಾಶ.

"ಅಪ್ಪಣ್ಣಾ, ನಿನ್ನ ಪಾಲಿನ ಹಣ ಇಷ್ಟಿದೆ ಏನು ಮಾಡಲಿ?" ಎಂದಾಗ "ಅಸಲಿಗೆ ಸೇರಿಸಯ್ಯ" ಅನ್ನುತ್ತಿದ್ದ.

ಅಪ್ಪಣ್ಣನ ಜೀವನಕ್ಕೆ ಆ ಚಿಲ್ಲರೆ ಅಂಗಡಿಯಿಂದ ಬರುತ್ತಿದ್ದ ಲಾಭ ಸರಿಹೋಗುತ್ತಿತ್ತು. ಅವನ ಆವಶ್ಯಕತೆಗಳೂ ಕೋರಿಕೆಗಳೂ ಬಹಳ ಪರಿಮಿತವಾಗಿದ್ದುವು. ಎರಡು ಹೊತ್ತು ಊಟ, ಉಟ್ಟುಕೊಳ್ಳಲು ಎರಡು ಪಂಚೆ, ಇದ್ದರೆ ಸಾಕು. ಅಪ್ಪಣ್ಣನ ಮಗಳು ಮಾಣಿಕ್ಯಂ ಸಹ ತಂದೆಯ ಕೈಯಲ್ಲೇ ಬೆಳೆದ ಹುಡುಗಿ. ತಂದೆ ಹೇಳಿದ್ದೇ ವೇದವಾಕ್ಯ ಅವಳಿಗೆ.

"ಮೊನ್ನೆ ಊರಿಗೆ ಹೋಗಿದ್ದೆನಲ್ಲಾ ಮಾಣಿಕ್ಯಳಿಗೆ ಒಂದು ಸಂಬಂಧ

ನೋಡಿದೀನಿ. ತಾಯಿಯಿಲ್ಲದ ಮಗು, ನನ್ನ ಕೈಕಾಲು ಗಟ್ಟಿಯಾಗಿರೋ ವಾಗಲೇ ಅವಳನ್ನೊಂದು ಮನೆ ಸೇರಿಸಿದರೆ ನನಗಿನ್ನು ಯಾವ ಯೋಚನೇನೂ ಇರೊಲ್ಲ. ಆಮೇಲೆ ನಾನು ಹೇಗಿದ್ದರೂ ಪರವಾಗಿಲ್ಲ ಈ ವೈಶಾಖದಲ್ಲಿ ಮದುವೆ ಮಾಡೋಣಾಂತಿದೀನಿ. ಈ ಎರಡು ತಿಂಗಳೂ ಸ್ವಲ್ಪ...."

"ಹಾಗೇ ಆಗಲಿ ಅಪ್ಪಣ್ಣಾ. ನಿಂಗೆಷ್ಟು ಬೇಕೋ ಹೇಳು. ಬೇಕಾದರೆ ಅಂಗಡಿಯನ್ನು ಅಡವಿಟ್ಟು ಹಣ ತೆಗೆದುಕೊಳ್ಳೋಣ" ಎಂದ ಪ್ರಕಾಶ.

ಅಪ್ಪಣ್ಣ ಹಾಗೆ ಹೇಳಿದ್ದರೂ ಪ್ರಕಾಶನ ಹತ್ತಿರ ಹಣ ತೆಗೆದುಕೊಳ್ಳಲೇ ಇಲ್ಲ. ಚಿಲ್ಲರೆ ಅಂಗಡಿ ಮಾರಿ ಮದುವೆ ಮಾಡಿದ್ದ. "ಇನ್ನು ಅಂಗಡಿ ಮ್ಯಾಲೆ ಕುಳಿತು ಯಾಪಾರ ಮಾಡೋ ಶಕ್ತಿ ಇಲ್ಲಯ್ಯ. ನಿನ್ನ ಪುಸ್ತಕದ ಅಂಗಡಿ ಇದೆಯಲ್ಲಾ, ಅಲ್ಲೇ ಒಂದು ಪಕ್ಕದಾಗೆ ಕುಳಿತು ನನ್ನ ಕೈಲಾದ್ದು ಮಾಡ್ತೀನಿ" ಎಂದ. ಪ್ರಕಾಶನಿಗೂ ಈ ಏರ್ಪಾಟು ಚೆನ್ನಾಗಿದೆಯೆನ್ನಿಸಿತು. ತಾನೇನಾದರೂ ಕೆಲಸದ ಮೇಲೆ ಹೊರಗೆ ಹೋದಾಗ ಅಪ್ಪಣ್ಣ ಇದ್ದರೆ ಅಂಗಡಿ ಮುಚ್ಚ ಬೇಕಾದ ಆವಶ್ಯಕತೆಯಿರೋಲ್ಲ—ಎಂದುಕೊಂಡ.

ಅಪ್ಪಣ್ಣನ ಮಗಳ ಮದುವೆಯೂ ಆಯಿತು. ಆದರೆ ಬಟ್ಟೆ ಅಂಗಡಿ ಯಲ್ಲಿ ಮಾಡಿದ ಸಾಲ ಮಾತ್ರ ತೀರಲಿಲ್ಲ. ಕೈಯಲ್ಲಿ ಹಣವಿದ್ದಾಗಲೆಲ್ಲಾ ಯಾವುದೋ ಒಂದು ಖರ್ಚು ಬರುತ್ತಿತ್ತು. ಒಂದು ಸಲ ಸಾಲ ಮಾಡಿದವರು ಮತ್ತೆ ಅದರಿಂದ ಏಕೆ ಹೊರಕ್ಕೆ ಬರಲಾರರೋ ಈಗ ಅರ್ಥವಾಗತೊಡಗಿತ್ತು ಪ್ರಕಾಶನಿಗೆ. ಆ ವಾರದಲ್ಲಿ ಏನಾದರೂ ಸರಿ, ಸಾಲ ತೀರಿಸಬೇಕೆಂಬ ಹಠದಿಂದ ಕೆಲಸಮಾಡಿ ಹದಿನೈದು ರೂಪಾಯಿ ಕೂಡಿಟ್ಟ. ಹಣ ಕೈಯಲ್ಲಿಟ್ಟುಕೊಂಡು ಬಿಲ್ಲಿಗೋಸ್ಕರ ಹುಡುಕಿದ. ಸಿಗಲಿಲ್ಲ. ಅಂಗಡಿಯ ಹೆಸರು ನೆನಪಿತ್ತು. ಕೊಂಡ ವಸ್ತುವಿನ ನೆನಪಿತ್ತು. ಸರಿ, ಪರವಾಗಿಲ್ಲ ಎಂದು ಹೊರಟ.

ಅಂಗಡಿಯವ ಅಭ್ಯಾಸಬಲದಿಂದ, "ಏನು ಬೇಕು?" ಎಂದ ವಿನಯ ದಿಂದ.

ಪ್ರಕಾಶ ತಾನು ಬಂದ ಕೆಲಸ ಹೇಳಿದ. "ತುಂಬಾ ತಡವಾಯಿತು. ಕ್ಷಮಿಸಬೇಕು. ಹಣ ಕೊಡಿಸಲಾಗಲಿಲ್ಲ" ಎಂದ.

"ನಿಮ್ಮ ಹತ್ತಿರ ಬಿಲ್ಲಿದೆಯಾ?"

"ಇಲ್ಲ, ಎಲ್ಲೋ ಇಟ್ಟು ಮರೆತುಬಿಟ್ಟಿದೀನಿ. ಆ ದಿನ ಪುಸ್ತಕದಲ್ಲಿ ಬರೆದುಕೊಂಡಿದೀರಿ. ನೋಡಿ, ಸಿಗುತ್ತೆ" ಎಂದ.

"ಆಂ....ಆಂ ಇದೋ ನಿಮ್ಮ ಹೆಸರು....ಪ್ರಕಾಶ. ಪೇಟೇ ಬೀದೀಲಿ ಪುಸ್ತಕದ ಅಂಗಡಿ...."

"ಹುಂ. ಅದೇ."

"ಆದರೆ ನೀವು ಹಣಕೊಟ್ಟು ನಮ್ಮ ಅಂಗಡೀಲಿ ಸೀರೆ ತಗೊಂಡಿದೀರಿ. ಇನ್ಯಾವುದಾದರೂ ಅಂಗಡೀಲಿ ಬಾಕಿ ಇದೀರೇನೋ ನೋಡಿ" ಎಂದ.

ತನ್ನ ಮುಂದಿದ್ದ ಪುಸ್ತಕದಲ್ಲಿ ಪ್ರಕಾಶನ ಹೆಸರಿನ ಮುಂದೆ ಕ್ಯಾಷ್ ಸ್ಟ್ಯಾಂಪು ಹಾಕಿತ್ತು. ತಾನು ಆ ದಿನ ಹಣ ಕೊಟ್ಟಿರಲಿಲ್ಲ. ಇನ್ಯಾವ ಅಂಗಡಿಯಲ್ಲೂ ಬಟ್ಟೆ ತೆಗೆದುಕೊಂಡಿರಲಿಲ್ಲ. ತಾನು ಸಾಲ ಮಾಡಿ ಸೀರೆ ಕೊಂಡ ವಿಷಯ ಮನೆಯಲ್ಲಿ ಯಾರಿಗೂ ತಿಳಿಯದು. ಆದ್ದರಿಂದ ಬೇರಾರೂ ತೀರಿಸುವ ಅವಕಾಶವಿಲ್ಲ. ಆ ದಿನ ಬಳಲಿದ ಮುದುಕ ಗುಮಾಸ್ತನೊಬ್ಬ ಕೌಂಟರಿನ ಬಳಿ ಕುಳಿತಿದ್ದ. "ಬಾಕಿ....ಬಾಕಿ" ಎಂಬ ಮಾತಿನಿಂದ ಬೇಸರಪಟ್ಟುಕೊಂಡಿದ್ದ. ಆ ಬೇಸರದಲ್ಲಿ ತನ್ನ ಹೆಸರಿನ ಮುಂದೆ ಕ್ಯಾಷ್‌ಸ್ಟ್ಯಾಂಪ್ ಹೊಡೆದಿರಬೇಕು— ಎಂದುಕೊಂಡ ಪ್ರಕಾಶ.

ಸ್ವಲ್ಪ ಹೊತ್ತು ತಕ್ಕಡಿಯ ಮಧ್ಯದ ಮುಳ್ಳಿನಂತೆ ಪ್ರಕಾಶನ ಮನಸ್ಸು ತೂಗಿತು. "ಅವನು ಬಾಕಿ ಇಲ್ಲ ಅನ್ನುತ್ತಿದ್ದಾನಲ್ಲಾ. ಕೊಡದಿದ್ದರೇನಂತೆ. ಅಕಸ್ಮಾತ್ ಕೊಟ್ಟಿದೀನೋ ಏನೋ. ಖರ್ಚು ಮಾಡಬೇಕೂ ಅನ್ನಿಸಿದರೆ ಒಂದು ಷರ್ಟು ತಗೋಬಹುದು. ಇಲ್ಲದಿದ್ದರೆ ಅಕ್ಕನಿಗೊಂದು ಸೀರೆ ತಗೋಬಹುದು." ಮನಸ್ಸು ಪರಿಪರಿ ವಿಧವಾಗಿ ಆಲೋಚಿಸತೊಡಗಿತ್ತು.

ಮನಸ್ಸಿನಲ್ಲಿ ಹುಟ್ಟುತ್ತಿದ್ದ ಆಲೋಚನೆಗಳನ್ನು ಪಕ್ಕಕ್ಕೆ ತಳ್ಳಿ, "ಇಲ್ಲ ಸ್ವಾಮಿ, ನಾನು ಸಾಲ ತೀರಿಸಲಿಲ್ಲ" ಎಂದ ಪ್ರಕಾಶ.

ಅಂಗಡಿಯ ಯಜಮಾನ ಪ್ರಕಾಶನ ಕಡೆ ಆಶ್ಚರ್ಯದಿಂದ ನೋಡಿದ. ಈ ಕಾಲದಲ್ಲೂ ಇಂತಹವರಿದ್ದಾರೆಯೇ? ಎಂಬಂತಿತ್ತು ಅವನ ದೃಷ್ಟಿ. ಅಷ್ಟರಲ್ಲಿ ಆ ದಿನ ಪ್ರಕಾಶ ಸೀರೆ ತೆಗೆದುಕೊಂಡಾಗ ಕೌಂಟರಿನ ಬಳಿ ಇದ್ದ ವ್ಯಕ್ತಿ ಒಳಕ್ಕೆ ಬಂದ.

"ಏನಯ್ಯಾ, ಸುಂದರಯ್ಯ. ಇಷ್ಟು ಹೊತ್ತಿಗೇ ಬರೋದು?" ಎಂದ ಯಜಮಾನ—ಕಟುವಾಗಿ.

"ಇಲ್ಲ ಸ್ವಾಮಿ, ಮನೇಲಿ ಹೆಂಗಸರಿಗೆ ಮೈ ಹುಷಾರಿರಲಿಲ್ಲ. ಅಡಿಗೆ ಮಾಡಿ, ಊಟಮಾಡಿ ಬರೋ ಹೊತ್ತಿಗೆ...."—ಕೈಕೈ ಹಿಸುಕಿಕೊಳ್ಳುತ್ತಾ ಹೇಳಿದ ಆತ.

"ನೋಡು, ಇವರು ಹಣ ಬಾಕಿ ಇದೀನೀಂತಾರೆ. ಮತ್ತೆ ಲೆಕ್ಕದ ಪುಸ್ತಕದಲ್ಲಿ ಕ್ಯಾಷ್ ಮುದ್ರೆ ಇದೆ."

ತಾನು ಸರಿಯಾಗಿ ಕೆಲಸ ಮಾಡುವುದಿಲ್ಲವೆಂದು ರುಜುವಾತುಮಾಡಲು

ಯಜಮಾನ ಈ ರೀತಿ ಅನ್ನುತ್ತಿದ್ದಾನೆನ್ನಿಸಿತು, ಸುಂದರಯ್ಯನಿಗೆ.

"ಇಲ್ಲ ಸ್ವಾಮಿ, ಕ್ಯಾಷ್ ಮುದ್ರೆ ಇದ್ದರೆ ಹಣ ಕೊಟ್ಟಂತೆಯೇ ಲೆಕ್ಕ. ಅವರು ಮರೆತುಹೋಗಿರಬೇಕು. ನನ್ನ ಲೆಕ್ಕದಲ್ಲಿ ತಪ್ಪು ಎಂದೂ ಇರೋಲ್ಲ. ಲೆಕ್ಕ ತೋರಿಸಿ ನಿಮಗೆ ದಿನಾ ಹಣ ಜಮಾಕಟ್ಟುತ್ತಿದೀನಲ್ಲಾ, ಎಂದಾದರೂ ವ್ಯತ್ಯಾಸ ಬಂದಿದೆಯೇನು?" ಎಂದ ಗರ್ವದಿಂದ.

ಯಜಮಾನನಿಗೆ ಅದು ಸರಿಯೆನಿಸಿತು. ತಮ್ಮ ಹತ್ತಿರ ಲೆಕ್ಕದಲ್ಲೆಂದೂ ವ್ಯತ್ಯಾಸ ಬಂದಿಲ್ಲ. ಕೊಡುವುದರಲ್ಲಿ ಹದಿನೈದು ರೂಪಾಯಿ ಹೆಚ್ಚುಕಡಿಮೆ ಬರಲು ಸಾಧ್ಯವಿಲ್ಲ. ಸುಂದರಯ್ಯ ಕೊಡಿದ್ದನ್ನೇ ಮತ್ತೆ ಮತ್ತೆ ಕೊಡುತ್ತಾ ಇರುತ್ತಾನೆ.

"ನೀವು ಹೋಗಿ ಸ್ವಾಮಿ. ನಾನೂ ಮಕ್ಕಳೊಂದಿಗ. ನಿಮ್ಮ ಹಣ ಸುಮ್ಮಸುಮ್ಮನೆ ತೆಗೆದುಕೊಳ್ಳಲಾರೆ" ಎಂದ ಯಜಮಾನ.

ಸುಂದರಯ್ಯನಿಗೆ ಪ್ರಕಾಶನ ಮುಖ ನೋಡುತ್ತಿದ್ದಂತೆಲ್ಲಾ ಹಳೆಯ ವಿಷಯಗಳು ನೆನಪಾಗತೊಡಗಿದುವು. ಆತ ಆ ದಿನದ ಸಂಘಟನೆಗಳನ್ನು ನೆನೆಸಿ ಕೊಳ್ಳುತ್ತಿದಾನೆಂದು ಪ್ರಕಾಶ ಊಹಿಸಿದ.

"ನೋಡಿ ತಾತಾ, ಆ ದಿನ ನಾನು ಬಾಕಿ ಅಂದಕೂಡಲೇ ನೀವು ಗೊಣಗಿಕೊಳ್ಳುತ್ತಾ ಸರ್ರನೆ ನನ್ನ ಬಿಲ್ಲು ಹರಿದುಕೊಟ್ಟಿರಿ. ನನಗಿಂತ ಮುಂಚೆ ಬಹಳ ಜನ 'ಸಾಲ' ಬರೆಸಿದರು. ಉಗಾದಿಯ ದಿನ ಬೆಳಿಗ್ಗೆ....ಹನ್ನೆರಡು ಗಂಟೆಯ ಸಮಯ. ಪ್ರಕಾಶ ಆತನ ನೆನಪಿನ ಮಾಲೆಗೆ ಮುತ್ತು ಪೋಣಿಸಿದ.

ಒಂದು ಕ್ಷಣದಲ್ಲಿ ಮುದುಕನ ಮುಖ ಇಷ್ಟಗಲವಾಯಿತು.

ಮುದುಕನ ಹೆಂಡತಿ ಆಗಿನಿಂದ ಕಾಯಿಲೆ ಮಲಗಿಯೇ ಇದ್ದಳು. ಔಷಧಿಗಾಗಿ ಯಜಮಾನನನ್ನು ಕೇಳಿ ಹದಿನೈದು ರೂಪಾಯಿ ತೆಗೆದು ಕೊಂಡು ಜೇಬಿನಲ್ಲಿಟ್ಟುಕೊಂಡಿದ್ದ. ಸಾಯಂಕಾಲ ಲೆಕ್ಕ ನೋಡಿದಾಗ ಹದಿನೈದುರೂಪಾಯಿ ಕಡಿಮೆ ಬಂತು. ಎಲ್ಲಿ ಹಾಕಿದೆನೋ ಎಂದು ಸುತ್ತಲೂ ನೋಡಿದ. ಡ್ರಾಯರಿನೊಳಗೆ ಬೆಂಚಿನ ಕೆಳಗೆ ಎಲ್ಲಾ ಹುಡುಕಿದ. ಕೊನೆಗೆ ಮರೆತು ತನ್ನ ಜೇಬಿನಲ್ಲಿ ಹಾಕಿಕೊಂಡಿದೇನೆಂದುಕೊಂಡು, ಲೆಕ್ಕ ಸರಿನೋಡಿ ಯಜಮಾನನಿಗೆ ಒಪ್ಪಿಸಿದ.

"ಹಮ್ಮಯ್ಯ....ಹಬ್ಬದ ದಿನ ಕೈಯಿಂದ ಹಣ ಹಾಕಬೇಕಾಗಿ ಬರಲಿಲ್ಲ" ಎಂದು ಸಂತೋಷಿಸಿದ.

ಔಷಧಿಯ ಷಾಪಿನಲ್ಲಿ ದುಡ್ಡಿಗೋಸ್ಕರ ಜೇಬಿನಲ್ಲಿ ಹುಡುಕಿದಾಗ ಸಿಗ ಲಿಲ್ಲ. ಯಜಮಾನನಿಂದ ಕೇಳಿ ತೆಗೆದುಕೊಂಡ ಹಣ ಜೇಬಿನಲ್ಲಿಟ್ಟುಕೊಂಡ

ನೆನಪು ಚೆನ್ನಾಗಿತ್ತು. ಅಂಗಡಿಯಲ್ಲಿ ಕೋಟು ತೆಗೆದಿಟ್ಟಿದ್ದಾಗ ಯಾರೋ ಹಣ ತೆಗೆದಿರಬೇಕು ಎಂದುಕೊಂಡ. ಬರೀ ಕೈಯಲ್ಲಿ ಮನೆಗೆ ಹೋಗಿ ಮಂಚದ ಮೇಲೆ ಜ್ವರದ ತಾಪದಿಂದ ನರಳುತ್ತಾ ಬಿದ್ದಿದ್ದ ಹೆಂಡತಿಯನ್ನು ನೋಡಿ ತಲೆ ತಗ್ಗಿಸಿದ್ದ.

"ಅಯ್ಯಾ, ಆ ಹಣ ನನ್ನದೇ....ಆ ಹಣ ನನ್ನದೇ. ನಿಮ್ಮ ಹೆಸರಿನ ಮುಂದೆ ಕ್ಯಾಷ್ ಸ್ಟಾಂಪು ಹಾಕಿದ್ದರಿಂದ ಹಣ ಸಾಲಲಿಲ್ಲ. ಅದು ಲೆಕ್ಕದ ಹಣ ಅಂದುಕೊಂಡೆ" ಮುದುಕ ಗುಮಾಸ್ತೆ ಆತುರದಿಂದ ತಡವರಿಸುತ್ತಾ ಹೇಳಿದ.

ಅದು ಸರಿ ಎನ್ನಿಸಿತು ಪ್ರಕಾಶನಿಗೆ. "ತೆಗೆದುಕೊಳ್ಳಿ, ಇದು ನಿಮ್ಮ ಹಣಾನೇ" ಎಂದು ನೋಟುಗಳನ್ನು ಮೇಜಿನ ಮೇಲಿಟ್ಟ, ಪ್ರಕಾಶ.

ಆತನ ಕಣ್ಣು ತೇವಗೊಂಡಿತ್ತು.

"ಬಾಪ್ಪಾ, ಕಾಫಿ ಕುಡಿದು ಹೋಗುವೆಯಂತೆ" ಎಂದು ಸುಂದರಯ್ಯ ಆಪ್ಯಾಯಮಾನವಾಗಿ ಕರೆದರು.

"ಈಗ ಬೇಡ ಬಿಡಿ. ಇನ್ನೊಂದು ಸಲ ಬರ್ತೀನಿ" ಎಂದ ಪ್ರಕಾಶ.

"ಆಗಾಗ ಬರ್ತಿರಪ್ಪಾ" ಹೊಸಲು ದಾಟುತ್ತಿದ್ದ ಪ್ರಕಾಶನಿಗೆ ಸುಂದರಯ್ಯನವರ ಮಾತು ಹಿಂದಿನಿಂದ ಕೇಳಿ ಬಂತು.

ಜವಳಿ ಅಂಗಡಿಯಿಂದ ಹೊರಗೆ ಬಂದಾಗ ಪ್ರಕಾಶನಿಗೆ ತಾನೊಂದು ಪ್ರಲೋಭದಿಂದ ಹೊರಬಿದ್ದ ಅನುಭವವಾಯಿತು.

* * *

ಆ ದಿನ ಜಾನಕಿ ಬೆಳಿಗ್ಗೆ ಏಳುವ ವೇಳೆಗಾಗಲೇ ಹೊತ್ತೇರಿತ್ತು. ಎಲ್ಲರ ಸ್ನಾನವೂ ಮುಗಿದಿತ್ತು. ಜಾನಕಿ ಮುಖ ತೊಳೆದು ಬರುವ ವೇಳೆಗೆ ಕನಕ ಕಂಚಿನ ಗ್ಲಾಸಿನಲ್ಲಿ ಕಾಫಿ ತಂದಳು

"ಎಲ್ಲರದೂ ಆಯಿತೇ?"

"ಎಲ್ಲರದೂ ಆಗಿ ತುಂಬಾ ಹೊತ್ತಾಯಿತು. ನಿನಗೋಸ್ಕರ ಒಲೆಯ ಪಕ್ಕದಲ್ಲಿಟ್ಟಿದ್ದೆ. ಬೆಚ್ಚಗಿರುತ್ತೇಂತ."

"ಕಲಸಿಟ್ಟ ಕಾಫಿ ನಾನು ತಂದುಕೊಳ್ಳಲಾರೆನೇ ಅತ್ತಿಗೇ? ನೀನೇಕೆ ತಂದೆ?"

"ಎಷ್ಟಾದರೂ ನಾದಿನಿ ಅಲ್ಲವೇನಮ್ಮ?"

"ಎಂದಾದರೂ ಬಂದು ಹೋಗೋ ನಾದಿನೀರಿಗೆ ಆ ಉಪಚಾರವೆಲ್ಲಾ

ನನ್ನ ಹಾಗೆ ಸದಾ ಮನೇಲಿ ಕೂತಿರೋರಿಗ್ಯಾಕೆ ಈ ಮರ್ಯಾದೆ–ಮನ್ನಣೆ? ಅದೂ ಸರಿ ಅತ್ತಿಗೆ. ಈ ದಿನ ಬೇಗ ಎಬ್ಬಿಸು ಅಂದರೆ ಈಗ ಎಬ್ಬಿಸುತ್ತಿದೀಯಲ್ಲಾ, ನಿನ್ನನ್ನ ನಂಬಿದರೆ...."

"ಕೆಲಸ ಆದಹಾಗೇ ಅಂತಿ. ಇಷ್ಟಕ್ಕೂ ಬೇಗ ಎದ್ದು ಏನು ಮಾಡಬೇಕಂತೆ ನೀನು. ನನ್ನ ಜತೇಲಿ ನೀರು ಸೇದುತ್ತೀನಿ ಅಂತೀಯಾ? ನಂಗೊತ್ತು ಅದಕ್ಕೇ ಎಬ್ಬಿಸಲಿಲ್ಲ. ನೋಡು ಜಾನಕಿ, ಮೇಣದ ಬತ್ತಿ ಎರಡು ಕಡೆಯಿಂದ ಉರಿಸಿದರೆ ಎಷ್ಟು ದಿನ ಉರಿಯುತ್ತೆ ಅಂತೀಯಾ? ಹಗಲೆಲ್ಲಾ ಅಲ್ಲಿ ಮಕ್ಕಳೊಂದಿಗೆ ಒದ್ದಾಡಿ, ಹೋಗ್ತಾ, ಬರ್ತಾ ಇಷ್ಟು ದೂರ ನಡೆದು ನೀನು ಹೇಗಾಗಿದೀಯೋ ಎಂದಾದರೂ ಕನ್ನಡೀಲಿ ನೋಡಿಕೊಂಡಿದೀಯಾ? ಸಾಲದ್ದಕ್ಕೆ ಮನೇಲಿ ಚಾಕರಿ ಕೂಡಾ ಮಾಡ್ತೀನೀ ಅಂತೀಯಾ? ನಾನಿರೋದು ಯಾಕಮ್ಮಾ....?"

"ನೀನಿರೋದು ನಮಗೆಲ್ಲಾ ಚಾಕರಿ ಮಾಡೋದಕ್ಕೇನೇನು? ಅದಕ್ಕೋಸ್ಕರಾನೇ ಈ ಮನೆಯಲ್ಲಿ ಹೆಜ್ಜೆಯಿಟ್ಟೆಯೇನು?" ಎಂದಳು ಜಾನಕಿ.

ಅಲ್ಪ ಸಂತೋಷಿಯಾದ ಕನಕ ಮನೆಯಲ್ಲಿ ತನಗೆ ಯಾವ ರೀತಿಯಾದ ಕೊರತೆಯೂ ಇಲ್ಲವೆಂದು ಸಂತೃಪ್ತಿ ಪಡುತ್ತಿದ್ದರೂ, ಮಿಕ್ಕವರೊಂದಿಗೆ ಹೋಲಿಸಿ ನೋಡಿ ತಮ್ಮ ಅತ್ತಿಗೆಗೆ ಸುಖವೇ ಇಲ್ಲವೆಂದು ವ್ಯಥೆಪಡುತ್ತಿದ್ದಳು ಜಾನಕಿ.

"ಅತ್ತಿಗೆ–ನಾದಿನೀರು ಒಬ್ಬರನ್ನೊಬ್ಬರು ಮೆಚ್ಚಿಕೊಳ್ಳುತ್ತಾ ಕೂಡಿ. ಇನ್ನು ಯಾರಿಗೂ ಊಟಬೇಕಾಗಿಲ್ಲಾಂತ ಕಾಣುತ್ತೆ ಈವತ್ತು. ಇನ್ನೊಂದು ಗಂಟೆಗೆಲ್ಲಾ ತಟ್ಟೆ ಹಾಕಿಕೊಂಡು ಕೂಡುತ್ತೀರಿ"—ಸುಂದರಮ್ಮ ಅಡಿಗೆಮನೆಯೊಳಗಿಂದ ಕೂಗಾಡಿದರು.

"ಈವತ್ತು ನಾನು ಊಟಮಾಡಿ ಹೋಗೊಲ್ಲಮ್ಮ. ಅಡಿಗೆಗೆ ಅವಾಂತರವಿಲ್ಲ. ಅಣ್ಣನ ಆಫೀಸ್ ಟೈಂಗೆ ಆದರೆ ಸಾಕು."

"ಯಾಕೇ? ಏನಿವತ್ತು?"

"ಬಾಲವಿಹಾರದಲ್ಲಿ ಉದ್ಯೋಗಸ್ಥರಿಗೆಲ್ಲಾ ಮನೆ ಕಟ್ಟಿಸಿದಾರೇಂತ ಹೇಳಿದ್ದೆನಲ್ಲಾ. ಅಲ್ಲಿ ಈವತ್ತು ಗೃಹಪ್ರವೇಶ. ನಮಗೆಲ್ಲಾ ಈವತ್ತು ಅಲ್ಲಿಯೇ ಊಟ. ನಾನು ಬರೋದು ಸ್ವಲ್ಪ ಲೇಟಾಗಬಹುದು. ಗಾಬರಿಪಡಬೇಡಿ."

"ಹಾಗಾದರೆ ಅಕ್ಕಾ, ಬೇಕೂಂದರೆ ನಿನಗೂ ಅಲ್ಲಿ ಮನೆ ಕೊಡ್ತಾರಾ?" ಕುತೂಹಲದಿಂದ ಪ್ರಶ್ನಿಸಿದಳು ಶಾಂತ.

ಆ ಮಧ್ಯೆ ಒಂದು ಸಲ ಶಾಂತ ಅಕ್ಕನೊಂದಿಗೆ ಹೋಗಿ ಅದನ್ನೆಲ್ಲಾ ನೋಡಿ ಬಂದಿದ್ದಳು. ಹೊಸದಾಗಿ, ನೀಟಾಗಿ ಕಟ್ಟಿದ ಮನೆಗಳು ಮನೆಯ

ಮುಂದೆ ಹೂಗಿಡಗಳು, ಪ್ರತಿಯೊಂದು ಕೋಣೆಯಲ್ಲೂ ಎಲೆಕ್ಟ್ರಿಕ್ ದೀಪ, ಫ್ಯಾನು, ಎಷ್ಟು ಚೆನ್ನಾಗಿದ್ದವು ಆ ಮನೆಗಳು? ಹಾಯಾಗಿ ತಾವೆಲ್ಲಾ ಆ ಮನೆಗೇ ಹೊರಟುಹೋದರೆ ಎಷ್ಟು ಚೆಂದ ಎಂದುಕೊಂಡಳು.

"ಬೇಕೊಂದರೆ ಕೊಡುತ್ತಾರೆ. ಆದರೆ ನಿಮ್ಮನ್ನೆಲ್ಲಾ ಬಿಟ್ಟು ನಾನೆಲ್ಲಿಗೆ ಹೋಗ್ತೀನಿ?"

"ನಿಮ್ಮಣ್ಣ ಹೋದ ಕೆಲಸ ಅನುಕೂಲವಾದರೆ ಅತ್ತೆಯ ಮನೆಗೆ" —ಕನಕಾ ನಗುತ್ತಾ ನುಡಿದಳು.

"ನಾನು ನಿಜವಾಗಿ ಅತ್ತೇಮನೆಗೆ ಹೋಗ್ತೀನೀಂತಲೇ ಅಂದುಕೋತಿದೀಯಾ ಅತ್ತಿಗೇ?" ಜಾನಕಿ ತೀಕ್ಷ್ಣವಾಗಿ ಪ್ರಶ್ನಿಸಿದಳು.

"ಹೂಂ. ಹೆಣ್ಣಾಗಿ ಹುಟ್ಟಿದಮೇಲೆ ತಪ್ಪೇನಿದೆ? ಗಂಡ ಮುದ್ದಾಗಿ ಬಾ ಅಂದ್ರೆ ಯಾಕೆ ಹೋಗೋಲ್ಲವೊ ಹೇಳು ಮತ್ತೆ?" ಕನಕಾ ಹಾಸ್ಯಮಾಡಿದಳು.

"ಯಾಕೆ ಹೋಗೋಲ್ಲವೇ, ಆ ಗಂಡನಿಗೆ ಆತ್ಮಾಭಿಮಾನ, ನಾಚಿಕೆ ಇಲ್ಲದಿದ್ದರೂ ನನಗಿದೆ—ಅದಕ್ಕೆ!"

"ಇಂಥಾ ಮಾತು ತುಂಬಾ ಕೇಳಿದೀನಿ ಬಿಡಮ್ಮಾ ಸಾಕು. ಮನಸಿನಲ್ಲಿ ಆತುರ ಇರೋರೇ ಹಾಗೆ ಮಾತಾಡ್ತಾರೆ. ನಾಲ್ಕು ದಿನದಲ್ಲಿ ನೋಡ್ತೀನಲ್ಲಾ."

"ಓ....ಇಷ್ಟಗಲ ಕಣ್ಣು ಬಿಟ್ಟುಕೊಂಡು ನೋಡುವಿಯಂತೆ. ನಿನ್ನ ಹತ್ತಿರ ವಾದಿಸೋಕೆ ಪುರಸತ್ತಿಲ್ಲ ನಂಗೆ. ಅನಸೂಯಮ್ಮ ಬೇಗ ಬಾ ಅಂತ ಹೇಳಿದಾರೆ" ಎಂದು ತನ್ನ ಕೆಲಸದಲ್ಲಿ ನಿಮಗ್ನಳಾದಳು.

ಅರ್ಧ ಗಂಟೆಯ ಮೇಲೆ ಅವಳು ಹಿಂತಿರುಗಿ ಬಂದಾಗ ಸಾಂಬು ಗೋಡೆಗಾತು ಅವಳು ಅಲ್ಲಿಂದ ಹೋಗುವ ಮುಂಚೆ ಹೇಗೆ ಕುಳಿತಿದ್ದನೋ ಅದೇ ತರಹ ಕುಳಿತಿದ್ದುದು ಕಾಣಿಸಿತು.

"ಏನೋ ಸಾಂಬೂ ಆಗಿನಿಂದ ನೋಡ್ತಿದೀನಿ. ಎಲ್ಲರೂ ಏನೋ ಒಂದು ಮಾತಾಡ್ತಿದೀವಿ. ನೀನು ಹರ-ಶಿವ, ಅನ್ನದೆ ಕುಳಿತಿದೀಯಲ್ಲಾ?"

"ಏನು ಮಾಡಲಕ್ಕಾ, ಪರೀಕ್ಷೆ, ಓದು, ಮುಗೀತು. ಕೆಲಸ ಕಾರ್ಯ ಇಲ್ಲದೆ ಕುಳಿತರೆ ಹೀಗೇ ಸೋಮಾರಿತನ ಅಭ್ಯಾಸವಾಗುತ್ತೆ."

"ಹೋಗಲಿ ಪ್ರಕಾಶನ ಜತೆ ಸುತ್ತಾಡಿ ಬರಬಾರದೇ? ಹೊಸ ಪುಸ್ತಕ ಬೇರೆ ಬಂದಿದೆ ಅಂತಿದ್ದ. ನೋಡಬಾರದೇ?"

"ಉಹುಂ. ಎಲ್ಲೂ ಹೋಗಬೇಕು ಅನ್ನಿಸೊಲ್ಲಕ್ಕ. ಏನು ಮಾಡಬೇಕೊಂತಲೂ ಅನ್ನಿಸ್ತಾ ಇಲ್ಲ."

"ನೋಡಿದರೆ ಹಾಗೇ ಇದೆ. ಅದಕ್ಕೇ ಹೇಳ್ತಿದೀನಿ. ಎರಡು ತಿಂಗಳಿಂದ

ನೋಡ್ತಾ ಇದೀನಲ್ಲಾ. ಕೊನೇ ಪರೀಕ್ಷೆ ಬರೆದು ಬಂದಾಗಿನಿಂದ ಮನೆಬಿಟ್ಟು ಕದಲಿಲ್ಲಾಂತ ಕಾಣುತ್ತೆ. ನಗುತ್ತಾ, ಕೆಲೆಯುತ್ತಾ ಇರಬೇಕಾದ ವಯಸಿನಲ್ಲಿ ಹೀಗಿದ್ದೀಯೇಕೋ? ಮೈ ಹುಷಾರಿಲ್ಲವೇ?"

"ನನಗೇನಾಗಿದೆ ದಾಡಿ? ಚೆನ್ನಾಗಿದೀನಿ."

"ಏನು ಚೆನ್ನವೋ, ಮುಖ ನೋಡು ಹೇಗಿದೆ? ಕೆನ್ನೆ ಬತ್ತಿ ಹೋಗಿ. ವಯಸಿನ ಹುಡುಗ ಹೀಗೇನೇ ಇರೋದು? ನನ್ನ ಜತೆ ಬಾಲವಿಹಾರಕ್ಕೆ ಬರ ಬಾರದೆ? ಸ್ವಲ್ಪ ಹೊತ್ತು ಹೋಗುತ್ತೆ. ಗೋವಿಂದ ಬಾಬು ಹತ್ತಿರ ಒಂದು ಸಲ ತೋರಿಸಿಕೊಂಡ ಹಾಗೂ ಆಗುತ್ತೆ."

"ನನಗೆ ಮೈಯಲ್ಲಿ ರೋಗವೇನೂ ಇಲ್ಲಕ್ಕಾ. ರಿಸಲ್ಟ್ಸ್‌ಗಾಗಿ ಎದುರು ನೋಡುತ್ತಾ ಇದೀನಿ. ಅದು ತಿಳಿದರೆ ಸಾಕು."

"ಆಲೋಚಿಸುತ್ತಾ ಕುಳಿತರೆ ಬೇಗ ರಿಸಲ್ಟ್ ಬರುತ್ತೇನು? ಈ ವಾರ ದಲ್ಲಿ ಹೇಗೂ ಗೊತ್ತಾಗುತ್ತೆ. ಅದಕ್ಕೆ ಗಾಬರಿ ಏಕೋ?"

"............"

"ಉಂ. ಏಳು. ಎದ್ದು ಬಟ್ಟೆ ಬದಲಾಯಿಸಿಕೋ. ನಿಂಗೆ ಇರಬೇಕು ಅನ್ನಿಸಿದರೆ ಇರು. ಇಲ್ಲದಿದ್ದರೆ ವಾಪಸು ಬಂದು ಬಿಡುವಿಯಂತೆ" ಎಂದಳು ಜಾನಕಿ.

ಅವಳು ಹೇಳಿದಂತೆ ಎರಡು ತಿಂಗಳಿಂದ ಸಾಂಬು ಹೊಸಿಲು ದಾಟಿರಲಿಲ್ಲ. ಹಗಲೂ-ರಾತ್ರಿ ತನ್ನ ಪರೀಕ್ಷೆ ಏನಾಗುತ್ತದೆಯೋ ಎಂಬ ಚಿಂತೆಯಲ್ಲಿಯೇ ಅವನಿಗೆ ಹೊತ್ತು ಕಳೆದುಹೋಗುತ್ತಿತ್ತು. ಅಣ್ಣನ ಮಾತು ಅವನ ಕಿವಿಯಲ್ಲಿ ಸದಾ ಪ್ರತಿಧ್ವನಿಸುತ್ತಿತ್ತು. ಬೇರೆ ಯಾವ ಮಾತೂ ಅವನಿಗೆ ಕೇಳಿಸುತ್ತಲೇ ಇರಲಿಲ್ಲ.

'ನನ್ನ ಆಸೆಯೆಲ್ಲಾ ನಿನ್ನ ಮೇಲೆ ಇಟ್ಟುಕೊಂಡಿದೀನೋ ಸಾಂಬೂ. ನೀನು ಸಹಕರಿಸದಿದ್ದರೆ ನಾನು ದೇಶಾಂತರ ಹೋಗಬೇಕು. ತಂಗಿಗೆ ಮದುವೆ ಮಾಡಲಾರದ ಅಸಮರ್ಥ ಅಂತ ಜನ ನನ್ನನ್ನ ಬೆರಳಿಟ್ಟು ತೋರಿಸ್ತಾರೆ. ಹಾಗೆ ನಾನು ಬದುಕಲಾರೆನೋ ಸಾಂಬೂ. ನನ್ನನ್ನೊಂದು ದಡ ಸೇರಿಸೋ ಭಾರ ನಿನ್ನದು. ನನ್ನ ಮಾನ ಮರ್ಯಾದೆ ಕಾಪಾಡುತ್ತೀಯೋ ಇಲ್ಲವೋ?'

ಸಾಂಬುವಿಗೆ ಈ ಪ್ರತಿಧ್ವನಿ ಅಣ್ಣನ ಮಾತಿನಂತೆಯೇ ಕೇಳಿಸುತ್ತಿತ್ತು. ಅವನ ಕಣ್ಣಿಗೆ ಕಾಣಿಸುವ ಪ್ರತಿಯೊಂದು ವಸ್ತುವೂ ದೀನವದನನಾಗಿ ಕುಳಿ ತಿರುವ ಅಣ್ಣನಂತೆಯೇ ಕಾಣುತ್ತಿತ್ತು.

ಯಂತ್ರದಂತೆ ಬಟ್ಟೆಹಾಕಿಕೊಂಡು ಜಾನಕಿಯನ್ನು ಹಿಂಬಾಲಿಸಿದ

ಸಾಂಬಶಿವ. ದಾರಿಯುದ್ದಕ್ಕೂ ಜಾನಕಿ ಅವನಿಗೆ ಧೈರ್ಯ ಹೇಳುತ್ತಲೇ ಇದ್ದಳು.

"ನೀನು ಪರೀಕ್ಷೇಲಿ ಪಾಸಾಗುತ್ತೀ ಕಣೋ, ನನಗೆ ನಂಬಿಕೆಯಿದೆ. ಅಷ್ಟಕ್ಕೂ ಆಗಲಿಲ್ಲಾಂತ ಇಟ್ಟುಕೋ. ಏನೂ ಮುಳುಗಿ ಹೋಗಲಿಲ್ಲ. ಸೆಪ್ಟೆಂಬರ್‌ಗೆ ಕಟ್ಟುವಿಯಂತೆ. ಅಣ್ಣ ದುಡ್ಡು ಕೊಡಲಾರೆ ಅಂದರೆ ನಾನು ಕೊಡುತ್ತೀನಿ. ಇಲ್ಲ ಪ್ರಕಾಶ ಕೊಡುತ್ತಾನೆ. ನೀನೇನೂ ಹೆದರಬೇಡ. ಅಣ್ಣನಿಗೆ ಮದುವೆಯ ಹುಚ್ಚು ಹಿಡಿದಿದೆ. ಅದಕ್ಕೇ ಸದಾ ಹಾಗಂತಿರ್ತಾನೆ. ಅಷ್ಟೇ, ಮತ್ತೇನಿಲ್ಲ. ನೀನು ಧೈರ್ಯವಾಗಿರು. ನೀನು ಸಂತೋಷವಾಗಿದ್ದರೆ ಅಷ್ಟೇ ಸಾಕು ನಮಗೆ."

ಸಾಂಬು ಎಲ್ಲವನ್ನೂ ಕೇಳಿದ. ಆದರೆ ಒಂದು ಮಾತಾದರೂ ಅವನ ಮನಸಿಗೆ ಹತ್ತಿತೋ ಇಲ್ಲವೋ. ಪೇಟೆಬೀದಿ ದಾಟಿ ಸ್ವಲ್ಪದೂರ ಹೋಗೋದರೊಳಗಾಗಿ ಕಾಲೇಜಿನ ಹುಡುಗರು ಗುಂಪಾಗಿ ಕಾಣಿಸಿದರು.

"ಸಾಂಬಶಿವಾ" ಎಂದು ಕೂಗಿದರು ಅವನ ಗೆಳೆಯರು. ಸಾಂಬು ಹಿಂತಿರುಗಿ ನೋಡಿದ.

"ಈವತ್ತು ರಿಸಲ್ಟ್ ಬರುತ್ತಂತೆ. ಸ್ಟೇಷನ್ನಿಗೆ ಹೋಗ್ತಿದೀವಿ ನೀನೂ ಬರ್ತೀಯಾ?"

ಸಾಂಬು ಅಕ್ಕನ ಕಡೆ ನೋಡಿದ. ಜಾನಕಿಗೆ ಆ ಪರಿಸ್ಥಿತಿಯಲ್ಲಿ ಅವನೊಬ್ಬನನ್ನೇ ಕಳುಹಿಸಲು ಇಷ್ಟವಿರಲಿಲ್ಲ. ಆದರೆ ತಾನು ಹೋಗುವಂತಿಲ್ಲ. ಹತ್ತುಗಂಟೆಗೆಲ್ಲಾ ಗೃಹಪ್ರವೇಶದ ಮುಹೂರ್ತವಿತ್ತು. ಸ್ವಲ್ಪ ಮುಂಚೆ ಬರುವಂತೆ ಅನಸೂಯಮ್ಮ ಒತ್ತಿ ಹೇಳಿದ್ದರು. ವಿಧಿಯಿಲ್ಲದೆ "ಹೋಗಿ ಬಾ" ಎಂದಳು.

ಆ ಹುಡುಗರ ಕಡೆ ನೋಡಿ, "ನನ್ನ ತಮ್ಮನ್ನ ಸ್ವಲ್ಪ ನೋಡಿಕೊಳ್ಳಿ" ಎಂದಳು.

'ಇದೇನು, ಬಿ.ಎ. ಓದುವ ಹುಡುಗನನ್ನು ಚಿಕ್ಕ ಹುಡುಗನೆಂಬಂತೆ ನಮಗೆ ಒಪ್ಪಿಸುತ್ತಿದ್ದಾರೀಕೆ' ಎಂದುಕೊಂಡರು ಆ ಹುಡುಗರು.

ಅವರ ಭಾವನೆಯನ್ನು ಗಮನಿಸಿ ಜಾನಕಿ, "ಮತ್ತೇನಿಲ್ಲ, ಅವನಿಗೆ ಸ್ವಲ್ಪ ಮೈಹುಷಾರಿಲ್ಲ" ಎಂದಳು.

ಅವರು ಆ ಬೀದಿ ದಾಟಿ ಪಕ್ಕದಬೀದೀಗೆ ತಿರುಗುವವರೆಗೂ ನೋಡುತ್ತಾ ನಿಂತಳು ಜಾನಕಿ. ಆರೋಗ್ಯದಿಂದ, ಉತ್ಸಾಹದಿಂದ ಪುಟಕ್ಕಿಟ್ಟ ಚೆಂಡಿನಂತಿದ್ದ ಹುಡುಗರ ಮಧ್ಯೆ ಸಾಂಬು ಬಿಳಿಚಿಕೊಂಡು ಒಣಗಿದ ದಂಟಿನಂತೆ ಕಾಣುತ್ತಿದ್ದ.

ಸಾಂಬೂನ ಕೆನ್ನೆಯ ಕೆಂಪು ಏನಾಯಿತು? ಷರ್ಟಿನೊಳಗಿನಿಂದ ಕೈಗಳು

ಕಡ್ಡಿಗಳಂತೆ ತೂಗಾಡುತ್ತಿವೆಯಲ್ಲಾ ಎಂದುಕೊಂಡಳು. ಬೆಳಕಿನಲ್ಲಿ ತಾನು ಪರಿಶೀಲಿಸಿ ನೋಡಿರಲಿಲ್ಲ. ಈಗ ನೋಡಿದರೆ ಸಾಂಬುಗೇನೋ ಕಾಯಿಲೆ ಇದ್ದಂತೆಯೇ ಇದೆ. ನಾಳೆ ತಪ್ಪದೆ ಗೋವಿಂದಬಾಬುಗೆ ತೋರಿಸಬೇಕು ಎಂದು ಕೊಂಡಳು.

ಹುಡುಗರು ಸ್ಟೇಷನ್ನಿಗೆ ಹೋಗುವ ವೇಳೆಗೆ ಮೇಯಿಲ್ ಬಂದು ಬಿಟ್ಟಿತ್ತು. ಬಹಳ ಜನ ಹುಡುಗರ ಕೈಯಲ್ಲಿ ಪೇಪರ್ ಇತ್ತು. ಸಾಂಬು ನೊಂದಿಗೆ ಬಂದ ಹುಡುಗರು ಗುಂಪಿನೊಳಕ್ಕೆ ತೂರಿಕೊಂಡರು.

"ಬಾರೋ ಸಾಂಬೂ." ತಿಳಿದ ಹುಡುಗರಾರೋ ಮುಂದಿನಿಂದ ಕೂಗಿ ದರು.

"ಅವನಿಗೇನೋ, ಹಿಂದೆ ನಿಂತರೂ, ಮುಂದೆ ನಿಂತರೂ ಒಂದೇ. ಫಸ್ಟ್ ಕ್ಲಾಸ್ ಬಂದೇ ಬರುತ್ತೆ." ಯಾರದೋ ಕೂಗು.

ಸಾಂಬು ಒಂದು ಪೇಪರ್ ಕೈಗೆ ತೆಗೆದುಕೊಂಡ.

"ಮೂರನೇ ಪೇಜಿನಲ್ಲಿ ಬಿ.ಎ. ಬಿ.ಎಸ್ಸಿ. ರಿಸಲ್ಟ್." ಪೇಪರ್ ಮಾರು ತ್ತಿದ್ದವರು ಉತ್ಸಾಹದಿಂದ ಕೂಗುತ್ತಿದ್ದರು.

ಪೇಜು ತಿರುಗಿಸಲು ಸಾಂಬಶಿವನ ಕೈ ನಡುಗಿತು.

"ಏನೋ ಅವನದ್ದು ಹೋಯಿತೇನು?"

"ಯಾರದು? ಸಾಂಬಶಿವನದೇ?"

"ಎಲ್ಲರೂ ಫಸ್ಟ್‌ಕ್ಲಾಸ್ ಬರುತ್ತೆ ಅಂತಿದ್ದರಲ್ಲೋ?"

"ಸರಿಯಾಗಿ ನೋಡೋ. ತಪ್ಪು ನಂಬರ್ ನೋಡ್ತಿದೀಯೇನೋ!"

"ಚೆನ್ನಾಯಿತು. ನನಗೆ ಗೊತ್ತಿಲ್ಲವೇ?"

"ಅಯ್ಯೋ ಪಾಪ!!"

"ಎಷ್ಟು ಕಷ್ಟಪಟ್ಟು ಓದುತ್ತಿದ್ದ!!"

"ಒಬ್ಬೊಬ್ಬರ ದುರದೃಷ್ಟ."

ಸಾಂಬಶಿವ ಧೈರ್ಯ ತಂದುಕೊಂಡು ಪೇಪರ್ ಪೇಜು ತಿರುಗಿಸಿದ. ಮೂರನೆಯ ಪೇಜಿನಲ್ಲಿದ್ದ ಪರೀಕ್ಷೆಯ ಫಲಿತಾಂಶಗಳನ್ನು ಕೆಳಗಿನಿಂದ ಮೇಲಕ್ಕೂ ಮೇಲಿನಿಂದ ಕೆಳಕ್ಕೂ ಮೂರು ಸಲ ನಿಧಾನವಾಗಿ ನೋಡಿದ. ಅದರಲ್ಲಿ ತನ್ನ ನಂಬರು ಇಲ್ಲವೆಂದು ಖಚಿತಪಡಿಸಿಕೊಂಡು ಪೇಪರ್ ಮಡಿಚಿ ಕಂಕುಳಲ್ಲಿಟ್ಟುಕೊಂಡ. ಕೈ ಕಟ್ಟಿಕೊಂಡು ರೈಲು ಕಂಬಿಗೆ ಅಡ್ಡವಾಗಿ ಹೆಜ್ಜೆ ಹಾಕಿದ.

ಸ್ಟೇಷನ್ ದಾಟಿ ಹೊರಟರೆ ಪೇಟೆ ಬೀದಿಯನ್ನೂ ಕಾಲೇಜನ್ನೂ

ಹಾದು ಹೋಗಬೇಕು. ದಾರಿಯಲ್ಲಿ ಗುರುತಿನವರು ಸಿಕ್ಕಿ ಮಾತನಾಡಿಸಿದರೆ ತಡೆದುಕೊಳ್ಳುವ ಶಕ್ತಿ ತನಗಿಲ್ಲ ಎನ್ನಿಸಿತು ಸಾಂಬಶಿವನಿಗೆ.

ರೈಲುಕಟ್ಟೆಗೆ ಆ ಪಕ್ಕದಲ್ಲಿ ಟ್ರಂಕ್‌ರೋಡ್ ಇತ್ತು. ಆ ದಾರಿಯಲ್ಲಿ ಸ್ವಲ್ಪ ದೂರ ಹೋದರೆ ಊರಿನೊಂದಿಗೆ ಬೆರೆಯುವ ದಾರಿ ಬರುತ್ತೆ. ಅಲ್ಲಿಂದ ಎಲ್ಲಾ ಗಲ್ಲಿಗಳೇ. ನಾಲ್ಕು ಗಲ್ಲಿ ದಾಟಿದರೆ ತಮ್ಮ ಮನೆಯ ಹಿತ್ತಲು ಬೀದಿ ಬರುತ್ತೆ. ಸುತ್ತುದಾರಿಯಾದರೂ ಸರಿ. ಎಲ್ಲರಿಂದಲೂ ಮುಖ ತಪ್ಪಿಸಿ ಹೋಗಲು ಇದೇ ಸರಿಯಾದ ಉಪಾಯ ಎನ್ನಿಸಿತು.

ಟ್ರಂಕ್ ರೋಡಿನಲ್ಲಿ ಕಾರು, ಬಸ್ಸು, ಲಾರಿಗಳು ಜೋರಾಗಿ ಓಡಾಡುತ್ತಿದ್ದುವು. ನಿಶ್ಶಬ್ದ ಪ್ರಕೃತಿ "ಬೊಂಯ್, ಬೊಂಯ್, ಪಾಂ, ಪಾಂ" ಶಬ್ದಗಳಿಂದ ನಡುಗುವಂತಿತ್ತು. ಈ ದಾರಿಯಲ್ಲಿ ದಿನಾ ಹೀಗೆ ಇರುತ್ತದೆಯೋ ಇಲ್ಲಾ ಈ ದಿನ ಏನಾದರೂ ವಿಶೇಷವೋ ಸಾಂಬಶಿವನಿಗೆ ಅರ್ಥವಾಗಲಿಲ್ಲ. ಇದಕ್ಕೆ ಮುಂಚೆ ಒಂದೆರಡು ಸಲ ತಂದೆಯೊಂದಿಗೆ ಈ ದಾರಿಯಲ್ಲಿ ಬಂದಿದ್ದ. ಆಗ ಕಾರು ಬಸ್ಸುಗಳ ಓಡಾಟ ಇಷ್ಟು ಹೆಚ್ಚಾಗಿದ್ದಂತೆ ಕಾಣಲಿಲ್ಲ. ದಾರಿಯ ಪಕ್ಕದಲ್ಲಿ ನಡೆಯುತ್ತಿದ್ದ ಸಾಂಬಶಿವ. ಅವನ ಹಿಂದಿನಿಂದಲೂ ಮುಂದಿನಿಂದಲೂ ಕಾರುಗಳೂ,ಬಸ್ಸುಗಳೂ, ಲಾರಿಗಳೂ ಒಂದೊಂದಾಗಿಯೂ, ಜೋಡಿಯಾಗಿಯೂ, ವರಸೆಯಾಗಿಯೂ ರೊಯ್ಯೆಂದು ಓಡುತ್ತಿದ್ದುವು.

ಅದುವರೆವಿಗೂ ಬಿಸಿಲು ಜೋರಾಗಿತ್ತು. ಅಷ್ಟರಲ್ಲಿ ಸೂರ್ಯನೊಂದಿಗೆ ಪಂದ್ಯದಾಟಕ್ಕೆಂಬಂತೆ ಪಶ್ಚಿಮದಿಂದ ಒಂದು ಮೇಘ ಓಡಿ ಬಂತು. ಓಡಿ ಬರುತ್ತಿದ್ದ ಮೇಘಶಕಟನನ್ನು ನೋಡಿ ಸೂರ್ಯ ಪರಿಹಾಸದಿಂದ ನಕ್ಕ.

'ನಿನ್ನ ಶಕ್ತಿಯೆಷ್ಟು, ನೀನೆಷ್ಟು? ನೀನೇ ನನ್ನನ್ನು ಮರೆಮಾಡಲು ಬರುವುದು?' ಎಂದು ಗರ್ವದಿಂದ ಮುನ್ನಡೆದ.

ಚಿಕ್ಕ ಮೇಘಕ್ಕೆ ಕೋಪ ಬಂತು. ಸಹಾಯಕ್ಕಾಗಿ ಎರಡೂ ಕಡೆ ನೋಡುತ್ತಾ ಆಕ್ರೋಶಿಸಿತು. ಆ ಪುಟಾಣಿಗೆ ಸಹಾಯಕ್ಕೆಂದು ಸ್ವಜಾತೀಯರು ಸರಸರನೆ ನಾಲ್ಕು ದಿಕ್ಕುಗಳಿಂದ ಆಕಾಶದ ತುಂಬಾ ಒಟ್ಟಾಗಿ ಸೇರಿಕೊಂಡರು. ತನ್ನ ಬಳಗವನ್ನು ನೋಡಿ ಧೈರ್ಯ ತುಂಬಿಕೊಂಡ ಪುಟ್ಟ ಮೇಘ ಘರ್ಜಿಸಿತು.

'ಸೂರ್ಯದೇವರು ಏನಂತಾರೀಗ?' ಎಂದು ಪರಿಹಾಸಮಾಡಿತು. ಬಲವಂತನಾದ ಸೂರ್ಯ ಚಿಕ್ಕಪುಟ್ಟ ಮೇಘಗಳ ಮಧ್ಯೆ ಸಿಕ್ಕಿಹಾಕಿಕೊಂಡ ಮೇಘವಿಜಯವನ್ನು ನಾಲ್ಕೂ ಕಡೆ ಹರಡಲು ಗಾಳಿ ಹೊರಟಿತು. ಗುಡುಗು ಮಿಂಚು ಗಾಳಿಗೆ ಸಹಾಯವಾಗಿ ನಿಂತುವು. ಸರಿ, ಸೂರ್ಯ ಮೇಘಗಳ ಮಧ್ಯೆ

ಬಂದಿಯಾದ ಎಂದುಕೊಂಡವು ದಿಕ್ಕುಗಳು.

ಸಾಂಬಶಿವನ ತಲೆಯಮೇಲೆ ತಣ್ಣಗೆ ಬಿದ್ದ ಹನಿಯನ್ನು ಯಾವುದೋ ಪಕ್ಷಿ—ಹಾಕಿತೆಂದುಕೊಂಡ. ಪರೀಕ್ಷೆ ಫೇಲಾದ ಹುಡುಗರನ್ನು ಕಂಡರೆ ಪಕ್ಷಿಗಳಿಗೂ ಹೀನಾಯವೇ ಎಂದುಕೊಳ್ಳುತ್ತಾ ತನ್ನ ಊಹೆಗೆ ತಾನೇ ನಕ್ಕ.

ಮರಗಳ ಕೆಳಗೆ ನಡೆದರೆ ಇಷ್ಟೇ ಎಂದುಕೊಳ್ಳುವಷ್ಟರಲ್ಲಿ ಈ ಭುಜದ ಮೇಲೊಂದು, ಆ ಕೈಮೇಲೆ....ತಲೆಯ ಮೇಲೆ....

ಈ ಪಕ್ಷಿಗಳಿಗೆ ನಾನೆಂದರೆ ಇಷ್ಟು ಕೋಪ ಏಕೆ? ಎಂದುಕೊಳ್ಳುತ್ತಾ ತಲೆಯೆತ್ತಿ ನೋಡಿದ. ಕಪ್ಪನೆಯ ಮೋಡಗಳು ಆಕಾಶದ ತುಂಬಾ ತುಂಬಿದ್ದುವು. ವಾತಾವರಣ ಮಸುಕಾಗತೊಡಗಿತ್ತು. ಮರಗಳ ಮೇಲಿನ ಪಕ್ಷಿಗಳು ಕಿವಿ ಗಡಚಿಕ್ಕುವಂತೆ ಕೂಗುತ್ತಿದ್ದುವು.

ಸಾಂಬಶಿವನ ಮೇಲೆ ಬಿದ್ದ ನಾಲ್ಕು ಹನಿಯೊಂದಿಗೆ ಮಳೆಗೆ ಪ್ರಾರಂಭೋತ್ಸವವಾಗಿತ್ತು. ನಿರ್ಜನವಾದ ರಸ್ತೆ, ಗುಡುಗುಮಿಂಚು, ಗಾಳಿ, ಮಳೆ. ಗಾಳಿಗೆ ದೆವ್ವ ಹಿಡಿದಂತೆ ಅಲ್ಲಾಡುತ್ತಿದ್ದ ಮರಗಳು ಎರಡೂ ಕಡೆ ಜೋರಾಗಿ ಧ್ವನಿಮಾಡುತ್ತಾ ಹೋಗುತ್ತಿದ್ದ ಕಾರುಗಳು. ಕ್ಷಣಮಾತ್ರದಲ್ಲಿ ಪರಿಸರಗಳೆಲ್ಲಾ ಬದಲಾಯಿಸಿದಂತೆನಿಸಿತು. ಸಾಂಬೂಗೆ.

ನೆನೆಯದೆ ಮನೆ ಸೇರುವುದು ಅಸಂಭವ. ಈ ಮರಗಳ ಕೆಳಗೆ ಸಿಡಿಲು ಬಡಿದು ಸಾಯದಿದ್ದರೆ ಅದೇ ಪುಣ್ಯ ಎಂದುಕೊಂಡ. ಎಷ್ಟು ದೂರ ನಡೆದರೂ ದಾರಿ ಸವೆಯುವಂತೆ ಕಾಣಲಿಲ್ಲ. ಕಾಲೆಳೆದುಕೊಂಡು ಹೋಗುವಂತಾಗಿತ್ತು. ಗಂಟಲಾರಿದಂತಿತ್ತು. ಒಂದೆರಡುಸಲ ನಾಲಗೆ ಚಾಚಿ ಮಳೆಯ ನೀರನ್ನು ಚಪ್ಪರಿಸಿದ. ಮೈಯಲ್ಲಿನ ಶಕ್ತಿಯನ್ನೆಲ್ಲಾ ಕೂಡಿಸಿಕೊಂಡು ಹೆಜ್ಜೆ ಹಾಕತೊಡಗಿದ. ದಾರಿ ತಪ್ಪಿ ಊರಿಗೆ ಸೇರುವ ರಸ್ತೆ ಬಿಟ್ಟು ಬಂದೆನೇ ಎನ್ನಿಸಿತು. ಹಾಗಾಗುವ ಸಂಭವವಿರಲಿಲ್ಲ. ತಾನು ಮೊದಲಿಂದ ಒಂದೇ ಪಕ್ಕದಲ್ಲಿ ನಡೆಯುತ್ತಿದ್ದ. ದಾರಿ ಈ ಕಡೆಯಿಂದಲೇ ಎರಡಾಗಬೇಕು. ಇನ್ನೂ ಸ್ವಲ್ಪ ಮುಂದಕ್ಕೆ ಹೋದರೆ ಬರಬಹುದು. ತನ್ನ ಮೈಯಲ್ಲಿ ಶಕ್ತಿಯಿಲ್ಲ, ಮನಸಿನಲ್ಲಿ ಉತ್ಸಾಹವಿಲ್ಲ, ಅದಕ್ಕೇ ದಾರಿ ಸವೆಯುತ್ತಿಲ್ಲ, ಈ ರೀತಿ ನಡೆದರೆ ತಾನು ಮನೆ ಸೇರುವುದು ಯಾವಾಗ? ಇನ್ನೂ ಬೇಗಬೇಗ ನಡೆಯಬೇಕು.

'ಮನೆ ಸೇರದಿದ್ದರೇನು? ಏನಿದೆ ಮನೆಯಲ್ಲಿ? ನಿನ್ನನ್ನು ನೋಡಿ ಸಂತೋಷಿಸುವವರು ಯಾರು? ನಿಮ್ಮಣ್ಣನ ಮುಂದೆ ಹೇಗೆ ತಲೆಯೆತ್ತಿ ತಿರುಗುತ್ತಿ?'—ಯಾರೋ ಕೂಗಿ ಹೇಳಿದಂತಾಯಿತು

"ಹೌದು. ಮನೆಯಲ್ಲಿ ಯಾರೂ ನನಗೋಸ್ಕರ ಕಾದು ಕುಳಿತಿರುವುದಿಲ್ಲ.

ವಿಷಯ ತಿಳಿದು ನನ್ನ ಬುದ್ಧಿ ಹೀನತೆಗೆ ದುಃಖಪಡುತ್ತಿರುತ್ತಾರೆ."

ಆದರೂ ಅವನ ನಡಿಗೆ ನಿಲ್ಲಲಿಲ್ಲ. ಮುಂದಕ್ಕೆ ನಡೆಯುತ್ತಲೇ ಇದ್ದ. ಮಳೆ, ಗಾಳಿ ಜೋರಾಗುತ್ತಿತ್ತು. ಮುಖದಮೇಲೆ ಹರಿಯುತ್ತಿದ್ದ ನೀರನ್ನು ಕೈಯಿಂದ ಒರೆಸಿಕೊಳ್ಳುತ್ತಾ, ಸಿಡಿಲ ಶಬ್ದಕ್ಕೆ ಕಿವಿ ಮುಚ್ಚಿಕೊಳ್ಳುತ್ತಾ ನಡೆಯತೊಡಗಿದ. ರಸ್ತೆಯೆಲ್ಲಾ ಪಾದ ನೆನೆಯುವಷ್ಟು ನೀರಿನಿಂದ ತುಂಬಿತ್ತು. ದಾರಿಯಲ್ಲಿ ಹಳ್ಳ, ದಿಣ್ಣೆ ಏನೂ ತಿಳಿಯುವಂತಿರಲಿಲ್ಲ ಹಳ್ಳವೇನೋ ಎಂದು ಜಾಗ್ರತೆಯಾಗಿ ಕಾಲು ಎತ್ತಿಟ್ಟ ಕಡೆ ನೆಲ ಸಿಕ್ಕುತ್ತಿತ್ತು. ಜೋರಾಗಿ ನಡೆಯುವಾಗ ಕಾಲು ಹಳ್ಳದಲ್ಲಿ ಬಿದ್ದು ಪಕ್ಕಕ್ಕೆ ಬೀಳುವಂತಾಗುತ್ತಿತ್ತು.

ಒಂದೆರಡು ಲಾರಿ ತನ್ನ ಕಿವಿಯ ಪಕ್ಕದಿಂದ ಹೋದಂತಾಯಿತು ಸಾಂಬಶಿವನಿಗೆ. ನಡಿಗೆಯ ಆತುರದಲ್ಲಿ ತಾನು ರಸ್ತೆಯ ಮಧ್ಯಕ್ಕೆ ಬಂದಿದೇನೆಂದು ಗ್ರಹಿಸಿದ ಸಾಂಬು. ಪಕ್ಕಕ್ಕೆ ಹೋಗಲು ಪ್ರಯತ್ನಿಸಿದ. ಕಾಲಿಗೇನೋ ತಗುಲಿ ಎಡವಿ ಬೋರಲು ಬಿದ್ದ. ಎದುರಾಗಿ ಹತ್ತು ಗಜದ ದೂರದಲ್ಲಿ ದೊಡ್ಡ ಟ್ರಕ್ಕು ವೇಗವಾಗಿ ಬರುತ್ತಿತ್ತು. ಸಾಂಬೂನ ಮನಸು ಏಳೆಂದು ಎಚ್ಚರಿಸಿತು.

'ಏಳಬೇಡ. ಕಣ್ಣು ಗಟ್ಟಿಯಾಗಿ ಮುಚ್ಚಿಕೋ. ಕಿವಿ ಮುಚ್ಚಿಕೋ. ಹಾಗೆಯೇ ಮಲಗಿಕೋ. ಟ್ರಕ್ಕು ಪಕ್ಕದಿಂದ ಹೋಗುತ್ತೆ. ಏಳಬೇಡ. ಸಾಯುತ್ತೀ. ತಪ್ಪಿಸಿಕೊಳ್ಳಲಾರೆ' ಭೂಮಿಯೊಳಗಿನಿಂದ ಕೂಗಿದಂತಾಯಿತು. ಸಾಂಬು ಏಳಲು ತನ್ನ ಶಕ್ತಿ ಮೀರಿ ಪ್ರಯತ್ನಿಸಿದ. ಆದರೆ ಅವನಿಂದ ಒಂದು ಅಂಗುಲ ಸಹ ಕದಲಲಾಗಲಿಲ್ಲ.

ಲಾರಿ ಹೊರಟುಹೋಯಿತು. ಸಾಂಬು ಏಳಲಿಲ್ಲ.

* * *

ಆ ದಿನ ಪೂರ್ತಿ ಮಳೆ ನಿಲ್ಲಲೇ ಇಲ್ಲ. ಕೊಡೆ ಹಿಡಿದುಕೊಂಡಿದ್ದರೂ ನೆನೆದು ಮುದ್ದೆಯಾಗಿ ರಾತ್ರಿ ಎಂಟು ಗಂಟೆಗೆ ಮನೆ ಸೇರಿದಳು ಜಾನಕಿ. ಚಳಿಗೆ ತುಂಬಾ ಸೆರಗು ಹೊದ್ದುಕೊಂಡು ಕುಳಿತಿದ್ದರು ಸುಂದರಮ್ಮ. ಕನಕ ಹಾಸಿಗೆ ಹಾಸುತ್ತಿದ್ದಳು. ದೀಪದ ಬಳಿ ಕುಳಿತು ಸುಂದರವಾಗಿ ಅಲಂಕರಿಸಿಕೊಳ್ಳುವುದರ ಬಗ್ಗೆ ಬರೆದ ಪುಸ್ತಕ ಓದುತ್ತಾ ಕುಳಿತಿದ್ದಳು ಶಾಂತ.

ಜಾನಕಿ ಕೊಡೆ ಮಡಿಚಿ ಹೊಸಿಲ ಬಳಿ ಇಟ್ಟು, "ಸಾಂಬು ಇನ್ನೂ ಬರಲಿಲ್ಲವೇನಮ್ಮಾ?" ಎಂದಳು.

"ಅದೇನೇ ಹಾಗಂತಿ, ಅವನು ನಿನ್ನ ಜತೇಲಿ ಬಂದನಲ್ಲಾ. ಕೂತಿದ್ದವನನ್ನು ಎಬ್ಬಿಸಿ ಕರೆದುಕೊಂಡು ಹೋದೆಯಲ್ಲಾ"—ಸುಂದರಮ್ಮ ಮರುಪ್ರಶ್ನೆ

ಹಾಕಿದರು.

"ನನ್ನ ಜತೇಲಿ ಸ್ವಲ್ಪ ದೂರ ಬಂದ. ಅಷ್ಟರಲ್ಲಿ ಅವನ ಕ್ಲಾಸುಹುಡುಗರು ಸಿಕ್ಕಿ ರಿಸಲ್ಟ್ಸ್ ಬರುತ್ತಂತೆ ಈವತ್ತು, ಸ್ಟೇಷನ್ನಿಗೆ ಹೋಗೋಣ ಬಾಂತ ಕರಕೊಂಡು ಹೋದರು. ಮತ್ತೆ ಅವನು ಬರಲಿಲ್ಲ. ಸರಿ ಮನೆಗೆ ಹೋಗಿರುತ್ತಾನ ಅಂದುಕೊಂಡೆ. ಇನ್ನೂ ಮನೆಗೆ ಬಂದೇ ಇಲ್ಲವೇ?" ಆತುರದಿಂದ ಪ್ರಶ್ನಿಸಿದಳು ಜಾನಕಿ.

"ಬರಲಿಲ್ಲಾಂತನೇ ಹೇಳ್ತಿರೋದು. ಇಷ್ಟಕ್ಕೂ ಪರೀಕ್ಷೆ ಫಲಿತಾಂಶ ತಿಳಿತೇ? ಸಾಂಬೂ ಪಾಸಾಗಿದಾನಾ?"

"ಇಲ್ಲಮ್ಮಾ. ಸಾಂಬು ಫೇಲಾಗಿದಾನೆ. ಅವನ ನಂಬರಿಲ್ಲ."

"ಅಯ್ಯೋ ದೇವರೇ. ಇದೇನು ಬಂತಪ್ಪಾ. ಅವನು ಫೇಲಾಗೋದೂ ಅಂದ್ರೇನೇ ಜಾನಕಿ? ಸರಿಯಾಗಿ ನೋಡಿದೆಯಾ?"

"ನೋಡಿದೇಮ್ಮಾ, ಆಗಿನಿಂದ ನನ್ನ ಮನಸಿಗೆ ಸಮಾಧಾನಾನೇ ಇಲ್ಲ. ಮನೆಗೆ ಬಂದುಬಿಡೋಣ ಅಂತ ಪ್ರಯತ್ನಿಸಿದರೂ ಆಗಲೇ ಇಲ್ಲ. ಈ ಹಾಳು ಮಳೆ ಬಂದು ಕೆಲಸವೆಲ್ಲಾ ಹಾಳು. ಬೇಗ ಮುಗಿಸಲಾಗಲೇ ಇಲ್ಲ."

"ಹಾಗಾದರೆ ಸಾಂಬು ಎಲ್ಲಿ?"

"ಅನೇ ಆಲೋಚಿಸುತ್ತಿದೀನಮ್ಮಾ. ಪರೀಕ್ಷೆ ಹೋಯಿತೂಂತ ಇಷ್ಟು ರಾತ್ರಿಯವರೆಗೂ ಈ ಮಳೇಲಿ ಎಲ್ಲಿ ತಿರುಗಾಡುತ್ತಿದಾನೋ ಏನೋ ಅವನಿಗೆ ಅಂತಾ ಸ್ನೇಹಿತರೂ ಇಲ್ಲ"

"ಅಯ್ಯೋ ಭಗವಂತಾ, ಇನ್ನೇನು ಗತಿ? ಹಾಳು ಪರೀಕ್ಷೆ ಹೋದರೆ ಹೋಯಿತು. ಇಷ್ಟು ಮಳೇಲಿ ಹುಡುಗ ಎಲ್ಲಿ ನೆನೆಯುತ್ತಿರುತ್ತಾನೋ ಏನೋ ಮನೆಗೆ ಬರಲು ಮುಖ ಇಲ್ಲದೆ ಯಾರ ಮನೆ ಜಗುಲಿಯ ಮೇಲಾದರೂ ಕುಳಿತುಬಿಟ್ಟಿದಾನೋ ಏನೋ? ಎಲ್ಲಿ ಹುಡುಕೋಣವೇ, ಜಾನಕಿ? ಏನು ಮಾಡೋಣ? ಅಣ್ಣನೂ ಊರಲಿಲ್ಲ. ಪ್ರಕಾಶನೂ ಮನೆಗೆ ಬಂದಿಲ್ಲ. ಸರಿಯಾಗಿ ಈ ಹಾಳುಮಳೆ ಈವತ್ತೇ ಬರಬೇಕೆ? ನಾಲ್ಕೂ ಕಡೆ ನೋಡಿ ಬರೋಣ ಬರ್ತೀಯಾ? ಅವರ ಕ್ಲಾಸು ಹುಡುಗರ ಮನೆಯೇನಾದರೂ ಗೊತ್ತಾ ನಿನಗೆ? ಏನು ಮಾಡಲೇ ಜಾನಕಿ? ಮೊದ್ದು ಮುಖ ಹಾಕಿಕೊಂಡು ಹಾಗೇಕೆ ಕುಳಿತಿಯೇ?"

"ಇರಮ್ಮಾ ಸ್ವಲ್ಪ, ಆಲೋಚಿಸ್ತಿದೀನಿ."

"ಇನ್ನೂ ಆಲೋಚನೆ ಎಂಥದೇ. ಬೆಳಗಿನಿಂದ ಆಲೋಚಿಸಿದ್ದು ಸಾಲದೇನು? ಅವನು ಪರೀಕ್ಷೆ ಫೇಲಾಗಿದಾನೆ ಅಂತ ತಿಳಿದೂ, ಅವನು ಏನಾದನೋ

ತಿಳಿದುಕೊಳ್ಳೋಣ ಅನ್ನಿಸಲಿಲ್ಲವೇ ನಿನಗೆ? ನನ್ನ ಕಂದ ಎಲ್ಲಿದ್ದಾನಮ್ಮಾ...."

ನಿಜ, ಅಮ್ಮನಿಗಿರೋ ಜ್ಞಾನ ತನಗಿಲ್ಲ. ಸಾಂಬು ಈ ಪರೀಕ್ಷೇನ ತನ್ನ ಜೀವನ-ಮರಣ ಪರೀಕ್ಷೆಯೆಂಬಂತೆ ತಿಳಿದುಕೊಂಡಿದ್ದ, ಎನ್ನುವ ವಿಷಯ ತಿಳಿದಿದ್ದೂ ಕೂಡಾ ಅದರ ಪರ್ಯವಸಾನ ಹೀಗಿರಬಹುದೆಂದು ಆಲೋಚಿಸಲಿಲ್ಲ. ಈಗೇನು ಮಾಡಬೇಕು? ಸಾಂಬುಗೋಸ್ಕರ ಎಲ್ಲೀಂತ ಹುಡುಕೋದು?.... ಜಾನಕಿ ಒಂದು ನಿಶ್ಚಯಕ್ಕೆ ಬಂದವಳಂತೆ ಮೇಲೆದ್ದಳು. ಅಷ್ಟರಲ್ಲಿ ಶ್ರೀಹರಿ ಒಳಕ್ಕೆ ಬಂದ.

"ಅಯ್ಯೋ ಶ್ರೀಹರಿ....ಸಾಂಬು ಕಣೋ....ಸಾಂಬು" ಎಂದು ಸುಂದರಮ್ಮ ಗೋಳಾಡತೊಡಗಿದರು.

"ಏನಾಯಿತಮ್ಮಾ, ಸಾಂಬುಗೇನಾಯಿತು?"

"ಸಾಂಬು ಫೇಲಾದ." ಜಾನಕಿ ನಿಧಾನವಾಗಿ ಹೇಳಿದಳು.

ಒಂದು ಕ್ಷಣ ಎರಡೂ ಕೈಗಳಿಂದ ತಲೆ ಹಿಡಿದುಕೊಂಡ ಶ್ರೀಹರಿ.

"ಎಂಥ ಕೆಲಸವಾಯಿತು, ಎಲ್ಲಿ ಸಾಂಬೂ."

"ಇನ್ನೂ ಮನೆಗೆ ಬರಲಿಲ್ಲ."

"ಎಲ್ಲಿಗೆ ಹೋದ, ಯಾವಾಗ ಹೋದ?"

ಜಾನಕಿ ನಡೆದದ್ದನ್ನೆಲ್ಲಾ ವಿವರಿಸಿದಳು.

"ನೀನು ಅವನಿಗೋಸ್ಕರ ನೋಡಲಿಲ್ಲವೇ? ಇದುವರೆವಿಗೂ ಏನು ಮಾಡುತ್ತಿದ್ದೆ?"

"ನಾನೂ ಈಗತಾನೇ ಬಂದೆ."

"ಪ್ರಕಾಶ ಎಲ್ಲಿ?"

"ಅದೋ ಅವನೂ ಬರ್ತಿದ್ದಾನೆ" ಎಂದಳು ಶಾಂತ.

ಬೆಳಿಗ್ಗೆ ಪೇಪರ್ ಕೈಗೆ ಬಂದೊಡನೆಯೇ ಪ್ರಕಾಶ ಬಿ.ಎ. ಬಿ.ಎಸ್ಸಿ. ರಿಸಲ್ಟ್ ಬಂದಿದೆಯೆಂದು ತಿಳಿದು ಪೇಜು ತಿರುಗಿಸಿ ನೋಡಿದ. ತನ್ನ ಅಣ್ಣನ ಪರೀಕ್ಷೆ ಹೋಗುತ್ತದೆಯೆಂಬ ಸಂದೇಹವೇ ಅವನಿಗಿರಲಿಲ್ಲ. ಅಣ್ಣನಿಗೆ ಎಂಥ ಬಹುಮಾನ ಕೊಡಬೇಕು ಎಂದು ಆಲೋಚಿಸುತ್ತಲೇ ನಂಬರಿಗೋಸ್ಕರ ಹುಡುಕಿದ. ಸಾಂಬೂ ನಂಬರು ಕಾಣಲಿಲ್ಲ. ಮತ್ತೆ ನಿಧಾನವಾಗಿ ಮೊದಲಿನಿಂದ ಹುಡುಕಿದ. ನಿಜವಾಗಿಯೂ ಸಾಂಬು ನಂಬರು ಇರಲಿಲ್ಲ. ಒಂದು ಕ್ಷಣ ಏನೂ ಆಲೋಚಿಸಲಾರದೆ ನಿಂತುಬಿಟ್ಟ.

ಬರೀ ಭಯ ಸಾಂಬೂಗೆ. ಹೋಗುತ್ತೆ ಹೋಗುತ್ತೆ ಅಂದುಕೊಳ್ಳುತ್ತಲೇ ಫೇಲಾಗಿದ್ದಾನೆ. ಇದಕ್ಕೆ ಮುಖ್ಯ ಕಾರಣ ಅಣ್ಣನೇ. ನೀನು ಪರೀಕ್ಷೆ

ಫೇಲಾದರೆ ಪ್ರಪಂಚವೇ ಮುಳುಗಿಹೋಗುತ್ತೆ ಅನ್ನುವಂತೆ ಮಾತನಾಡುತ್ತಿದ್ದ. ಅದನ್ನೇ ನಿಜವೆಂದು ನಂಬಿ ಹೆದರಿನಡುಗುತ್ತಿದ್ದ ಸಾಂಬು. ಆ ದಿನ ಸಾಂಬು,

'ಏನು ಮಾಡಲೋ ಪ್ರಕಾಶ, ಪೆನ್ನು ಹಿಡಿದುಕೊಂಡರೆ ನೀವೆಲ್ಲಾ ಜ್ಞಾಪಕ ಬರ್ತಿರಿ. ಕೈ ನಡುಗುತ್ತೆ. ಶಾಂತ, ಅಣ್ಣಾ, ಅಮ್ಮ ಎಲ್ಲರೂ ನನ್ನನ್ನೇ ನೋಡುತ್ತಾ ನನ್ನ ಸುತ್ತಲೂ ತಿರುಗುತ್ತಿರುವಂತೆ ಅನ್ನಿಸುತ್ತೆ. ನಾನೀಪರೀಕ್ಷೆ ಪಾಸಾಗಬೇಕು. ಅಣ್ಣಾನ ಆಸೆ ತೀರಿಸಬೇಕು. ಶಾಂತನ ಮದುವೆ ಮಾಡಬೇಕು ಎಂಬ ಹಠದಿಂದ ಬರೆಯಲು ಹೋಗುತ್ತೇನೆ. ಆದರೆ ತಲೆಯಲ್ಲಿ ಏನೂ ಇರೋಲ್ಲ. ಓದಿದ್ದೆಲ್ಲ ಮಾಯವಾಗಿ ನಾನು ಹೇರಿಕೊಂಡ ಋಣ, ತೀರಿಸ ಬೇಕಾದ ಬಾಕಿ, ಅಣ್ಣಾನ ಕಷ್ಟಗಳು, ಶಾಂತನ ಆಸೆ, ಆಕಾಂಕ್ಷೆ ಇವೇ ತುಂಬಿ ಹೋಗುತ್ತವೆ. ಅದನ್ನು ಬರೆದರೆ ಯಾರು ನಂಬರು ಕೊಡುತ್ತಾರೆ? ನನಗೆ ಗೊತ್ತು ನಾನೀಪರೀಕ್ಷೆ ಪಾಸಾಗೊಲ್ಲ. ಅಣ್ಣಾ ನನ್ನಮೇಲೆ ಹಾಕಿದ ದುಡ್ಡೆಲ್ಲಾ ದಂಡಾನೇ' ಎಂದು ಹೇಳಿದ್ದ.

ಬರೀ ಹೆದರಿಕೆಯಿಂದ ಹಾಗೆ ಅನ್ನುತ್ತಿದಾನೆ. ಅಷ್ಟುಮಾತ್ರ ಪಾಸಾಗ ಲಾರನೇ ಎಂದುಕೊಂಡಿದ್ದ ಪ್ರಕಾಶ. ಮೂರನೆಯ ಸಲ ನಂಬರ್ ಹುಡುಕಿ ಅದರಲ್ಲಿ ಸಾಂಬು ನಂಬರು ಇಲ್ಲವೆಂದು ಖಚಿತಪಡಿಸಿಕೊಂಡು ಪೇಪರ್ ಹಂಚಲು ಸೈಕಲ್ ಹತ್ತಿದ ಪ್ರಕಾಶ.

ಆ ಪೇಪರ್ಸ್ ನಾಲ್ಕೈದು ಗಂಟೆ ಮುಂಚಿತವಾಗಿಯೇ ಓದುಗರ ಕೈಯಲ್ಲಿರಬೇಕಾಗಿತ್ತು. ಆದರೆ ದಾರಿಯಲ್ಲಿ ಯಾವುದೋ ಗೂಡ್ಸು ರೈಲು ಕಂಬಿ ತಪ್ಪಿದ್ದರಿಂದ ಆದಿನ ಮೇಯಿಲ್ ನಾಲ್ಕು ಗಂಟೆ ಲೇಟಾಗಿತ್ತು ಆಫೀಸಿಗೆ ಹೋಗಬೇಕಾದವರೆಲ್ಲಾ ಆತುರದಿಂದ ಬೀದಿ ಬಾಗಿಲಲ್ಲಿಯೇ ಪೇಪರಿಗೋಸ್ಕರ ಕಾಯುತ್ತಿದ್ದರು.

"ಏನಪ್ಪಾ ಇಷ್ಟು ಲೇಟು ಮಾಡಿದೆ?"

"ಈ ದಿನ ಮೇಯಿಲ್ ಲೇಟುರೀ...." ಸೈಕಲ್ ಮೇಲಿಂದಲೇ ಜವಾಬೂ, ಪೇಪರೂ ಹಂಚುತ್ತಾ ತನ್ನ ಕೆಲಸ ಮುಗಿಸಿ ಬರುವ ವೇಳೆಗೆ ಆಕಾಶದ ತುಂಬಾ ಮೋಡ ಕವಿದಿತ್ತು. ಮನೆಗೆಂದು ಹೊರಟ ಪ್ರಕಾಶ ಮನಸು ಬದಲಾಯಿಸಿಕೊಂಡು ಅಂಗಡಿಯ ಕಡೆ ಹೊರಟ. ಅಣ್ಣಾ ಊರಿನಲ್ಲಿ ಇರಲಿಲ್ಲ. ಅಕ್ಕ ಆಫೀಸಿನಲ್ಲಿ ಕೆಲಸವಿದೆ ಬೇಗ ಹೋಗಬೇಕು ಅಂದಿದ್ದಳು. ಈವತ್ತು ಮನೆಯಲ್ಲಿ ಪೇಪರ್ ನೋಡಿದಾರೋ ಇಲ್ಲವೋ. ಈ ಅವಾಂಚ ನೀಯವಾದ ಸಮಾಚಾರವನ್ನು ತಾನೇ ಮೊದಲು ಮನೆಗೆ ಹೋಗಿ ಸಾಂಬು ವಿಗೇಕೆ ಹೇಳುವುದು? ತನಗೆ ಇನ್ನೊಬ್ಬರನ್ನು ಸಮಾಧಾನಪಡಿಸಲೂ

ಕೈಲಾಗದು. ಈ ವಿಷಯ ಕೇಳಿ ಅವನು ಮುಖ ಚಿಕ್ಕದು ಮಾಡಿಕೊಂಡು ಕುಳಿತರೆ....ಸ್ವಲ್ಪ ಹೊತ್ತು ಹೊರಗೇ ಕಾಲ ಕಳೆದು ದೀಪ ಹಚ್ಚುವ ವೇಳೆಗೆ ಮನೆ ಸೇರಿದರೆ ಬೆಳಗಾಗುವ ವೇಳೆಗೆ 'ನಿನ್ನೆ' ಕಳೆದುಹೋಗಿರುತ್ತದೆ. ಮಹಾ ಮಹಾಕಷ್ಟಗಳನ್ನೇ ಮನುಷ್ಯರು ಮರೆತುಹೋಗಿರುತ್ತಾರೆ? ಇದೆಷ್ಟರದು? ಈ ಸಲ ಪರೀಕ್ಷೆ ಹೋದರೇನಂತೆ? ಮತ್ತೆ ಪಾಸಾಗಬಹುದು. ಸ್ವಲ್ಪ ಶ್ರಮ, ಹಣ, ಖರ್ಚಾಗುತ್ತೆ. ಅಷ್ಟೇ ತಾನೆ? ಎಂದುಕೊಂಡ ಪ್ರಕಾಶ.

ತನ್ನ ಆಲೋಚನೆಯನ್ನು ಆಚರಣೆಯಲ್ಲಿಟ್ಟು ದಿನವಿಡೀ ಹೊರಗೆ ಮಳೆ ಬೀಳುತ್ತಿದ್ದರೆ ಬೆಚ್ಚಗೆ ಅಂಗಡಿಯಲ್ಲಿ ಕುಳಿತು ಅಪ್ಪಣ್ಣನೊಂದಿಗೆ ಹರಟೆ ಹೊಡೆಯುತ್ತಾ ಕಾಲ ಕಳೆದ. ಎಷ್ಟು ಹೊತ್ತಿಗೂ ಮಳೆ ನಿಲ್ಲುವ ಸೂಚನೆಯೇ ಕಾಣಲಿಲ್ಲ. ಎಂಟು ಗಂಟೆಯ ರಾತ್ರಿಯಲ್ಲಿ ಮಳೆಯಲ್ಲಿ ಅರ್ಧ ನೆನೆಯುತ್ತಾ ಕೊಡೆಯಲ್ಲಿ ತಲೆಮರೆಸಿಕೊಂಡು ಮನೆಯ ದಾರಿ ಹಿಡಿದ.

ವರಾಂಡದಲ್ಲಿಯೇ ಮನೆಯವರೆಲ್ಲಾ ಗುಂಪುಕೂಡಿರುವುದನ್ನು ಕಂಡು ಹೇಗೆ ಮಾತನಾಡಬೇಕೋ ತಿಳಿಯದೆ ತಡವರಿಸಿದ.

"ಅಬ್ಬಬ್ಬಾ....ಏನು ಮಳೆ ಏನು ಮಳೆ....ದಿನವಿಡೀ ಕಾಲು ಹೊರಗಿಡ ಲಾಗಲಿಲ್ಲ" ಎಂದ ಹೊಸಿಲ ಬಳಿ ಹೋಗಿ ಬಟ್ಟೆ ಹಿಂಡಿಕೊಳ್ಳುತ್ತಾ.

"ಪ್ರಕಾಶ, ಸಾಂಬು ಫೇಲಾಗಿದಾನೆ ಕಣೋ!"

"ಹುಂ. ಪೇಪರ್ನಲ್ಲಿ ನೋಡಿದೆ."

"ನೋಡಿಯೂ ಇದುವರೆಗೂ ಮನೆಗೆ ಬರದೆ ಕೂತಿದ್ದೆಯೇನು?" ಕನಕ ಕೇಳಿದಳು.

"ನಾನು ಬಂದೇನು ಮಾಡಲಿ, ಅತ್ತಿಗೇ?"

"ಸಾಂಬೂನ ಹುಡುಕಬಹುದಾಗಿತ್ತಲ್ಲಾ?"

"ಸಾಂಬೂ ಮನೇಲಿಲ್ಲವೇ?" ಪ್ರಕಾಶ ಆಶ್ಚರ್ಯದಿಂದ ಪ್ರಶ್ನಿಸಿದ.

"ಬೆಳಗಿನಿಂದ ಮನೇಗೇ ಬಂದಿಲ್ಲ"

ಪ್ರಕಾಶ ಹಿಂಡುತ್ತಿದ್ದ ಬಟ್ಟೆ ಕೆಳಗೆ ಸರಿಸಿದ.

"ಆ ಕೊಡೆ, ಲಾಂದ್ರ ಹೀಗೆ ಕೊಡಿ ಅತ್ತಿಗೆ."

"ಈ ಮಳೇಲಿ ಎಲ್ಲಿಗೋ" ಶ್ರೀಹರಿ ಕೇಳಿದ.

"ಹುಡುಕೋಕೆ" ಎಂದಷ್ಟೇ ಹೇಳಿ ಪ್ರಕಾಶ ಹೊಸಿಲು ದಾಟಿದ.

"ನಾನೂ ಬರ್ತೀನಿ ಇರೋ" ಎಂದು ಪಂಚೆ ಮೇಲಕ್ಕೆತ್ತಿ ಕಟ್ಟಿ ತಮ್ಮನೊಂದಿಗೆ ಹೊರಟ ಶ್ರೀಹರಿ.

"ಹೊರಟಾಗಲೇ ತುಂಬಾ ಸುಸ್ತಾದ ಹಾಗಿದ್ದ. ತಲೆತಿರುಗಿ ಎಲ್ಲಾದರೂ

ಬಿದ್ದು ಬಿಟ್ಟಿರಲಾರ ಅಲ್ಲವೇ ಅತ್ತಿಗೆ" ಎಂದಳು ಜಾನಕಿ.

"ಇರಲಾರದು ಜಾನಕಿ. ಹಾಗೇನಾದರೂ ಆದರೆ ಜತೇಲಿರೋ ಹುಡುಗರು ಸುಮ್ಮನಿರುತ್ತಾರೆಯೋ? ಮನೆಗೆ ತಂದು ಬಿಡುತ್ತಿರಲಿಲ್ಲವೇ?" ಎಂದಳು ಕನಕ.

ರಾತ್ರಿ ಹತ್ತುಗಂಟೆಯವರೆವಿಗೂ ಅತ್ತಿಗೆ ನಾದಿನಿ ಒಬ್ಬರಿಗೊಬ್ಬರು ಧೈರ್ಯ ಹೇಳಿಕೊಳ್ಳುತ್ತಾ ಅದೇ ರೀತಿ ಕುಳಿತಿದ್ದರು. ಅನಿರೀಕ್ಷಿತವಾದ ಈ ಸಂಘಟನೆಗೆ ತತ್ತರಿಸಿ ಗೋಡೆಗೊರಗಿ ನಿಶ್ಚೇತನಳಂತೆ ಕುಳಿತಿದ್ದಳು ಶಾಂತ. ಸುಂದರಮ್ಮ ತಮ್ಮಲ್ಲಿ ತಾವೇ ಏನೇನೋ ಮಾತನಾಡಿಕೊಳ್ಳುತ್ತಾ ಕಣ್ಣೊರೆಸಿ ಕೊಳ್ಳುತ್ತಾ ಕುಳಿತಿದ್ದರು.

ಸುಮಾರು ಎರಡು ಗಂಟೆಯ ಹೊತ್ತಿಗೆ ಅಣ್ಣತಮ್ಮಂದಿರಿಬ್ಬರೂ ಕಾಲೆಳೆದುಕೊಳ್ಳುತ್ತಾ ಹಿಂತಿರುಗಿದರು.

"ಎಲ್ಲೂ ಕಾಣಲಿಲ್ಲ. ಬೆಳಗಾದ ಹೊರತು ಏನೂ ಮಾಡುವ ಹಾಗಿಲ್ಲ" ಎಂದ ಶ್ರೀಹರಿ, ನಿರಾಶೆಯಿಂದ.

"ಸಾಂಬು ಎಂಥಾ ಬಟ್ಟೆ ಹಾಕಿಕೊಂಡಿದ್ದ ಅತ್ತಿಗೇ" ಪ್ರಕಾಶ ಕೇಳಿದ.

"ಬಿಳೀ ಪ್ಯಾಂಟು. ಬಿಳೀ ಷರ್ಟ."

"ಪೋಲೀಸ್ ರಿಪೋರ್ಟ್ ಕೊಟ್ಟು ಬರ್‍ತೀನಿ."

ಪ್ರಕಾಶ ಹೋಗುವ ವೇಳೆಗೆ ಅಲ್ಲೊಬ್ಬ ಪೋಲೀಸ್ ಕುರ್ಚಿಯಲ್ಲಿ ಕುಳಿತು ತೂಕಡಿಸುತ್ತಿದ್ದ. ಪ್ರಕಾಶ ಹೇಳಿದ ವಿವರಗಳನ್ನು ತಪ್ಪುತಪ್ಪಾಗಿ ಬರೆದುಕೊಂಡ. "ಈ ತರಹದ ಹುಡುಗನನ್ನು ಕುರಿತ ಸಮಾಚಾರ ಈಗಾಗಲೇ ಏನಾದರೂ ಬಂದಿದೆಯೇ" ಎಂದು ವಿಚಾರಿಸಿದ ಪ್ರಕಾಶ.

"ಇಲ್ಲಾಂತ ಹೇಳ್ತಿದೀನಲ್ಲಯ್ಯಾ...." ಎಂದ ಅವನು ದೊಡ್ಡದಾಗಿ ಆಕಳಿಸುತ್ತಾ. ಪ್ರಕಾಶ ಗೇಟು ದಾಟುವ ಮೊದಲೇ ಅವನ ಗೊರಕೆ ಕೇಳಿಸಿತು.

ಆ ರಾತ್ರಿ ಮನೆಯಲ್ಲಾರೂ ನಿದ್ದೆ ಮಾಡಲಿಲ್ಲ. ಒಬ್ಬರೊಡನೊಬ್ಬರು ಮಾತನಾಡಲಿಲ್ಲ. ಬೆಳಗಿನ ಝಾವ ನಾಲ್ಕು ಗಂಟೆಯಾಯಿತು. ಪ್ರಕಾಶ ಎದ್ದು ಬಟ್ಟೆ ಹಾಕಿಕೊಂಡ.

"ಎಲ್ಲಿಗೋ?" ಜಾನಕಿ ಪ್ರಶ್ನಿಸಿದಳು.

"ಕೆಲಸಕ್ಕೆ. ನಮ್ಮ ಚಿಂತೆಯೊಂದಿಗೆ ಪ್ರಪಂಚಕ್ಕೇನೂ ಸಂಬಂಧ ಇಲ್ಲಕ್ಕಾ. ಎಲ್ಲರೂ ಪೇಪರಿಗೋಸ್ಕರ ಎದುರು ನೋಡುತ್ತಿರುತ್ತಾರೆ" ಎಂದ ಚಪ್ಪಲಿ ಮೆಟ್ಟಿಕೊಳ್ಳುತ್ತಾ. ಆ ದಿನ ಸಹ ಮೆಯಿಲ್ ಎರಡು ಗಂಟೆ ಲೇಟು. ಲೋಕಲ್ ಪೇಪರ್ ಮಟ್ಟಿಗೇ ಕೈಗೆ ಬಂದಿತ್ತು. ಪೇಪರಿನ ಕಟ್ಟನ್ನು ಸರಿ

ಮಾಡಿ ಸೈಕಲ್ಲಿಗೆ ಕಟ್ಟುತ್ತಿದ್ದ ಪ್ರಕಾಶನ ಕೈ ಹಠಾತ್ತಾನೆ ನಿಂತುಬಿಟ್ಟಿತು. ಪೇಪರಿನ ಮೊದಲ ಪೇಜಿನಲ್ಲಿದ್ದ ಸಮಾಚಾರ ಅವನ ಕಣ್ಣಿಗೆ ಬಿತ್ತು.

"ಪರೀಕ್ಷೆಯಲ್ಲಿ ಫೇಲಾದ ವಿದ್ಯಾರ್ಥಿಯ ಆತ್ಮಹತ್ಯೆ. ಟ್ರಂಕ್ ರೋಡಿನಲ್ಲಿ ಲಾರಿಯ ಕೆಳಗೆ ಬಿದ್ದು ಮರಣ....ಪ್ರಕಾಶ ಪಕ್ಕದ ಅಂಗಡಿಯ ಬಳಿಗೆ ಓಡಿದ. ದೀಪದ ಬೆಳಕಿನಲ್ಲಿ ವಿವರಗಳನ್ನು ಓದಿದ. "ಬಿಳೀ ಷರ್ಟು....ಬಿಳೀ ಪ್ಯಾಂಟು, ಕಾಲಿಗೆ ರಬ್ಬರ್ ಚಪ್ಪಲಿ, ಗುಂಗುರು ಕೂದಲು. ಶರೀರದ ಬಣ್ಣ ಬಿಳುಪು, ಜೇಬಿನಲ್ಲಿ 'ಎಸ್' ಎಂಬ ಇಂಗ್ಲಿಷ್ ಅಕ್ಷರ ಹೊಲಿದ ಕರ್ಚೀಫ್."

ಪ್ರಕಾಶ ಮುಂದಕ್ಕೆ ಓದಲಾರದಾದ. ಆ ಕರ್ಚೀಫ್ ಅವನಿಗೆ ಚಿರಪರಿಚಿತವಾದದ್ದು. ಹಿಂದಿನ ವರ್ಷ ಸಾಂಬು ಹುಟ್ಟಿದ ಹಬ್ಬದ ದಿನ ತಾನು ಆ ಕರ್ಚೀಫ್ ಪ್ರೆಸೆಂಟ್ ಮಾಡಿದ್ದ. ಅಪ್ಪಣ್ಣನ ಮಗಳ ಕೈಲಿ ತಾನೇ 'ಎಸ್' ಎಂಬ ಅಕ್ಷರ ಹೊಲಿಸಿದ್ದ. ಆಗ ಆ ಹುಡುಗಿ ಗುಲಾಬಿ ಬಣ್ಣದ ದಾರದಲ್ಲಿ ಕಸೂತಿ ಮಾಡುತ್ತಿದ್ದಳು. ಆ ದಾರದಲ್ಲೇ ಆ ಅಕ್ಷರ ಹೊಲಿದುಕೊಟ್ಟಿದ್ದಳು. "ಬೇರೆ ಬಣ್ಣದ ದಾರವಾಗಿದ್ದರೆ ಚೆನ್ನಾಗಿತ್ತೇನೋ" ಎಂದಿದ್ದಳು.

"ಪರವಾಗಿಲ್ಲ. ನಮ್ಮಣ್ಣನ ಕೆನ್ನೆಯ ಬಣ್ಣ ಇದೇ" ಎಂದಿದ್ದ ತಾನು ನಗುತ್ತಾ.

"ಸಾಂಬೂ....ಅಯ್ಯೋ ಸಾಂಬೂ, ಎಂಥ ಕೆಲಸ ಮಾಡಿದೆಯೋ" ಪ್ರಕಾಶ ಚಿಕ್ಕ ಮಕ್ಕಳಂತೆ ಕೂದಲು ಕಿತ್ತುಕೊಳ್ಳುತ್ತಾ ಕಣ್ಣೀರಿಟ್ಟ.

ತನ್ನ ಸೈಕಲ್ ಮೇಲಿದ್ದ ಪೇಪರಿನ ಕಟ್ಟನ್ನು ತೆಗೆದ.

"ಇನ್ನಾ ಏನಯ್ಯಾ ಆಲೋಚನೆ? ಈವತ್ತು ಎರಡುಸಲ ಸುತ್ತಬೇಕಾದ್ದೇ" ಎಂದ ರಾಮುಲು.

"ನೋಡು ರಾಮು, ಈವತ್ತು ನಂಗಿಷ್ಟು ಸಹಾಯ ಮಾಡಬೇಕು ನಿನ್ನ ಪೇಪರಿನೊಂದಿಗೆ ನನ್ನದೂ ಹಂಚಿಬಿಡು. ಇನ್ನೊಂದು ದಿನ ನಿನ್ನ ಪೇಪರ್ ನಾನು ಹಂಚುತ್ತೇನಿ" ಎಂದ ಪ್ರಕಾಶ.

ಪ್ರಕಾಶ ಎಂದೂ ತನ್ನ ಕೆಲಸವನ್ನೂ ಇನ್ನೊಬ್ಬರಿಗೆ ಒಪ್ಪಿಸುತ್ತಿರಲಿಲ್ಲ. ಏನು ಅವಶ್ಯಕತೆ ಬಂದಿದೆಯೋ ಹಂಚೋಣ ಎಂದುಕೊಂಡ ರಾಮುಲು.

"ಹಾಗೇ ಆಗಲಿ, ಕೊಡು" ಎಂದ.

ಪ್ರಕಾಶ ಒಂದು ಪೇಪರನ್ನು ತೆಗೆದುಕೊಂಡು ಕಟ್ಟನ್ನು ರಾಮುಲು ಕೈಗೆ ಕೊಟ್ಟ. ಆ ಸೈಕಲ್ಲಿನ ಮೇಲೇ ಮನೆಗೆ ಹೊರಟ. ಅಷ್ಟು ಹೊತ್ತಿಗಾಗಲೇ ಬೆಳಕು ಚೆನ್ನಾಗಿ ಬರತೊಡಗಿತ್ತು. ಪ್ರತಿದಿನವೂ ಆ ಸಮಯದಲ್ಲಿ ತಮ್ಮ

ಮನೆಯ ಮುಂಭಾಗ ಸಾರಿಸಿ ಬಗೆಬಗೆಯ ರಂಗವಲ್ಲಿಗಳಿಂದ ಅಲಂಕೃತ ವಾಗಿರುತ್ತಿತ್ತು. ಆದರೆ ಈ ದಿನ ಬಾಗಿಲ ಮುಂದೆ ಗುಡಿಸಿಯೂ ಇರಲಿಲ್ಲ. ರಾತ್ರಿ ತಾವು ನಡೆದು ಬಂದ ಕಾಲಿನ ರೊಚ್ಚು ಇನ್ನೂ ಅಲ್ಲಿ ಕಾಣುತ್ತಲೇ ಇತ್ತು.

ಶ್ರೀಹರಿ ಮನೆಯಲ್ಲಿರಲಿಲ್ಲ. ಮಿಕ್ಕವರೆಲ್ಲಾ ಪ್ರಕಾಶ ಹೊರಟಾಗ ಹೇಗೆ ಕುಳಿತಿದ್ದರೊ ಅದೇ ರೀತಿ ಕುಳಿತಿದ್ದರು. ಪ್ರಕಾಶ ಯಾರಿಗೂ ಏನೂ ಹೇಳಲಿಲ್ಲ. ಅವರ ಮಧ್ಯೆ ಪೇಪರ್ ಎಸೆದು ಕೋಣೆಯೊಳಕ್ಕೆ ಹೊರಟುಹೋದ.

ಜಾನಕಿ ಬೆಚ್ಚಿ ಪೇಪರ್ ಕೈಗೆ ತೆಗೆದುಕೊಂಡಳು. ಕನಕ ಆತುರದಿಂದ ಜಾನಕಿಯ ಮುಖ ನೋಡತೊಡಗಿದಳು.

"ಏನಕ್ಕಾ, ಏನಾಯಿತು?" ಶಾಂತ ಗಾಬರಿಯಿಂದ ಹತ್ತಿರ ಬಂದಳು. ಜಾನಕಿ ಪೇಪರ್ ಕೆಳಗೆ ಹಾಕಿ ಮುಖ ಮುಚ್ಚಿಕೊಂಡು ಅಳತೊಡಗಿದಳು.

"ಇದು ಸುಳ್ಳಕ್ಕ, ಇನ್ನ್ಯಾರನ್ನೋ ಕುರಿತು ಆಗಿರಬಹುದು" ಶಾಂತ ನಂಬಲಾರದೆ ಬಿಕ್ಕುತ್ತಾ ಹೇಳಿದಳು.

ಶ್ರೀಹರಿ ಹಿಂತಿರುಗಿ ಬಂದ.

"ಅಣ್ಣಾ ಪೇಪರ್ ನೋಡಿದೆಯೇನಣ್ಣಾ. ಇದು ಸುಳ್ಳಲ್ಲವೇನಣ್ಣಾ?" ಶಾಂತಾ ಅಳುತ್ತಳ್ಳುತ್ತಾ ಪ್ರಶ್ನಿಸಿದಳು.

"ಅದು ಸುಳ್ಳಾಗಬೇಕೆಂದೇ ಆಶಿಸಿದೆನಮ್ಮಾ. ಆದರೆ ಭಗವಂತ ನನ್ನ ಕೋರಿಕೆಯನ್ನು ಮನ್ನಿಸಲಿಲ್ಲ. ನಾನು ದುರದೃಷ್ಟವಂತನಮ್ಮಾ, ನಾನು ಪಾಪಿ! ದೇವರು ನನ್ನ ಆಸೆಗಳನ್ನೆಲ್ಲಾ ತುಳಿದುಹಾಕಿದ. ನಾನು ಕನಸಿನಲ್ಲಿಯೂ ಊಹಿಸದಿದ್ದುದನ್ನು ನನ್ನ ತಲೆಯಮೇಲೆ ಎಸೆದ. ನಾನೆಂತಹ ನಿರ್ಭಾಗ್ಯನೇ, ಶಾಂತಾ....!" ಎಂದ ಶ್ರೀಹರಿ ಕಣ್ಣೀರು ಹರಿಸುತ್ತಾ ರುದ್ಧ ಕಂಠದಿಂದ.

ಸುಂದರಮ್ಮ ಎದೆ ಬಡಿದುಕೊಳ್ಳುತ್ತಾ ನೆಲದಮೇಲೆ ಬಿದ್ದು ಉರುಳಾಡಿದರು.

"ಮಗೂ ಎಂಥಾ ಕೆಲಸ ಮಾಡಿದೆಯೋ, ನನ್ನ ಹೊಟ್ಟೆಯಲ್ಲಿ ಬೆಂಕಿ ಇಟ್ಟು ಎಲ್ಲಿ ಹೋದೆಯೋ" ಎಂದು ಅಳುತ್ತಿದ್ದರು. ಆಕೆಯ ಅಳು ಮನೆಯನ್ನೆಲ್ಲಾ ತುಂಬೆ ಬೀದಿಗೂ ವ್ಯಾಪಿಸಿತ್ತು.

"ನಿರ್ಭಾಗ್ಯಳು ನಾನಣ್ಣಾ, ಸಾಂಬು ಪರೀಕ್ಷೆ ಪಾಸಾಗಿ ಇನ್ನೂ ಓದಿ ಬೇಕಾದಷ್ಟು ಸಂಪಾದಿಸುತ್ತಾನೆ. ನನ್ನ ಆಸೆ ತೀರಿಸುತ್ತಾನೆ ಅಂದುಕೊಂಡಿದ್ದೆ. ಒಳ್ಳೆ ಮನೆ ಸೇರಿ ಸುಖ ಸಂತೋಷವಾಗಿ ಬಾಳುತ್ತೇನೆ ಅಂತ ಕನಸುಕಂಡೆ.

ನನ್ನ ಕನಸುಗಳನ್ನೆಲ್ಲಾ ಸುಳ್ಳುಮಾಡಿ ಸಾಂಬಣ್ಣ ಹೊರಟುಹೋದ. ನಿನಗೆ ಇಷ್ಟು ಒಡವೆ ಮಾಡಿಸುತ್ತೀನಮ್ಮಾ, ಇಷ್ಟು ಸೀರೆ ತರುತ್ತೀನಮ್ಮಾ ಎನ್ನುತ್ತಿದ್ದ. ಇನ್ನು ನನ್ನನ್ನ ಹಾಗೆ ಯಾರು ನೋಡ್ತಾರೆ. ನಿನಗೇನು ಬೇಕಮ್ಮಾ ಅಂತ ಯಾರು ಕೇಳ್ತಾರೆ. ಆ ದೇವರಿಗೂ ನನ್ನ ಮೇಲೆ ಕೋಪಾನೇ. ಅದಕ್ಕೇ ಸಾಂಬಣ್ಣನ ಕರಕೊಂಡುಹೋದ. ಅದಕ್ಕಿಂತ ನನ್ನ ತೆಗೆದುಕೊಂಡು ಹೋಗಿದ್ದರೆ ಎಷ್ಟು ಚೆನ್ನಾಗಿತ್ತು?" ಎಂದಳು ಶಾಂತ ಅಳುತ್ತಾ.

"ಛಿ! ಎಂಥಾ ಮನುಷ್ಯರು! ಇಷ್ಟು ಹೊತ್ತೂ ನಮಗೆ ಇದು ಆಗಲಿಲ್ಲ. ಇದು ಇಲ್ಲ ದೇವರು ಅನ್ಯಾಯ ಮಾಡಿದ ಅನ್ನೋರೇ ಹೊರತೂ ಇಪ್ಪತ್ತು ವರ್ಷವಾದರೂ ತುಂಬದ ಹುಡುಗ ನಿಮಗೋಸ್ಕರ ಬಾಯಲ್ಲಿ ಮಣ್ಣು ಹಾಕಿ ಕೊಂಡು ಹೋದ ಅನ್ನೋ ದುಃಖಾನೇ ಇಲ್ಲವೇ?" ಎಂದ ಪ್ರಕಾಶ ರೋಷ ದಿಂದ.

"ನೋಡಿದೆಯಾ ಜಾನಕಿ, ಇವನ ಮಾತನ್ನ. ನನಗೆ ಸಾಂಬು ಅಂದರೆ ಅಭಿಮಾನ ಇಲ್ಲವೇ? ನಾನು ಅವನಿಗೋಸ್ಕರ ದುಃಖಪಡುತ್ತಿಲ್ಲವೇ? ನಿನ್ನೆ ಅವನ ವಿಷಯ ತಿಳಿದಾಗಿನಿಂದ ನಾನೆಷ್ಟು ಕೊರಗುತ್ತಿದೀನೋ ದೇವರಿಗೇ ಗೊತ್ತು. ಅಣ್ಣನಿಗೆ ಹೆದರಿ ತಮ್ಮ ಆತ್ಮಹತ್ಯೆ ಮಾಡಿಕೊಂಡ ಅಂತ ಜನ ಅಂದರೆ ಹೇಗೆ ಸಹಿಸಲೀ ಜಾನಕಿ? ಹೇಗೆ ತಲೆಯೆತ್ತಿ ತಿರುಗಲಿ? ಹೂವಿನಂತೆ ಬೆಳೆಸಿದ ಸಾಂಬು ಹೀಗೇಕೆ ಮಾಡಿದ? ನಾನೇನು ತಪ್ಪುಮಾಡಿದೆ? ಭಗವಂಥಾ ನನಗೇಕೆ ಇಂಥಾ ಶಿಕ್ಷೆ?" ಶ್ರೀಹರಿ ಬೋರೆಂದು ಅಳತೊಡಗಿದ್ದ.

ಅಣ್ಣನ ದುಃಖ ಸಾಂಬು ಹೋದನೆಂದೇ ಅಥವಾ ತನ್ನನ್ನು ಲೋಕ ನಿಂದಿಸುತ್ತದೆಯೆಂದೇ? ಎನ್ನಿಸಿತು ಜಾನಕಿಗೆ. ಆದರೆ ಆ ಪರಿಸ್ಥಿತಿಯಲ್ಲಿ ಯಾವ ಮಾತೂ ಆಡುವಂತಿರಲಿಲ್ಲ. ಅವರವರ ಸ್ವಭಾವಕ್ಕೆ ತಕ್ಕಂತೆ ಅವರವರ ಆಲೋಚನೆಗಳಿದ್ದರೂ ಸೋದರನನ್ನು ಕಳೆದುಕೊಂಡ ದುಃಖ ಎಲ್ಲರಿಗೂ ಒಂದೇ ಎನ್ನಿಸಿತು.

ಆತ್ಮೀಯರನ್ನು ಕಳೆದುಕೊಂಡ ದುಃಖ ಅದನ್ನು ಅನುಭವಿಸಿದವರಿಗೆ ಮಾತ್ರವೇ ಗೊತ್ತು. ಕೆಲವರು ಗಟ್ಟಿಯಾಗಿ ಅಳಬಹುದು. ಕೆಲವರು ಒಳ ಗೊಳಗೇ ರೋದಿಸಬಹುದು. ಕೆಲವರು ಮೂಕರಂತಿರಬಹುದು. ದುಃಖ ಮೇಲಕ್ಕೆ ತೋರುವ ರೀತಿಯಲ್ಲಿ ವ್ಯತ್ಯಾಸವೇ ಹೊರತೂ ದುಃಖ ಎಲ್ಲರಿಗೂ ಸಮಾನವೇ.

* * *

ಸಾಂಬೂನ ದೇಹವನ್ನು ಪಂಚಭೂತಗಳಿಗರ್ಪಿಸಿ ಮೂರು ತಿಂಗಳು ಆಗಿತ್ತು. ಅದುವರೆವಿಗೂ ಒಟ್ಟಾಗಿದ್ದ ಕುಟುಂಬ ಸೀಳಿ ಬಿರುಕು ಬಿಟ್ಟಂತೆ ಆಗಿತ್ತು. ಒಬ್ಬರೊಡನೊಬ್ಬರು ಮಾತನಾಡಬೇಕಾದ ಆವಶ್ಯಕತೆಯಿಲ್ಲದೆಯೇ ಮನೆಯಲ್ಲಿ ಕೆಲಸ ಕಾರ್ಯ ನೆರವೇರುತ್ತಿತ್ತು. ಬೆಳಕು ಹರಿಯುವ ಮುಂಚೆಯೇ ಮನೆ ಬಿಟ್ಟು ಹೋಗುತ್ತಿದ್ದ ಪ್ರಕಾಶ ಮಧ್ಯಾಹ್ನ ಹನ್ನೆರಡು ಗಂಟೆಯನಂತರ ಮನೆಗೆ ಬಂದು ಒಂದಿಷ್ಟು ಊಟಮಾಡಿ ಹೊರಟುಹೋಗುತ್ತಿದ್ದ. ಕೆಲಸ ವಿದ್ದರೂ ಇಲ್ಲದಿದ್ದರೂ ಜಾನಕಿ ಬಾಲವಿಹಾರದಲ್ಲಿಯೇ ಹೆಚ್ಚು ಕಾಲವನ್ನು ಕಳೆಯುತ್ತಿದ್ದಳು. ಯಾರು ಬಂದರೂ ಹೋದರೂ ಸುಂದರಮ್ಮ ಗಮನಿಸು ತ್ತಿರಲಿಲ್ಲ. ಸಾಂಬಶಿವ ಹೋದಮೇಲೆ ಮಕ್ಕಳಮೇಲೆ ಮಮತೆ ಕಡಿಮೆ ಮಾಡಿ ಕೊಂಡು ಬದುಕಿನ ಮೇಲೆ ವಿರಕ್ತಿ ಹೆಚ್ಚಿಸಿಕೊಂಡಿದ್ದರು. ಮಕ್ಕಳು ದೊಡ್ಡವ ರಾದರು. ಇನ್ನು ತಾನು ಅವರಿಗಾಗಿ ಮಾಡಬೇಕಾದ್ದು ಏನಿದೆ? ಎಂದು ಕೊಳ್ಳುತ್ತಿದ್ದರು. ಮಾಡೋಣ ಅನ್ನಿಸಿದಾಗ ಕನಕನಿಗೆ ಮನೆಗೆಲಸದಲ್ಲಿ ಒಂದಿಷ್ಟು ಸಹಾಯ ಮಾಡುತ್ತಿದ್ದರು. ಇಲ್ಲದಾಗ ಒಂದು ಮೂಲೆಯಲ್ಲಿ ಕಣ್ಣು ಮುಚ್ಚಿ ಕೂಡುತ್ತಿದ್ದರು. ಅವರ ಲೋಕ ಅವರದು.

ಶಾಂತ ಬಿ.ಎಸ್ಸಿ. ಸೆಕೆಂಡ್ ಇಯರ್‌ಗೆ ಬಂದಿದ್ದಳು. ಸಾಂಬು ಹೋದ ಮೇಲೆ ಶಾಂತಳಲ್ಲಿ ತುಂಬಾ ಬದಲಾವಣೆ ಬಂದಿತ್ತು. ಮನೆಯಲ್ಲಿ ಯಾರೊಂದಿಗೂ ಹೆಚ್ಚು ಮಾತನಾಡುತ್ತಿರಲಿಲ್ಲ. ಮೊದಲಿನಂತೆ ಅದು ಬೇಕು ಇದು ಬೇಕು ಎಂದು ಅಣ್ಣಂದಿರನ್ನು ಕೇಳುತ್ತಿರಲಿಲ್ಲ. ಮನೆಯಲ್ಲಿದ್ದರೂ ಪುಸ್ತಕ ಹಿಡಿದು ಏಕಾಂತವಾಗಿ ಕೂಡುತ್ತಿದ್ದಳು. ಸಾಮಾನ್ಯವಾಗಿ ದಿನದಲ್ಲಿ ಬಹಳ ಹೊತ್ತನ್ನು ಹೊರಗೇ ಕಳೆಯುತ್ತಿದ್ದಳು. ಒಂದೊಂದು ಸಲ ಜಾನಕಿ ಮನೆಗೆ ಬಂದರೂ ಶಾಂತ ಬಂದಿರುತ್ತಿರಲಿಲ್ಲ.

"ಇಷ್ಟು ಹೊತ್ತಾದಮೇಲೆ ಕಾಲೇಜಿನಲ್ಲಿ ಕ್ಲಾಸಿರುತ್ತೇನೆ, ಶಾಂತಾ?" ಎಂದಳು ಒಂದು ದಿನ ಜಾನಕಿ.

"ಲೈಬ್ರೆರಿಯಲ್ಲಿ ಕೆಲಸವಿತ್ತು."

ಶಾಂತ ಬಹಳ ಸಲ ಇದೇ ಉತ್ತರ ಹೇಳಿದ್ದಳು. ಜಾನಕಿ "ದಿನಾ ಲೈಬ್ರೆರಿ ಯಲ್ಲಿ ಏನು ಕೆಲಸವಿರುತ್ತೆ? ಅದಕ್ಕೂ ಮುಚ್ಚಲು ವೇಳೆ ಇರೊಲ್ಲವೇ?" ಎಂದು ಕೇಳಿದಳು ಜಾನಕಿ.

"ನೀನು ಕಾಲೇಜಿನಲ್ಲಿ ಓದಿಕೊಂಡಿದ್ದರೆ ಏನು ಕೆಲಸವಿರುತ್ತೆ ಅನ್ನೋದು ತಿಳಿಯೋದು. ಬಿ.ಎಸ್ಸಿಗೆ ಎಷ್ಟು ಪುಸ್ತಕಬೇಕೋ ಗೊತ್ತಾ ನಿನಗೆ? ಎಂದಾ ದರೂ ಕೇಳಿದೆಯಾ? ಬೇಕಾದ್ದರಲ್ಲಿ ಕಾಲು ಭಾಗಾನೂ ಇಲ್ಲ ನನ್ನ ಹತ್ತಿರ.

ಮಿಕ್ಕ ಎಲ್ಲಾದಕ್ಕೂ ಲೈಬ್ರೆರಿಯಲ್ಲಿ ಕುಳಿತು ನೋಟ್ಸ್ ಬರಕೋತೀನಿ. ತಲೆ ಚಿಟ್ಟು ಹಿಡಿಯೋ ಹಾಗೆ ವರ್ಕ್ ಮಾಡಿಕೊಂಡು ಬಂದರೆ ಇಲ್ಲಿ ಈ ರಾಮಾಯಣ"—ಬಿರುಸಾಗಿ ನುಡಿದಳು ಶಾಂತ.

ಅಂದಿನಿಂದ ಜಾನಕಿ ಶಾಂತನನ್ನು ಈ ಬಗ್ಗೆ ಏನೂ ಕೇಳುತ್ತಿರಲಿಲ್ಲ. ಶಾಂತ ಇನ್ನೂ ಚಿಕ್ಕ ಹುಡುಗಿಯೇನಲ್ಲ. ಅವಳ ಒಳಿತು-ಕೆಡಕುಗಳನ್ನು ಅವಳು ನೋಡಿಕೊಳ್ಳಬಲ್ಲಳು. ಅವಳ ಮಾರ್ಗವನ್ನು ಅವಳೇ ನಿರ್ಣಯಿಸಿಕೊಳ್ಳಲಿ ಎಂದುಕೊಂಡಳು.

ಸಾಂಬು ಮರಣದ ನಂತರ ಶ್ರೀಹರಿ ತಾನು ಪೂರ್ತಿ ಅಶಕ್ತನಾದಂತೆ ಭಾವಿಸಿಕೊಂಡಿದ್ದ. ತನಗೆ ಒತ್ತಾಸೆಯಾಗಿದ್ದ ತಾಯಿ ಮೂಕಳಂತೆ ಒಂದು ಮೂಲೆಯಲ್ಲಿ ಕುಳಿತಿರುತ್ತಿದ್ದಳು. ಆಸರೆಯಾಗಿ ನಿಲ್ಲುವನೆಂದುಕೊಂಡಿದ್ದ ತಮ್ಮ ಕಣ್ಣುಮುಚ್ಚಿದ್ದ. ಇನ್ನು ಮಿಕ್ಕವರು ಕುತ್ತಿಗೆಯ ಮೇಲಿಟ್ಟ ಕತ್ತಿಗಳಂತಹ ಇಬ್ಬರು ಹೆಣ್ಣುಮಕ್ಕಳು. ನೀತಿ-ಜಾತಿ ಲಕ್ಷಿಸದ ತಮ್ಮನೊಬ್ಬ.

ತನ್ನ ಹಣ ತಿನ್ನುತ್ತಾ ತನ್ನ ಮೇಲೆ ಕತ್ತಿಕಟ್ಟೋ ಜನ. ಹೇಗಾದರೂ ಮಾಡಿ ಇವರಿಂದ ದೂರವಾಗಬೇಕು. ತನ್ನ ಕುಟುಂಬಕ್ಕೇನಾದರೂ ಉಳಿಸ ಬೇಕು. ಇದ್ದಷ್ಟು ತಿನ್ನೋದರ ಹೊರತು ಬೇಕು ಅಂದಾಗ ಒಂದು ಪೈಸಾ ಕೂಡಾ ಕೊಡೋರಲ್ಲ ಇವರು ಎಂದುಕೊಂಡ.

ಯಾವುದೋ ಒಂದು ಸಂಬಂಧ ನೋಡಿ ಶಾಂತನಿಗೆ ಮದುವೆ ಮಾಡಿ ಬಿಡಬೇಕು. ಪ್ರತಿ ತಿಂಗಳೂ ಫೀಸು ಕಟ್ಟುತ್ತಾ ಅವಳನ್ನು ಓದಿಸುವ ಶಕ್ತಿ ತನಗಿಲ್ಲ. ಎಷ್ಟು ಓದಿಸಿದರೂ ತಂಗಿಗೆ ಮದುವೆ ಮಾಡಲಿಲ್ಲವೆಂಬ ಅಪಖ್ಯಾತಿ ತಪ್ಪಿದ್ದಲ್ಲ....

ಪ್ರಕಾಶನೊಂದಿಗೂ ಹಣದ ವಿಷಯದಲ್ಲಿ ಖಂಡಿತವಾಗಿ ಮಾತನಾಡ ಬೇಕು. ಅವನಿಗಿಷ್ಟ ಬಂದಾಗ ಐದೋ ಹತ್ತೋ ಕೊಡೋದು ಅಂತಲ್ಲದೆ ತಿಂಗಳಿಗಿಷ್ಟು ಅಂತ ಏರ್ಪಾಟು ಮಾಡಿಕೋಬೇಕು. ತಾನು ಸಂಪಾದಿಸೋ ಹಣಾನ ಅಸಲಿಗೆ ಸೇರಿಸಿಕೊಳ್ಳುತ್ತಾ ವ್ಯಾಪಾರ ಹೆಚ್ಚಿಸಿಕೊಂಡರೆ ಕೂಡಿಸಿ ಅನ್ನ ಹಾಕೋಕೆ ನನಗೆ ತಾನೇ ಎಲ್ಲಿಂದ ಬರಬೇಕು? ಅವನ ಹಣ ಅವನಿಗೆ ಹೆಚ್ಚಾದರೆ ನನಗೇನು ಬಿಟ್ಟಿ ಬರುತ್ತದೆಯೇ?

ಇದುವರೆವಿಗೂ ತಾನು-ಕನಕ ಹೇಗೋ ಹಾಗೆ ಬದುಕಲಾರೆವೇ ಎಂದು ಕೊಂಡು ಹಿಂದೆಮುಂದೆ ನೋಡದೆ ಅವರಿಗೋಸ್ಕರ ಖರ್ಚುಮಾಡಿದ್ದ.

"ಇನ್ನು ನಮ್ಮ ಸಂಸಾರ ದೊಡ್ಡದಾಗೋ ಹಾಗಿದೆ" ಎಂದಿದ್ದಳು. ಕನಕ ಈ ಮಧ್ಯೆ ಒಂದು ದಿನ ಒಬ್ಬರಹಿಂದೊಬ್ಬರು ಹುಟ್ಟಿ ಬಂದರೆ ಅವರನ್ನು

ಬೆಳೆಸಬೇಡವೇ? ತನಗೋಸ್ಕರ ತನ್ನ ಮಕ್ಕಳಿಗೋಸ್ಕರ ಯಾರು ನೋಡು ತ್ತಾರೆ? ಆ ಆಸೆ ಸಾಂಬುನೊಂದಿಗೇ ಹೊರಟುಹೋಗಿತ್ತು.

ಈ ಜಾನಕಿ ಒಬ್ಬಳು ಏನಾದರೂ ಅಂದರೆ ನನ್ನ ಭಾರ ನಿನ್ನ ಮೇಲೇ ನಿದೆ? ನನ್ನ ಹೊಟ್ಟೆಬಟ್ಟೆಗೆ ನಾನು ಸಂಪಾದಿಸುತ್ತಿದೀನಿ ಎನ್ನುತ್ತಾಳೆ. ಕೆಲಸ ಮಾಡುತ್ತಿರೋದು ನಿಜಾನೇ ಹಣ ಸಂಪಾದಿಸುತ್ತಿರೋದು ನಿಜಾನೇ. ಅಂದ ಮಾತ್ರಕ್ಕೆ ಅಣ್ಣನಿಗೆ ಬಾಧ್ಯತೆ ಇರೊಲ್ಲವೇ?

"ನಿಮ್ಮ ತಂಗಿಯೊಂದಿಗೆ ಆಗಾಗ ಕಾಣಿಸುತ್ತಿರುತ್ತಾನಲ್ಲಾ! ಆತ ಯಾರಯ್ಯಾ? ನಿಮ್ಮ ಭಾವನೇ?"

"ನಿನ್ನ ತಂಗೀನ ಅತ್ತೆಮನೆಯವರು ಕರೆದುಕೊಂಡು ಹೋಗಲಿಲ್ಲಾಂತ ಕೇಳಿದೆವಲ್ಲಾ...."

"ಅಲ್ಲನಯ್ಯಾ, ಈತನ ತಂಗೀನೇ ಗಂಡನನ್ನ ಬಿಟ್ಟು...."

ಅರಿತೂ ಅರಿಯದವರಂತೆ ಎಲ್ಲರೂ ಮುಖದ ಮೇಲೆ ಕೇಳುತ್ತಿದ್ದರೆ ಅವರಿಗೆ ಉತ್ತರ ಹೇಳಲಾರದೆ ತಲೆತಗ್ಗಿಸುವಂತಾಗಿತ್ತು.

"ಬಾವ ಅಲ್ಲ. ಅವರ ಬಾಸ್."

"ಅದೇ ನಾವೂ ಅಂದುಕೋತಿದೀವೀನ್ನು. ದುಡ್ಡಿದ್ದೋನಹಾಗೇ ಕಾಣ್ತಾನೆ."

ಈ ರೀತಿ ನಡೆಯುತ್ತಿದ್ದ ಸಂಭಾಷಣೆಯಿಂದ ಹೊರಬರಲಾರದೆ ಅವರ ಮಾತುಗಳನ್ನು ಕೇಳಲೂ ಆಗದೆ ಒದ್ದಾಡುತ್ತಿದ್ದ.

ಒಂದು ವರ್ಷದ ಹಿಂದೆ ತನಗೆ ಈ ಬುದ್ಧಿ ಇದ್ದಿದ್ದರೆ ಜಾನಕಿ ಲಕ್ಷಣ ವಾಗಿ ಅತ್ತೆಮನೆಯಲ್ಲಿರುತ್ತಿದ್ದಳು.

'ಅಪ್ಪ ಹೋದಮೇಲೆ ಬಹಳ ದಿನ ಕಾದು ನೋಡಿದೆವು. ನಿಮ್ಮಿಂದ ಏನಾದರೂ ಸಮಾಚಾರ ಬರುತ್ತೇನೋ ಜಾನಕಿಯನ್ನು ಕರೆದುಕೊಂಡು ಬರೋಣ ಅಂತ. ಹಠ ಹಿಡಿದು ಅನ್ಯಾಯವಾಗಿ ಆ ಹುಡುಗಿಯ ಬಾಳು ಹಾಳು ಮಾಡೋದು ಯಾಕೇಂತ. ಆದರೆ ನೀವು ಯಾರೂ ಈ ಕಡೆ ತಿರುಗಿ ಸಹ ನೋಡಲಿಲ್ಲ. ಹೆಣ್ಣು ಹೆತ್ತವರಿಗೇ ಅಷ್ಟು ಲಕ್ಷ್ಯವಿಲ್ಲದಿದ್ದರೆ....ಈಗ ನಾನೇನು ಮಾಡಲಿ ಹೇಳಿ? ಅಗೋ ನನ್ನ ಹೆಂಡತಿ....ತೊಟ್ಟಿಲಲ್ಲಿ ಮಗು.... ಮರ್ಯಾದಸ್ಥರ ಮನೆತನ ನಮ್ಮದು. ಕೋರ್ಟಿಗೆ ಹೋಗಿ ಅಪನಿಂದೆ ತಂದು ಕೊಳ್ಳೋದು ನನಗಿಷ್ಟವಿಲ್ಲ. ನಿಮ್ಮ ತಂಗಿಯ ಜೀವನಾಂಶಕ್ಕೆ ನಾನೆಷ್ಟು ಕೊಡಬೇಕೋ ಹೇಳಿದರೆ ಕೊಟ್ಟುಬಿಡುತ್ತೇನಿ' ಎಂದಿದ್ದ ಜಾನಕಿಯ ಗಂಡ.

ಮನೆಯಲ್ಲಿ ಲಕ್ಷ್ಮೀದೇವಿಯಂತೆ ಲಕ್ಷಣವಾಗಿದ್ದು ಓಡಾಡುತ್ತಾ ಕೆಲಸ

ಕಾರ್ಯ ಮಾಡಿಕೊಳ್ಳುತ್ತಿದ್ದ ಹೆಂಡತಿ. ಮುದ್ದಾದ ಮಗು ಆತನಿಗೇನು? ಅದೃಷ್ಟವಂತ. ಶನಿ ತನ್ನ ಕೊರಳಿಗೇ ಸುತ್ತಿಕೊಂಡಿತ್ತು. ಹಣೆಯಲ್ಲಿ ಬರೆದದ್ದನ್ನು ಅನುಭವಿಸದಿದ್ದರೆ ಆಗುತ್ತದೆಯೇನು? ಎಂದುಕೊಂಡ ಶ್ರೀಹರಿ.

ಶ್ರೀಹರಿಯ ಆಲೋಚನೆಗಳೊಂದೂ ಕಾರ್ಯರೂಪಕ್ಕೆ ಬಾರದೆಯೇ ಮತ್ತೆರಡು ತಿಂಗಳು ಕಳೆದುಹೋದುವು. ಮನೆಯಲ್ಲಿ ಆರ್ಥಿಕ ಪರಿಸ್ಥಿತಿ ಹಿಂದಿನಕ್ಕಿಂತ ಸುಧಾರಿಸಿದ್ದರೂ ಶ್ರೀಹರಿಗೆ ದುಡ್ಡಿನ ತಾಪತ್ರಯ ಹಾಗೆಯೇ ಇತ್ತು. ಹೆಚ್ಚುಕಡಿಮೆ ಮನೆಯ ಬೆಲೆಯೆಷ್ಟಾಗುತ್ತಿತ್ತೋ ಅಷ್ಟುದ್ದ ಬೆಳೆದ ಸಾಲವನ್ನೂ ತೀರಿಸಿ ಮನೆಯನ್ನುಳಿಸಿಕೊಳ್ಳಬೇಕೆಂಬ ತಾಪತ್ರಯ ಸಹ ಆಗಲೇ ಹುಟ್ಟಿತ್ತು. "ಮೂವರೂ ಒಂದಿಷ್ಟು ಸಂಪಾದಿಸುತ್ತಿದೇವಲ್ಲಾ ತಿಂಗಳಿಗೆ ಇಷ್ಟೂಂತ ಮನೆಯ ಮೇಲಿನ ಸಾಲ ತೀರಿಸಿದರೆ ಚೆನ್ನಾಗಿರುತ್ತದೆಯಲ್ಲವೇ?" ಎಂದ ಶ್ರೀಹರಿ.

"ಏನು ಪ್ರಯೋಜನ ಅಣ್ಣಾ. ಇಷ್ಟು ಮುಳುಗಿದಮೇಲೆ ಇನ್ನು ಮನೆ ಉಳಿಸಿಕೊಳ್ಳಬೇಕೂ ಅನ್ನೋದರಲ್ಲಿ ಅರ್ಥವಿಲ್ಲ. ಬೂದಿಯಲ್ಲಿ ಸುರಿದ ಪನ್ನೀರಿನಂತೆ ಈ ಸಾಲದಲ್ಲಿ ಹಣ ಹಾಕುವುದಕ್ಕಿಂತ ಮತ್ತೆ ಯಾವುದಕ್ಕಾದರೂ ಉಪಯೋಗಿಸಿದರೆ ಒಳ್ಳೇದು. ಮನೆ ಕೂಡಾ ತುಂಬಾ ಹಳೇದು."

"ಮತ್ಯಾವುದಕ್ಕಾದರೂ ಅಂದರೆ ಮತ್ತಷ್ಟು ಪುಸ್ತಕ ಕೊಂಡು ಅಂಗಡಿ ದೊಡ್ಡದು ಮಾಡಿದರೆ ಚೆನ್ನಾಗಿರುತ್ತೇಂತ ನಿನ್ನ ಅಭಿಪ್ರಾಯವೇನು? ಹೌದು ಮತ್ತೆ. ಇರೋಕೆ ಮನೆ, ಅನ್ನ ಹಾಕೋಕೆ ಅಣ್ಣ ಇದ್ದರೆ ಸಂಪಾದನೆನೆಲ್ಲಾ ಅಸಲಿಗೆ ಸೇರಿಸಿಕೊಂಡು ದೊಡ್ಡ ಕೋಟ್ಯಾಧೀಶ್ವರನಾಗಬೇಕೂಂತ ಎಲ್ಲರಿಗೂ ಅನ್ನಿಸುತ್ತೆ. ಬ್ಯಾಂಕಿನಲ್ಲೊಂದು ಹತ್ತು ಸಾವಿರ ಹಾಕಿಟ್ಟುಕೊಳ್ಳೋಣಾಂತ ನನಗೂ ಇದೆ. ಆದರೆ ನನಗೆ ಯಾರೂ ಅಂತಹ ಅಣ್ಣಂದಿರಿಲ್ಲ."

"ನಿನಗೆ ಕೊಡದೆ ನಾನು ಹಣ ಕೂಡಿಡ್ತಾ ಇದೀನಿ ಅಂತತಾನೇ ನಿನ್ನ ಅಭಿಪ್ರಾಯ? ನಂಗಂಥಾದ್ದೇನಿಲ್ಲ. ಹಣ ತಂದು ನಿನ್ನ ಕೈಗೆ ಕೊಡು ಅಂದರೂ ಕೊಡ್ತೀನಿ. ಆದರೆ ಕೂತು ತಿಂದರೆ ಅದು ಯಾವ ಮೂಲೆಗೆ ಸಾಕು? ನಾನು ಅಂಗಡಿಮೇಲೆ ಹಣ ಹಾಕಿದರೂ ಮನೆಗೆ ಖರ್ಚು ಮಾಡಿದರೂ ನನಗೊಬ್ಬನಿಗೋಸ್ಕರ ಮಾತ್ರ ಅಲ್ಲಣ್ಣ. ನಮ್ಮೆಲ್ಲರ ಕ್ಷೇಮಕ್ಕಾಗಿಯೇ ಮಾಡ್ತೀನಿ. ಎಲ್ಲರೂ ಚೆನ್ನಾಗಿರಬೇಕೂಂತಲೇ ನನ್ನ ಆಸೆ. ಪ್ರತಿಯೊಂದಕ್ಕೂ 'ಅಸಲು' ಇರಬೇಕಣ್ಣಾ. ಸುಖಜೀವನಕ್ಕೆ ಪರಿಶ್ರಮವನ್ನೇ ಇಡುಹಣವನ್ನಾಗಿಟ್ಟು ಮುಂದಕ್ಕೆ ಬರಬೇಕೆಂಬುದು ನನ್ನ ಯತ್ನ."

"ಹೌದೋ, ನೀನು ದಿನದಿನಕ್ಕೂ ನಿನ್ನ ಕೆಲಸದಲ್ಲಿ ಮುಂದುವರಿಯು

ತ್ತ್ರಲೇ ಇದ್ದಿ. ಪೇಪರ್ ಹುಡುಗನಾಗಿ ಪ್ರಾರಂಭಿಸಿಪೇಟೇಲಿ ಪುಸ್ತಕದ ಅಂಗಡಿ ಯಜಮಾನನಾದೆ. ಎಂದಿಗೂ ಬದಲಾಯಿಸದ್ದು, ಹೆಚ್ಚಾಗದ್ದು ನನ್ನ ಸಂಬಳ. ನೀವೆಲ್ಲಾ ದೊಡ್ಡೋರಾಗಿ ಬೇಕಾದ್ದು ಸಂಪಾದಿಸಿಕೋತಾ ಇದ್ದರೆ ನಾನು ಹೀಗೇ ಉಡೋಕಿಲ್ಲದೆ, ತಿನ್ನೋಕೆ ಸಾಲದೆ ಒದ್ದಾಡುತ್ತಾ ಕಣ್ಣು ಮುಚ್ಚು ತ್ತೀನಿ. ನಾನು ಸತ್ತಮೇಲೆ ನನ್ನ ಹೆಂಡತಿಮಕ್ಕಳು ಭಿಕ್ಷೆಬೇಡುತ್ತ ನಿಮ್ಮ ಮನೆ ಬಾಗಿಲಿಗೆ ಬಂದರೆ ನಿಮಗೆ ತೋಚಿದಷ್ಟು ಭಿಕ್ಷ ಹಾಕಿ ಹೋಗು ಅಂತೀರಿ. ಅದಕ್ಕೆ ನಿಮ್ಮನ್ನು ಆಕ್ಷೇಪಿಸೋಲ್ಲ ನಾನು. ತಿಳಿಗೇಡಿತನದಿಂದ ನಾನೇ ಕೈ ಸುಟ್ಟುಕೊಂಡೆ. ಈಗೇನಂದುಕೊಂಡು ಏನು ಪ್ರಯೋಜನ?"

"ನೀನು ಹೀಗೇಕೆ ಮಾತನಾಡುತ್ತಿದೀಯೋ ನನಗರ್ಥವಾಗುತ್ತಿಲ್ಲಣ್ಣಾ. ನೀನೂ ನಾನೂ ಬೇರೆ ಎಂದು ನೀನೇಕೆ ಭಾವಿಸುತ್ತಿದಿಯೋ ಕಾಣೆ. ಮನುಷ್ಯರ ಅಭಿಮಾನವನ್ನು ಹಣದ ಮೂಲಕ ಅಳೆಯಬೇಕೆಂದು ನೀನಂದು ಕೊಳ್ಳುವುದಾದರೆ ನಿನ್ನಮೇಲೆ ನನಗಿರುವ ಅಭಿಮಾನವನ್ನು ತೋರಿಸಿಕೊಳ್ಳಲು ನಾನೆಷ್ಟು ಹಣ ಕೊಡಬೇಕು ಅಂತಿಯೋ ಹೇಳು....ಮನುಷ್ಯ ಬದುಕಲು ಹಣ ಬೇಕು, ನಿಜ. ಆದರೆ ಮನುಷ್ಯನನ್ನು ಮನುಷ್ಯ ಕೊಲ್ಲಲೂ ಅದೇ ಕಾರಣವಾಗುತ್ತಿದೆ. ಮನುಷ್ಯರ ಮಧ್ಯೆ ಅಭಿಮಾನ ತಲೆಯೆತ್ತಲೂ, ನಿರ್ಮೂಲ ಗೊಳ್ಳಲೂ ಅದೇ ಕಾರಣವಾಗುತ್ತಿದೆ. ಈ ಚಕ್ರದಲ್ಲಿ ಸಿಕ್ಕಿಕೊಳ್ಳಲು ನನಗಿಷ್ಟ ಇಲ್ಲಣ್ಣಾ. ಆಶಯ, ಗುರಿ ಬೇರೆಯಾದ್ದರಿಂದ ತಮ್ಮಂದಿರು ಬೇರೆಯಾದರೆ ಪರವಾಗಿಲ್ಲ. ಆದರೆ ದುಡ್ಡಿಗೋಸ್ಕರ....ಬೇಡಣ್ಣಾ....ಹಾಗೆಂದಿಗೂ ನಡೆಯು ಗೊಡಲಾರೆ ನಾನು. ನಿನ್ನ ದುಡ್ಡಿನ ಮೇಲೆ ನನಗೆ ಪೂರ್ತಿ ಅಧಿಕಾರ ಇದೆ ಯೆಂಬ ಅಭಿಪ್ರಾಯದಿಂದಲೇ ಇದುವರೆವಿಗೂ ನಾನು ಎರಡು ಹೊತ್ತೂ ಹೊಟ್ಟೆ ತುಂಬಾ ಊಟಮಾಡಿ ಅರಗಿಸಿಕೋತಾ ಇದೀನಿ. ಹಾಗಲ್ಲದಿದ್ದಲ್ಲಿ 'ಇದೋ ನನ್ನ ಊಟ ತಿಂಡಿಯ ಖರ್ಚು'—ಎಂದು ತಿಂಗಳಿಗಿಷ್ಟು ಹಣ ನಿನ್ನ ಕೈಲಿಡುತ್ತಿದ್ದೆ. ನಿನ್ನ ಅಭಿಪ್ರಾಯ ಅದೇ ಆಗಿದ್ದಲ್ಲಿ ಹಾಗೆ ಕೊಡಲು ನನಗೇನೂ ಅಭ್ಯಂತರವಿಲ್ಲ. ಆದರೆ ಅದರಿಂದ ನಮ್ಮಿಬ್ಬರ ಮಧ್ಯೆ ಏರ್ಪಡುವ ದೂರವನ್ನು ಕುರಿತು ಆಲೋಚಿಸಿ ನೋಡಣ್ಣಾ, ಒಂದು ಸಲ!" ಎಂದ ಪ್ರಕಾಶ.

ಶ್ರೀಹರಿ ಇದಕ್ಕೇನೂ ಜವಾಬು ಕೊಡಲಿಲ್ಲ. ಆನಂತರವೂ ಪ್ರಕಾಶ, "ಇದೋ ನನ್ನ ಊಟ ತಿಂಡಿಯ ಹಣ" ಅಂತ ಅಣ್ಣನ ಕೈಗೆ ದುಡ್ಡು ಕೊಡ ಲಿಲ್ಲ. ಮನೆಯಲ್ಲಿನ ತನ್ನ ಬಾಧ್ಯತೆ ಅದಕ್ಕಿಂತ ಗುರುತರವಾದದ್ದೆಂದೂ, ಈ ರೀತಿ ಹಣ ಕೊಟ್ಟರೆ ಅದನ್ನು ಕಡಿಮೆ ಮಾಡಿದಂತಾಗುವುದೆಂದೂ ಅವನ ಅಭಿಪ್ರಾಯ.

ಸಾಧಾರಣವಾಗಿ ಮನೆಯಲ್ಲೇನಾದರೂ ಸಾಮಾನು ಮುಗಿದು ಹೋದರೆ ಪ್ರಕಾಶನಿಗೆ ಹೇಳುವುದೂ ಅವನು ತರುವುದೂ ಅಭ್ಯಾಸ. ತಿಂಗಳ ಮೊದಲಲ್ಲಿ ಸಂಬಳ ಬಂದಕೂಡಲೇ ಶ್ರೀಹರಿ ಮನೆಗೆ ಬೇಕಾದ ವಸ್ತುಗಳನ್ನು ತಂದುಹಾಕುತ್ತಿದ್ದ. ಮಿಕ್ಕದ್ದನ್ನು ಪ್ರಕಾಶ ನೋಡಿಕೊಳ್ಳುತ್ತಿದ್ದ. ಆ ತಿಂಗಳು ಶ್ರೀಹರಿ ಪೇಟೆಗೆ ಹೋಗಲು ಯಾವ ಕಾರಣಕ್ಕಾಗಿಯೋ, ಅಥವಾ ಅಕಾರಣ ವಾಗಿಯೋ ಆಗಲಿಲ್ಲ. ಹೊರಗೆ ಹೋಗುತ್ತಾ, "ಪ್ರಕಾಶ, ಮನೇಲಿ ಸಾಮಾನು ಮುಗಿದಿದೆ ಅಂತಿದಾಳೆ ನಿಮ್ಮತ್ತಿಗೆ. ಒಂದು ಸಲ ಪೇಟೆಗೆ ಹೋಗಿ ಬಾ" ಎಂದ. ಪ್ರಕಾಶನಿಗೆ ಅರ್ಥವಾಯಿತು.

'ಎಂಥ ಮನುಷ್ಯರು' ಎಂದುಕೊಂಡ.

ಈ ಅಭ್ಯಾಸ ಪ್ರಾರಂಭವಾದಮೇಲೆ ಪ್ರಕಾಶನಿಗೆ ಭಾರ ಹೆಚ್ಚಾದಂತಲ್ಲದೆ ಕಡಿಮೆಯಾದಂತೆ ಅನ್ನಿಸಿತು. ಹಣದಿಂದ ಇಷ್ಟು ಸುಲಭವಾಗಿ ಬಾಧ್ಯತೆ ಗಳನ್ನು ತಪ್ಪಿಸಿಕೊಳ್ಳಬಹುದೆಂದು ತಿಳಿದುಬಂತು. ದಿನದಿನಕ್ಕೆ ತಾನು ಅಣ್ಣನ ಋಣ ತೀರಿಸುತ್ತಿದೇನೆ ಸ್ವೇಚ್ಛೆ ಪಡೆಯುತ್ತಿದೇನೆ ಎನ್ನಿಸತೊಡಗಿತು.

ತನಗೆ ಬಿಡುವಾದಾಗ ಬಂದು ಊಟಮಾಡಿ ಹೋಗುವುದೊಂದೇ ಆ ಮನೆಯೊಂದಿಗೆ ತನ್ನ ಸಂಬಂಧ ಎನ್ನಿಸತೊಡಗಿತು. ಒಂದೊಂದು ದಿನ ಬೆಳಕು ಹರಿಯುವ ಮುಂಚೆಯೇ ಹೋಗಿ ರಾತ್ರಿಗೆ ಹಿಂತಿರುಗುತ್ತಿದ್ದ. ಸಾಂಬು ಹೋದಾಗಿನಿಂದ ಸುಂದರಮ್ಮನ ಸ್ವಭಾವವೇ ಬದಲಾಗಿತ್ತು. ಮನೆಯಲ್ಲಿ ಯಾರಿದಾರೆ, ತಿಂದರೇ ಇಲ್ಲವೇ ಎಂದು ನೋಡಿಕೊಳ್ಳುತ್ತಿರಲಿಲ್ಲ ತಮ್ಮ ಊಟಕ್ಕೆ ಬಂದಿಲ್ಲವೆಂದು ತಿಳಿದರೂ ಶ್ರೀಹರಿ ಗಮನಕ್ಕೆತಂದುಕೊಳ್ಳುತ್ತಿರಲಿಲ್ಲ.

"ಏನಯ್ಯ ಪ್ರಕಾಶ ಮನೆಗೆ ಊಟಕ್ಕೆ ಬರೋದೂ ಬಿಟ್ಟೆ. ಅತ್ತಿಗೆಯು ಕೈ ಊಟ ಬೇಜಾರಾಯಿತೇನು?" ನಗುತ್ತಾ ಕೇಳುತ್ತಿದ್ದಳು ಕನಕ.

ಆ ನಗೆಯ ಹಿಂದಿದ್ದ ವ್ಯಥೆಯನ್ನು ಪ್ರಕಾಶ ಮಾತ್ರವೇ ಅರ್ಥಮಾಡಿ ಕೊಳ್ಳಬಲ್ಲ. ಇನ್ನೊಂದು ದಿನ ಮಧ್ಯಾಹ್ನ ಊಟಕ್ಕೆ ಮನೆಗೆ ಬರಲಾಗಲಿಲ್ಲ ಪ್ರಕಾಶನಿಗೆ. ಎರಡು ಗಂಟೆ ದಾಟಿದ ಮೇಲೆ ತಲೆನೋವು ಹೆಚ್ಚಾಗಿ ಅಪ್ಪಣ್ಣ ನನ್ನು ಕೂಡಿಸಿ ಮನೆಗೆ ಹೋದ. ಮನೆಗೆ ಬರುವ ವೇಳೆಗೆ ಕನಕ ಸೆರಗು ಹಾಸಿ ಕೊಂಡು ನಡುಮನೆಯಲ್ಲಿ ಮಲಗಿ ನಿದ್ದೆಮಾಡುತ್ತಿದ್ದಳು. ಎರಡು ಮಣೆ ಹಾಕಿ ತಟ್ಟೆ ಇರಿಸಿತ್ತು.

"ಇದೇನತ್ತಿಗೆ, ನೀವಿನ್ನೂ ಊಟ ಮಾಡಲಿಲ್ಲವೇ? ಇಷ್ಟು ಹೊತ್ತಿನ ವರೆಗೂ ನನಗೋಸ್ಕರ ಏಕೆ ಕಾದುಕೊಂಡಿದೀರಿ?" ಎಂದ.

"ಇಲ್ಲ ಕಣೋ. ಎಲ್ಲರೂ ಊಟಮಾಡಿದ ಮೇಲೆ ಸ್ವಲ್ಪ ಚಿಲ್ಲರೆ ಕೆಲಸ

ಇತ್ತು. ಅದನ್ನು ನೋಡಿ ಮುಗಿಸೋಹೊತ್ತಿಗೆ ನೀನು ಬರೋ ಹೊತ್ತಾಗಿತ್ತು. ಇಬ್ಬರೂ ಜೊತೇಲಿ ಊಟ ಮಾಡೋಣಾಂತ ಹಾಗೇ ಮಲಗಿದೆ. ಜೊಂಪು ಹತ್ತಿಬಿಟ್ಟಿದೆ" ಎಂದಳು ಕನಕ.

ಪ್ರಕಾಶನಿಗೆ ಆಗ ಊಟಮಾಡುವ ಮನಸ್ಸಿರಲಿಲ್ಲ. ಹನ್ನೊಂದು ಗಂಟೆಯಲ್ಲಿ ಸ್ವಲ್ಪ ತಿಂಡಿ ತಿಂದಿದ್ದ. ಆದರೆ ತನಗೋಸ್ಕರ ಅತ್ತಿಗೆ ಕಾದಿದ್ದುದನ್ನು ನೋಡಿ ತಾನೂ ಕುಳಿತು ಊಟದ ಶಾಸ್ತ್ರ ಮಾಡಿದ.

"ಅತ್ತಿಗೆ ನೀವು ಹೀಗೆ ನನಗೋಸ್ಕರ ಕಾಯಬಾರದು ನಾನು ಹೊತ್ತಿಗೆ ಸರಿಯಾಗಿ ಬಾರದ ದಿನ ಒಂದು ಬಟ್ಟಲಲ್ಲಿ ಅನ್ನ ಪಲ್ಯ ಹಾಕಿಡಿ. ನಾನು ಬಡಿಸಿಕೊಂಡು ತಿನ್ನುತ್ತೀನಿ. ನೀವು ಎಂದಿನಂತೆ ಅಲ್ಲ ಈಗ. ಹಾಗೆಲ್ಲಾ ಉಪವಾಸ ಇರಬಾರದು" ಎಂದ.

"ಓಹೋ! ಅದಕ್ಕೋ ಇಷ್ಟು ಅಭಿಮಾನ ನನ್ನ ಮೇಲೇನೋ ಅಂದುಕೊಂಡೆ" ಎಂದು ನಕ್ಕಳು ಕನಕ.

"ನಾನು ತಮಾಷೆಗೆ ಹೇಳುತ್ತಿಲ್ಲ ಅತ್ತಿಗೇ."

"ನಾನೂ ತಮಾಷೆಗೆ ಹೇಳುತ್ತಿಲ್ಲ ಕಣೋ. ನೀನು ಹೊತ್ತಿಗೆ ಬಂದು ಊಟಮಾಡದೆ ಇದ್ದರೆ ನನ್ನ ಮನಸಿಗೆ ಬೇಜಾರಾಗುತ್ತೆ. ನಾನು ಬಡಿಸಿದ ಹಾಗೆ ಆ ಹೋಟೇಲಿನವನು ಬಡಿಸುತ್ತಾನೇನೊ?"

ಆ ಮಾತಿನಲ್ಲಿನ ಅಭಿಮಾನಕ್ಕೆ ತಲೆಬಾಗಿದ ಪ್ರಕಾಶ, "ಹಾಗೇ ಆಗಲಿ ಅತ್ತಿಗೇ" ಎಂದ.

ಆ ಅತ್ತಿಗೆ-ಮೈದುನರ ಮಧ್ಯೆ ಅದು ಒಪ್ಪಂದದ ಮಾತಾಗಿ ನಿಂತಿತು. ಆ ನಂತರ ಪ್ರಕಾಶನಿಗೋಸ್ಕರ ಕನಕ ಕಾದಿರಬೇಕಾದ ಅವಶ್ಯಕತೆ ಎಂದೂ ಬರಲಿಲ್ಲ.

* * *

ಆ ದಿನ ಭಾನುವಾರ ಹೆಚ್ಚಿನ ಕೆಲಸವಿದೆಯೆಂದು ಜಾನಕಿ ಆಫೀಸಿಗೆ ಹೊರಟಿದ್ದಳು. ಜಾನಕಿಯೊಂದಿಗೆ ತಾನು ತಟ್ಟೆ ಹಾಕಿಕೊಳ್ಳುತ್ತಾ "ನನಗೂ ಬಡಿಸಬಿಡತ್ತಿಗೇ" ಎಂದಳು ಶಾಂತ.

"ಅಕ್ಕನಿಗೇನೋ ಕೆಲಸವಿದೆಯಂತೆ. ನಿನಗೆ ಕಾಲೇಜಿಲ್ಲವಲ್ಲಾ ಶಾಂತಾ, ಸ್ವಲ್ಪ ತಾಳು. ನಿಮ್ಮಣ್ಣನೊಂದಿಗೆ ಊಟಮಾಡುವಿಯಂತೆ. ಇನ್ನೂ ಹುಳಿ ಆಗಿಲ್ಲ. ನಿನಗಿಷ್ಟ ಅಂತ ತುಂಬಾ ಹೋಳು ಹಾಕಿದೀನಿ ಬೇಯೋಕೆ" ಎಂದಳು ಕನಕ.

"ರಾತ್ರಿಗೆ ತಿನ್ನುತ್ತೀನತ್ತಿಗೇ, ಶಾರದನ ಮನೆಗೆ ಹೋಗಿ ತುಂಬಾ ದಿನ

ವಾಯಿತು. ಈವತ್ತು ಬರ್ತೀನಿ ಅಂತ ಹೇಳಿದೀನಿ. ಊಟಮಾಡಿ ಹೋಗೋಣಾಂತ...."

ಊಟಮಾಡಿ ಅಕ್ಕನೊಂದಿಗೇ ಹೊರಟಳು ಶಾಂತ.

"ಬೇಗ ಬಂದು ಬಿಡು, ಶಾಂತಾ. ಈ ದಿನ ನಾನು ಬರೋದು ಸ್ವಲ್ಪ ಲೇಟಾಗಬಹುದು. ಅತ್ತಿಗೆಗೆ ರಾತ್ರಿ ಅಡಿಗೆಗೆ ಸಹಾಯ ಮಾಡು" ಎಂದಳು ಜಾನಕಿ.

"ಹುಂ" ಎಂದು ಹಿಂತಿರುಗಿ ತಮ್ಮ ಮನೆಯನ್ನೊಂದು ಸಲ ನೋಡಿ ಮುಂದಕ್ಕೆ ಹೊರಟಳು ಶಾಂತ.

ಆ ದಿನ ಪ್ರಕಾಶ ಊಟಕ್ಕೆ ಬರಲಿಲ್ಲ. 'ಮತ್ತೆ ಈ ಹುಡುಗ ಮೊದಲಿಗೇ ಬಂದ' ಎಂದುಕೊಳ್ಳುತ್ತಾ ತಟ್ಟೆಯಲ್ಲಿ ಅನ್ನ ಬಡಿಸಿಕೊಂಡಳು ಕನಕ.

"ಏನೂ ಪರವಾಗಿಲ್ಲ ಬಿಡು. ನಿನ್ನ ಮುದ್ದಿನ ಮೈದುನ ಉಪವಾಸ ಮಾತ್ರ ಇರೊಲ್ಲ. ಆ ಅಪ್ಪಣ್ಣ ಅಡಿಗೆ ಮಾಡಿರ್ತಾನೆ. ಅಲ್ಲಿ ತಿಂದು ಕೂತುಕೋತಾನೆ. ನೋಡಿದೋರು ಹೇಳಿದಾರೆ" ಎಂದ ಶ್ರೀಹರಿ.

"ಎಲ್ಲೋ ಒಂದುಕಡೆ ತಿಂದರೆ ಪರವಾಗಿಲ್ಲ. ತಿರುಗೋ ಕೆಲಸ ಅವನದು. ವೇಳೆಗೆ ತಿಂಡಿ ಇಲ್ಲದಿದ್ದರೆ ಹುಡುಗ ಏನಾಗಬೇಕು?"

"ನೀವೆಲ್ಲಾ ಅವನನ್ನ ಹೀಗೆ ಉಬ್ಬಿಸಿ ಹಾಳುಮಾಡಿದಿರಿ."

"ಏನಾಯಿತೀಗ?"

"ಇನ್ನೂ ಏನಾಗಬೇಕು? ಹಾಳುಕೂಳು ತಿಂತಾನಲ್ಲಾ. ಜಾತಿ, ನೀತಿ ಬೇಡವೇ?"

"ಅಯ್ಯೋ ರಾಮ! ಈಗ ಅವನ್ನೆಲ್ಲಾ ಯಾರು ನೋಡುತ್ತಾರೇಂದ್ರೆ? ಈ ಬ್ರಾಹ್ಮಣರ ಹೋಟಲುಗಳಲ್ಲಿ ಹಿಡಿ ವಿಭೂತಿ, ಇಷ್ಟು ದಪ್ಪ ಜಂದ್ಯ ಹಾಕಿಕೊಂಡ ಬ್ರಾಹ್ಮಣರೇ ಅಡಿಗೆ ಮಾಡ್ತಿದಾರಾ? ಮನೇಲಿ ಕೂತಿರೋ ನನ್ನಂಥಾ ಹೆಂಗಸರು ಆಚಾರ ಅಂದುಕೊಂಡರೆ ಪರವಾಗಿಲ್ಲ. ಹೊರಗೆ ಓಡಾಡೋ ಗಂಡಸರು ಏನು ಮಾಡೋಕಾಗುತ್ತೆ?"

"ಹಾಗಂತ ಇಷ್ಟು ಅದ್ವಾನವೇ? ಮಾಂಸ ತಿಂತಾರೇಂತ ಮೂಳೆ ಕೊರಳಲ್ಲಿ ಹಾಕಿಕೋತಾರೇನು? ಒಳಗೊಳಗೇ ಯಾರೇನು ಮಾಡಿದರೂ ಕಾಣೊಲ್ಲ. ಎಲ್ಲರೂ ನೋಡೋಹಾಗೆ ಅವನ ಪಕ್ಕದಲ್ಲೇ ಕೂತು ಒಂದೇ ಬಟ್ಟಲಿಂದ ಬಡಿಸಿಕೊಳ್ಳೋದೇ?" ಎಂದ ಶ್ರೀಹರಿ.

ತನ್ನ ಮಾತು ಪೂರ್ತಿಯಾಗುವ ಮೊದಲೇ ಹಿಂದೊಮ್ಮೆ ಇಂತಹ ಸಂದರ್ಭದಲ್ಲಿ ಪ್ರಕಾಶ ಹೇಳಿದ ಮಾತು ನೆನಪಾಯಿತು.

'ಅಣ್ಣಾ, ಹಾಗಾದರೆ ನಿನ್ನ ಅಭಿಪ್ರಾಯದಲ್ಲಿ ಕೆಡಕು ಅಂದುಕೊಂಡದ್ದನ್ನ ಮಾಡೋದರಲ್ಲಿ ತಪ್ಪಿಲ್ಲ. ಅದು ನಾಲ್ಕು ಜನಕ್ಕೆ ತಿಳಿದರೇನೇ ತಪ್ಪು. ರಹಸ್ಯವಾಗಿ ನಾನೊಬ್ಬ ಮನುಷ್ಯನನ್ನು ಕತ್ತು ಹಿಸುಕಿ ಕೊಂದರೂ ಅದು ಹೊರಬೀಳುವವರೆಗೂ ನಾನು ಭಯಪಡಬೇಕಾಗಿಲ್ಲ ಅಲ್ಲವೇ? ನಾಲ್ಕು ಜನಕ್ಕೆ ತಿಳಿಯದಿದ್ದರೆ ಆ ಪಾಪ ನನ್ನನ್ನು ತಾಕುವುಲ್ಲವೇ?' ಎಂದಿದ್ದ.

ಕನಕಳ ಊಟ ಮುಗಿಯಿತು.

ಸಾಯಂಕಾಲ ನಾಲ್ಕು ಗಂಟೆಗೆ ನಾನೂರು ಕ್ಷಮಾಪಣೆ ಕೇಳುತ್ತಾ ಬಂದ ಪ್ರಕಾಶ.

"ಮಾತು ಉಳಿಸಿಕೊಳ್ಳೋದು ಅಂದರೆ ಇದೇನೇನು?" ಎನ್ನುತ್ತಾ ಹುಸಿಕೋಪ ನಟಿಸಿದಳು ಕನಕ.

"ಕಾರಣ ವಿವರಿಸಿದೆನಲ್ಲಾ, ಇನ್ನೂ ನಿಮ್ಮ ಕೋಪ ಕಡಿಮೆಯಾಗದಿದ್ದರೆ ನಾನೇನು ಮಾಡಲಿ ಹೇಳಿ?" ಎಂದ ಪ್ರಕಾಶ ಅತಿ ಭಯಸ್ಥನಂತೆ.

"ಸರಿ, ಈ ಸಲಕ್ಕೆ ಬಿಟ್ಟಿದೀನಿ. ತಗೋ, ಈ ಕಾಫಿ ಕುಡಿದುಬಿಡು" ಎಂದಳು. ಅರ್ಧಸೇರು ಹಿಡಿಸುವ ಕಂಚುಲೋಟದಲ್ಲಿ ಕಾಫಿ ಪ್ರಕಾಶನ ಮುಂದಿಟ್ಟು.

"ಇದಿಷ್ಟೂ ನನಗೇನೆ? ಮಧ್ಯಾಹ್ನ ಊಟಕ್ಕೆ ಬಾರದ್ದಕ್ಕೆ ಈ ಶಿಕ್ಷೆಯೇನು?"—ಪ್ರಕಾಶ ಬೆಚ್ಚಿ ಕೇಳಿದ.

"ಇಲ್ಲ ಕಣೋ. ನಾಲ್ಕು ಗಂಟೆಯಾಯಿತಲ್ಲಾ, ಶಾಂತ ಕೂಡಾ ಬರ್ತಾಳೇನೋ ಅಂತ ಕಾಫಿ ಮಾಡಿದೆ. ಅವಳಿನ್ನೂ ಬರಲಿಲ್ಲ. ತಣ್ಣಗಾಗುತ್ತೆ ನೀನು ಕುಡಿದುಬಿಡು."

"ಈವತ್ತು ಭಾನುವಾರವಲ್ಲವೇ? ಶಾಂತ ಎಲ್ಲಿಗೆ ಹೋದಳು?"

"ಬೆಳಿಗ್ಗೇನೇ ಶಾರದನ ಮನೆಗೆ ಹೋದಳು. ಇನ್ನೂ ಬಂದಿಲ್ಲ."

ಪ್ರಕಾಶ ಒಂದು ಕ್ಷಣ ಅತ್ತಿಗೆಯ ಮುಖ ನೋಡಿ,

"ನಿಮಗೆ ಸರಿಯಾಗಿ ನೆನಪಿದೆಯೋ ಅತ್ತಿಗೇ. ಶಾಂತ ಶಾರದನ ಮನೆಗೇ ಹೋಗ್ತೀನೀಂತ ಹೇಳಿದಳೇ?" ಎಂದ.

"ಅದೇನೋ ಹಾಗೆ ಕೇಳುತ್ತಿ? ಬೆಳಿಗ್ಗೆ ಹೇಳಿದ್ದನ್ನ ಸಾಯಂಕಾಲಕ್ಕೆ ಮರೆಯೋಕೆ ನಾನಷ್ಟು ಮುದುಕಿಯಾದೆನೇ ಅಗಲೇ?"

"ಉಹುಂ. ಹಾಗಲ್ಲ. ಸರಿಯಾಗಿ ಕೇಳಿಸಿಕೊಂಡಿರೋ ಇಲ್ಲವೋ ಅಂತ" ಎನ್ನುತ್ತಾ ಆಗತಾನೇ ಬಿಚ್ಚಿ ಗೂಟಕ್ಕೆ ತಗಲು ಹಾಕಿದ ಷರ್ಟನ್ನು ಮತ್ತೆ ಹಾಕಿಕೊಂಡ.

"ಮತ್ತೆ ಎಲ್ಲಿಗೋ ಪ್ರಯಾಣ?"

"ಈಗಲೇ ಬರ್ತೀನಿ. ಒಂದು ಕೆಲಸ ಮರೆತಿದ್ದೆ."

ಪ್ರಕಾಶ ರಸ್ತೆಯಲ್ಲಿ ಕಾಲಿಟ್ಟ. ಶಾಂತ ಶಾರದನ ಮನೆಗೆ ಹೋಗಿದಾಳೆಂದರೆ ಅವನಿಗೇಕೋ ನಂಬಿಕೆ ಹುಟ್ಟಲಿಲ್ಲ. ಆದಿನ ಬಂದಿದ್ದ ಹೊಸ ಪುಸ್ತಕಗಳನ್ನು ತೋರಿಸಲು ಹನ್ನೆರಡು ಗಂಟೆಯ ಸಮಯದಲ್ಲಿ ಪ್ರಕಾಶ ಅವರ ಮನೆಗೆ ಹೋಗಿದ್ದ. ಶಾರದನ ತಾಯಿ ಶಾಂತಮ್ಮನವರಿಗೆ ಪುಸ್ತಕಗಳ ಹುಚ್ಚಿತ್ತು. ಹೊಸ ತೆಲುಗು ಪುಸ್ತಕಗಳು ಬಂದಾಗಲೆಲ್ಲಾ ಕೊಳ್ಳುತ್ತಿದ್ದರು ಆಕೆ. "ಹೊಸ ಪುಸ್ತಕ ಏನಾದರೂ ಬಂದಿದ್ದರೆ ನನಗೆ ಹೇಳಪ್ಪಾ" ಎನ್ನುತ್ತಿದ್ದರು.

ಆ ದಿನ ಹೆಸರಾಂತ ಲೇಖಕರ ಪುಸ್ತಕಗಳೆರಡು ಬಂದಿದ್ದುವು. ಅವನ್ನು ತೆಗೆದುಕೊಂಡು ಅವರ ಮನೆಗೆ ಹೋಗಿದ್ದ. ಪುಸ್ತಕ ತೆಗೆದುಕೊಂಡು ಕೂಡಲೇ ಪ್ರಕಾಶನನ್ನು ಕಳುಹಿಸಿರಲಿಲ್ಲ ಆಕೆ. ವ್ಯಾಪಾರ ಹೇಗೆ ನಡೆಯುತ್ತಿದೆ, ಮನೆಯಲ್ಲಿ ಎಲ್ಲರೂ ಕ್ಷೇಮವೇ ಎಂದೆಲ್ಲಾ ಕೇಳಿ ತಿಳಿದುಕೊಂಡಿದ್ದರು. ಪ್ರಕಾಶನೆಂದರೆ ತುಂಬಾ ಅಭಿಮಾನ ಆಕೆಗೆ. ಕಷ್ಟಪಟ್ಟು ಕೆಲಸ ಮಾಡುತ್ತಾನೆಂಬ ಮೆಚ್ಚುಗೆ, ಮುಂದಕ್ಕೆ ಬರುತ್ತಾನೆಂಬ ನಂಬಿಕೆ ಅವರಿಗಿತ್ತು. ಪ್ರಕಾಶ ಅವರ ಮನೆಗೆ ಬಂದಾಗಲೆಲ್ಲಾ ಕುಡಿಯಲು ಕಾಫಿ, ಇಲ್ಲಾ ಮಜ್ಜಿಗೆಯನ್ನಾದರೂ ಕೊಟ್ಟಲ್ಲದೆ ಕಳುಹಿಸುತ್ತಿರಲಿಲ್ಲ. ಆ ದಿನ ಮೂರು ಗ್ಲಾಸುಗಳಲ್ಲಿ ಮಜ್ಜಿಗೆ ತಂದಿದ್ದಳು ಶಾರದ. ಮೂವರೂ ಕುಳಿತು ಮಾತನಾಡುತ್ತಾ ಮಜ್ಜಿಗೆ ಕುಡಿದಿದ್ದರು. ಆಗ ಶಾಂತನ ಮಾತೂ ಬಂದಿತ್ತು. ಆದರೆ ಅವಳು ಅಲ್ಲಿಗೆ ಬಂದು ಹೋದಂತೆ ಅವರಿಬ್ಬರ ಮಾತಿನಲ್ಲಿಯೂ ಬಂದಿರಲಿಲ್ಲ.

ಪ್ರಕಾಶನಿಗೆ ಆದಿನದ ಸಂಘಟನೆ ನೆನಪಾಯಿತು. ಈ ನಡುವೆ ಒಂದೆರಡು ಸಲ ಆ ಹುಡುಗನನ್ನು ಪೇಟೆಯಲ್ಲಿ ನೋಡಿದ್ದ ಕೂಡಾ. ಆದರೆ ಶಾಂತ ಆ ಹುಡುಗನೊಂದಿಗೆ ಸ್ನೇಹವನ್ನು ಕಡಿದುಕೊಂಡಿರುತ್ತಾಳೆಂಬ ನಂಬಿಕೆಯಿಂದ ಸುಮ್ಮನಾಗಿದ್ದ. ಪೇಟೆಯ ಕೊನೆಯಲ್ಲಿದ್ದ ಹೋಟಲಿನ ಬಾಗಿಲಲ್ಲಿ ಆಗಾಗ ಕಾಣಿಸಿದ್ದ. ಅವರಿಗೆ ಆ ಹೋಟಲಿನವರಲ್ಲಿ ಯಾರಾದರೂ ಬಂಧುಗಳೋ ಪರಿಚಯಸ್ಥರೋ ಇರಬಹುದೆಂದುಕೊಂಡಿದ್ದ.

ಅನುಮಾನ ಪರಿಹರಿಸಿಕೊಳ್ಳಲು ಶಾರದನ ಮನೆಗೆ ಹೋದ.

"ಶಾಂತಾನೇ, ಇಲ್ಲಿಗೆ ಬರಲಿಲ್ಲವಲ್ಲಾ" ಎಂದರು ಬಾಗಿಲಲ್ಲಿಯೇ ಕಾಣಿಸಿದ ಶಾರದನ ತಾಯಿ.

ನೆಟ್ಟಗೆ ಪೇಟೆಯ ಕೊನೆಯಲ್ಲಿದ್ದ ಹೊಟಲಿನ ಬಳಿಗೆ ನಡೆದ ಪ್ರಕಾಶ. ಶಾಂತ ಹೀಗೆ ಸುಳ್ಳು ಹೇಳಿ ಮನೆಬಿಟ್ಟು ಬರಲು ಆ ಸುದರ್ಶನನೇ ಕಾರಣ

ವಾಗಿರಬೇಕೆನಿಸಿತು ಪ್ರಕಾಶನಿಗೆ. ಹೋಟಲಿನ ಪ್ರೊಪ್ರೈಟರನ್ನು, "ಸುದರ್ಶನ ಇದಾರೆಯೋ?" ಎಂದು ಪ್ರಶ್ನಿಸಿದ.

"ಯಾವ ಸುದರ್ಶನ?"

ಪ್ರಕಾಶ ಅವನ ರೂಪು ರೇಖೆಗಳನ್ನು ವರ್ಣಿಸಿದ.

"ಓ....ನೀವು ಕೇಳ್ತಿರೋದು ಸುಬ್ಬರಾಯರನ್ನು ಕುರಿತೇ? ಈ ದಿನ ರೂಮು ಖಾಲಿ ಮಾಡ್ತೀನೀಂತ ಹೇಳಿ ಬೆಳಿಗ್ಗೇನೇ ದುಡ್ಡು ಕೊಟ್ಟರು. ಹೊರಟುಹೋದರೋ ಇದಾರೋ ಕಾಣೆ. ಇರಿ, ಕೇಳಿ ಹೇಳ್ತೀನಿ" ಎಂದ.

"ಲೋ ರಂಗಾ, ಆ ಹನ್ನೆರಡನೇ ನಂಬರ್ ರೂಮಿನಲ್ಲಿದ್ದ ಅಯ್ಯನೋರು ಇದಾರೋ ಹೊರಟುಹೋದರೋ ನೋಡಿ ಬಾರೋ."

"ಹೊರಟುಹೋಗಿದಾರೆ ಸಾರ್" ಎಂದ ರಂಗ ನೋಡಿ ಬಂದು.

"ಎಲ್ಲಿಗೆ ಹೋಗಿದಾರೆ ಹೇಳಬಲ್ಲಿರಾ? ಸ್ವಲ್ಪ ಅರ್ಜಂಟ್ ಕೆಲಸ ಇತ್ತು" ಎಂದ ಪ್ರಕಾಶ.

"ಗೊತ್ತಿಲ್ಲಾರೀ. ಅವರಿಗೆ ಈ ಊರಿನಲ್ಲಿ ಏನೋ ಕೆಲಸ ಇರುತ್ತೇಂತ ಕಾಣುತ್ತೆ. ಆಗಾಗ ಬಂದು ಒಂದು ವಾರವೋ ಹತ್ತು ದಿನವೋ ಇದ್ದು ಹೋಗುತ್ತಾರೆ. ಮತ್ತೆ ಬಂದಾಗ ನೀವು ಬಂದಿದ್ದಿರಿ ಎಂದು ಹೇಳುತ್ತೇನೆ. ಹೆಸರು ಬರೆದು ಕೊಟ್ಟಿರಿ."

"ಬೇಡಬಿಡಿ. ಹೇಗೋ ಹಾಗೆ ಅವರನ್ನೇ ನೋಡ್ತೀನಿ"

ಪ್ರಕಾಶ ಹೊರಗೆ ಬಂದ. ಶಾಂತ ಸುದರ್ಶನನೊಂದಿಗೆ ಹೊರಟು ಹೋಗಿರಬಹುದೆಂಬ ಶಂಕೆ ಅವನನ್ನು ಮುಳ್ಳಿನಂತೆ ಚುಚ್ಚುತ್ತಿತ್ತು. ಅಲ್ಲಿಂದ ರೈಲ್ವೆ ಸ್ಟೇಷನ್ನಿಗೆ ಹೊರಟ. ಗಾಡಿಯವರನ್ನು, ರಿಕ್ಷಾದವರನ್ನು ಗುರ್ತು ಹೇಳಿ "ಅಂತಹ ಹುಡುಗ ಯಾವ ರೈಲಿನಲ್ಲಿ ಹೋದನೋ ಹೇಳಬಲ್ಲಿರಾ?" ಎಂದು ಕೇಳಿದ.

ಪ್ರಕಾಶ ಹೇಳಿದ ಗುರ್ತುಗಳನ್ನು ಕೇಳಿ, "ಓದಿಕೊಂಡೋರು, ಸ್ವಲ್ಪ ದುಡ್ಡಿರೋರು ಹೆಚ್ಚು ಕಡಿಮೆ ಹಾಗೆ ಇರ್ತಾರೆ. ಬೆಳಗಿನಿಂದ ಎಷ್ಟೊಂದು ಜನಾ ಹೋಗ್ತಿರ್ತಾರೆ, ಬರ್ತಿರ್ತಾರೆ. ಯಂಗೆ ಏಳಾಣ" ಎಂದರು.

ನಾಲ್ಕು ಪ್ಲಾಟ್ ಫಾರಂ ಮೇಲೂ ತಿರುಗಾಡಿದ. ವೆಯಿಟಿಂಗ್‌ರೂಂ, ಬುಕ್-ಸ್ಟಾಲ್ ಎಲ್ಲಾ ಕಡೆ ನೋಡಿದ. ಅವನ ಎರಡು ಪಕ್ಕದಲ್ಲೂ ಎರಡು ರೈಲುಗಳು ಕದಲಲು ಸಿದ್ಧವಾಗಿ ನಿಂತಿದ್ದುವು. ಪ್ರತಿ ಕಿಟಕಿಯೊಳಗಿನಿಂದಲೂ ಶಾಂತನ ಮುಖಾನೇ ಕಾಣಿಸುತ್ತಿದ್ದಂತೆ ಎನಿಸುತ್ತಿತ್ತು ಪ್ರಕಾಶನಿಗೆ.

ಒಂದು ಕಂಪಾರ್ಟ್‌ಮೆಂಟ್‌ನಿಂದ ಹುಡುಗಿಯೊಬ್ಬಳು ಕಿತ್ತಲೆ ಹಣ್ಣು

ಸುಲಿಯುತ್ತಾ ಸಿಪ್ಪೆ ಎಸೆಯಲು ಬಾಗಿಲ ಬಳಿ ಬಂದಳು.

"ಶಾಂತಾ....ಶಾಂತಾ...." ಪ್ರಕಾಶ ಆ ಕಡೆ ಓಡಿದ.

ಆ ಹುಡುಗಿ ತಿರುಗಿ ನೋಡಿದಳು. "ಯಾರದು?" ಎಂದ ಹುಡುಗಿಯ ಜತೆಯಲ್ಲಿದ್ದ ಯುವಕ.

"ನನಗೂ ಗುರ್ತು ಸಿಗಲಿಲ್ಲ. ಹತ್ತಿರ ಬರಲಿ ನೋಡೋಣ."

"ತಿಳಿದೋರ ಹಾಗೆ ಹೆಸರು ಹಿಡಿದು ಕೂಗ್ತಿದಾನೆ."

"ಅದೇ ನೋಡ್ತಿದೀನಿ."

ಪ್ರಕಾಶ ಹತ್ತಿರಕ್ಕೆ ಬಂದ.

"ಯಾರು ಬೇಕು?" ಆ ಯುವಕ ಮುಂದಕ್ಕೆ ಬಂದು ಪ್ರಶ್ನಿಸಿದ. ಆ ಹುಡುಗಿ ಅವನ ಭುಜ ಹಿಡಿದು ನಿಂತು ಕಣ್ಣರಳಿಸಿ ನೋಡುತ್ತಿದ್ದಳು.

"ಕ್ಷಮಿಸಿ, ದೂರದಿಂದ ನೋಡಿ ನನ್ನ ತಂಗಿ ಎಂದುಕೊಂಡೆ" ಪ್ರಕಾಶ ತಲೆ ತಗ್ಗಿಸಿ ಅಲ್ಲಿಂದ ಹೊರಟುಹೋದ.

"ಎಲ್ಲಿದ್ದಾಳೋ ಆ ತಂಗಿ" ಎಂದುಕೊಂಡರು ಆ ದಂಪತಿಗಳು.

ಶಾಂತನಿಗಾಗಿ ಇನ್ನೆಲ್ಲಿ ಹುಡುಕುವುದು? ಎಲ್ಲಿ ಹೋಗಿರುತ್ತಾಳೆ. ಏಕೆ ಹೀಗೆ ಮಾಡಿದಳು. ಪ್ರಕಾಶ ಪಾರ್ಕು, ಪೇಟೇಬೀದಿ, ಸಿನಿಮಾಹಾಲು ಹೀಗೆ ವರಸೆಯಾಗಿ ಹುಡುಕುತ್ತಾ ತಿರುಗಿದ.

ಈ ನಡುವೆ ಶಾಂತ ಕೆಲವು ದಿನಗಳಿಂದ ಒಂದು ತರಹಾ ಇರುತ್ತಿದ್ದಳು ...ಒಂದು ವೇಳೆ ಸಾಂಬುವಿನಂತೆ........ಪ್ರಕಾಶ ತನ್ನ ಮನಸಿನಲ್ಲಿ ಸುಳಿದ ಆಲೋಚನೆಯನ್ನು ತಳ್ಳಿ ಹಾಕಿದ.

ಶಾಂತ ಅಂತಹವಳಲ್ಲ. ಅವಳಿಗೆ ಬದುಕಿನ ಮೇಲೆ ಮಮತೆಯಿತ್ತು. ಮನಸಿನ ತುಂಬಾ ಬಯಕೆಗಳಿದ್ದುವು. ಶಾಂತನಂತಹ ಕನಸುಕಾಣುವ ಹುಡುಗಿಯರು ಏನು ಮಾಡಲೂ ಹಿಂದೆಗೆಯುವುದಿಲ್ಲ—ಆತ್ಮಹತ್ಯೆಯ ಹೊರತು, ಎಂದುಕೊಂಡ ಪ್ರಕಾಶ.

* * *

ಎರಡು ಕಂಬಿಗಳನ್ನು ನಂಬಿಕೊಂಡು ರೈಲು ಕಣ್ಣು ಮುಚ್ಚಿಕೊಂಡು ಪ್ರಯಾಣ ಮಾಡುತ್ತಿತ್ತು. ಅದಕ್ಕೆ ಇರೋದೇ ಒಂದು ಕಣ್ಣು. ಅದನ್ನಾದರೂ ಹಗಲೆಲ್ಲಾ ಮುಚ್ಚಿಕೊಂಡಿರುತ್ತಿತ್ತು. ರಾತ್ರಿ ಹೊತ್ತು ವಿಧಿಯಿಲ್ಲದೆ ತೆರೆಯುತ್ತಿತ್ತು. ಆದರೂ ಆ ಕುರುಡು ರೈಲಿನ ಮೇಲೆ ಮನುಷ್ಯನಿಗೆ ಪೂರ್ತಿ ನಂಬಿಕೆ. ಒಂದು ಸಲ ಅದರೊಳಕ್ಕೆ ಹೆಜ್ಜೆಯಿಟ್ಟನಂತರ ಗಮ್ಯಸ್ಥಾನವನ್ನು ಸೇರಿಸುವ

ಭಾರ ಆದರದೇ ಎಂಬಂತೆ ಹಾಯಾಗಿ ಮಲಗುತ್ತಾರೆ. ನಿದ್ದೆ ಮಾಡುತ್ತಾರೆ, ಊಟ ಮಾಡುತ್ತಾರೆ, ಹರಟೆ ಕೊಚ್ಚುತ್ತಾರೆ. ರೈಲಿಗೆ ಇದೊಂದೂ ತಿಳಿಯದು. ತನ್ನ ಪಾಡಿಗೆ ತಾನು ಮೂಗಿನ ನೇರಕ್ಕೆ ಹೋಗುತ್ತಲೇ ಇರುತ್ತದೆ. ಅದರಲ್ಲಿ ಪ್ರಯಾಣ ಮಾಡುತ್ತಿರುವವರ ಅದೃಷ್ಟವೆಂಬಂತೆ ದಾರಿಯಲ್ಲಿ ಹಳ್ಳಕೊಳ್ಳ ಇಲ್ಲದಂತೆ ರೈಲ್ವೆಯವರು ನೋಡಿಕೊಳ್ಳುತ್ತಾರೆ. "ನಿಮಗೇನೂ ಯೋಚನೆ ಇಲ್ಲ, ಹಾಯಾಗಿ ಕುಳ್ಳಿರಿ" ಎಂದು ಟಿಕೆಟ್ ಕೊಡುತ್ತಾರೆ. ಅಷ್ಟು ಮಾಡಿದರೂ ಥರ್ಡ್‌ಕ್ಲಾಸ್ ಪ್ರಯಾಣಿಕರು, ಒದ್ದಾಡುತ್ತಾ, ರೈಲ್ವೆಯವರನ್ನು ಬೈದುಕೊಳ್ಳುತ್ತಾ ಪ್ರಯಾಣ ಮಾಡುತ್ತಾರೆ.

ಫಸ್ಟ್ ಕ್ಲಾಸಿನಲ್ಲಿ ಪ್ರಯಾಣ ಮಾಡುವವರು ತಾವು ಎಲ್ಲರಿಗಿಂತ ಒಂದು ಕೈ ಮೇಲೆ ಎಂಬಂತೆ ಜೋರಿನಲ್ಲಿರುತ್ತಾರೆ. ಅದರಲ್ಲೂ ಇಬ್ಬರು ಮನುಷ್ಯರು ಮಾತ್ರವೇ ಪ್ರಯಾಣ ಮಾಡುವ ಕೂಪೆಯಲ್ಲಿ ಯೌವನದಲ್ಲಿರುವ ಯುವತಿ-ಯುವಕರು ಪ್ರಯಾಣ ಮಾಡಿದರೆ ಹೇಗಿರಬಹುದು? ಆ ಭೂಲೋಕ ಸ್ವರ್ಗವನ್ನು ನೋಡಲು ದೇವತೆಗಳೂ ಇಳಿದು ಬರುತ್ತಾರೆಂಬುದರಲ್ಲಿ ತಪ್ಪಿಲ್ಲ.

ಅಂತಹ ಪೆಟ್ಟಿಗೆಯೊಂದರಲ್ಲಿ ಒಂದು ಹುಡುಗಿ ಕಿಟಕಿಗೆ ಒರಗಿ ಕುಳಿತಿದ್ದಳು. ಹುಡುಗ ಹುಡುಗಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದ. ಹುಡುಗಿ ಕಿತ್ತಳೆ ಹಣ್ಣನ್ನು ಸುಲಿಯುತ್ತಾ ತಾನೊಂದು ತೊಳೆ ತಿನ್ನುತ್ತಾ, ಆ ಹುಡುಗನಿಗೊಂದು ತೊಳೆ ತಿನ್ನಿಸುತ್ತಿದ್ದಳು. ಇಬ್ಬರೂ ತಮ್ಮದೇ ಆದ ಲೋಕದಲ್ಲಿ ವಿಹರಿಸುತ್ತಾ ಮಾತನಾಡಿಕೊಳ್ಳುತ್ತಿದ್ದರು.

"ಹೀಗೆ ಫಸ್ಟ್‌ಕ್ಲಾಸಿನಲ್ಲಿ ನಾವಿಬ್ಬರೇ ಬೇರೆಯವರಾರೂ ಇಲ್ಲದೆ ಪ್ರಯಾಣ ಮಾಡುತ್ತಿದ್ದರೆ....ಈ ಮೃದುವಾದ ಮೆತ್ತೆಯ ಮೇಲೆ ಕುಳಿತು, ರೈಲಿನೊಡನೆ ಸಂಧ್ಯಹಾಕಿದಂತೆ ಓಡುತ್ತಿರುವ ಗಿಡಗಳನ್ನು ಸಮಾಧಾನಪಡಿಸುತ್ತಿರುವಂತೆ ಕಾಣುವ ಭೂಮಿಯನ್ನೂ, ಗಿಡಗಳ ಸಮೂಹದ ಹಿಂದಿನಿಂದ ನಮ್ಮೊಂದಿಗೆ ಆಡಿಕೊಳ್ಳುತ್ತಿರುವಂತಿರುವ ಆ ಚಂದ್ರನನ್ನೂ ನೋಡುತ್ತಾ.... ನೋಡುತ್ತಾ....ಓಹ್....ಎಷ್ಟು ಹಾಯಾಗಿದೆ? ಬದುಕು ಎಷ್ಟು ಮಧುರ!! ಎಂದೆಂದಿಗೂ ಹೀಗೆಯೇ ಒಬ್ಬರ ಪಕ್ಕದಲ್ಲೊಬ್ಬರು ಕುಳಿತು....ಪ್ರಪಂಚದೊಂದಿಗೆ ಸಂಬಂಧವಿಲ್ಲದಂತೆ...."

ಆ ಹುಡುಗಿಯ ಮಾತು ಪೂರ್ತಿಯಾಗುವ ಮೊದಲೇ ಹೊರಗಿನಿಂದ ಯಾರೋ ಬಾಗಿಲು ಬಡಿದರು. ಆ ಯುವಕ ಎದ್ದು ಬಾಗಿಲು ತೆಗೆದ. ಟಿಕೆಟ್ ಕಲೆಕ್ಟರ್ ಬಂದಿದ್ದ. ಎರಡು ಟಿಕೆಟ್ ತೆಗೆದು ತೋರಿಸಿದ. ರಿಸರ್ವೇಷನ್ ನಂಬರ್ ನೋಟ್ ಮಾಡಿಕೊಂಡು ಅವನ್ನು ಹಿಂತಿರುಗಿ ಕೊಟ್ಟು ಹೊರಟು

ಹೋದ.

"ರಾತ್ರಿಯೆಲ್ಲಾ ಹೀಗೇ ಬಾಗಿಲು ಬಡೀತಾ ಇರ್ತಾರಾ?" ಹುಡುಗಿ ಕೋಪದಿಂದ ಕೇಳಿದಳು.

"ಒಂಬತ್ತು ಗಂಟೆಯನಂತರ ಬರೊಲ್ಲ." ಯುವಕ ನಕ್ಕು, ಸಮಾಧಾನ ಪಡಿಸಿದ.

"ಏನು ಹೇಳ್ತಾ ಇದ್ದೆ ನಾನು? ಯಾರ ಪ್ರಮೇಯವೂ ಇಲ್ಲದೆ ನಮ್ಮಿಷ್ಟಕ್ಕೆ ನಾವು ಹಾಯಾಗಿ...."

"ಊಹುಂ. ಅದೇನೂ ಪ್ರಯೋಜನವಿಲ್ಲ ರಾಣಿ. ನಾವು ಕೊಟ್ಟ ದುಡ್ಡಿಗೆ ಒಂದು ಹೆಜ್ಜೆ ಸಹ ಮುಂದಕ್ಕೆ ಹೋಗಗೊಡುವುದಿಲ್ಲ. ಇಳಿಸಿಬಿಡುತ್ತಾರೆ. ಈ ರೈಲುಗಳು ಅವಿರಾಮವಾಗಿ ಪ್ರಯಾಣಿಸುವುದಿಲ್ಲ. ಅವಕ್ಕೂ ಒಂದು ಸ್ಥಳ ಸೇರಬೇಕೆಂಬ ನಿಯಮವಿರುತ್ತೆ. ಅಲ್ಲಿಂದ ಮುಂದೆ ಹೋಗುವುದಿಲ್ಲ...."

"ನನಗದೆಲ್ಲ ಗೊತ್ತಿಲ್ಲವೇನು? ಆದರೆ ಇದು ನನ್ನ ಕನಸು. ನಾನು ಎಷ್ಟೋ ಹಗಲುಕನಸು ಕಾಣುತ್ತಿರುತ್ತೇನೆ. ಅದೆಲ್ಲಾ ನನಸಾಗುವುದಿಲ್ಲ ಎಂಬುದು ತಿಳಿದಿದ್ದರೂ ಕನಸು ಕಾಣುವುದನ್ನು ಮಾತ್ರ ಬಿಡುವುದಿಲ್ಲ. ಈಗ ನನ್ನ ಕನಸು ನನಸು ಮಾಡಲು ನೀವಿದೀರಿ. ಇನ್ನು ನನಗೇನು ಕಡಿಮೆ? ನಿಮ್ಮ ಮುಖ ನೋಡುತ್ತಾ...."

ಆ ಯುವಕ ಎದ್ದು ಕುಳಿತ. ಹುಡುಗಿ ಅವನ ತೊಡೆಯ ಮೇಲೆ ತಲೆಯಿಟ್ಟು ಮಲಗಿದಳು. ಗಾಳಿಗೆ ಹಾರಾಡುತ್ತಿದ್ದ ಅವನ ಕೂದಲನ್ನು ಸರಿಪಡಿಸುತ್ತಾ "ನಾವು ಎಂದೆಂದಿಗೂ ಹೀಗೆಯೇ ಇರಬೇಕು" ಎಂದಳು ತನ್ಮಯತೆಯಿಂದ.

"ಓ, ಅದಕ್ಕೇನಂತೆ" ಎಂಬಂತೆ ಬಾಗಿ ಅವಳನ್ನು ಮುದ್ದಿಸಿದ ಯುವಕ.

ಬಿರಿದ ಗುಲಾಬಿಯಂತಿದ್ದ ಅವಳ ಕೆನ್ನೆ ಮತ್ತಷ್ಟು ಕೆಂಪಾಯಿತು. ಕಿರುನಗೆಯ ಹಿಂದಿನ ಹಲ್ಲಿನ ಸಾಲು ಮುತ್ತಿನ ಸಾಲಿನಂತೆ ಹೊಳೆಯಿತು.

"ಈ ಮಧುರ ಸ್ವಪ್ನದಿಂದ ಎಂದೆಂದಿಗೂ ಎಚ್ಚರಬಾರದಿರಲಿ. ಈ ಕನಸು ಸುಳ್ಳಾಗದಿರಲಿ. ನೆಲದ ಮೇಲೆ ಹೆಜ್ಜೆಯಿಡಲೂ ಹೆದರಿಕೆಯಾಗುತ್ತಿದೆ ನನಗೆ. ಇದು ನಿಜವಲ್ಲದಿದ್ದರೆ ನಾನು ಬದುಕಲಾರೆ."

"ಹೆದರಿಕೆಯೇಕೆ ರಾಣಿ?. ನಮ್ಮ ಆನಂದವನ್ನು ಭಗ್ನ ಮಾಡುವ ಹಕ್ಕು ಯಾರಿಗಿದೆ? ದೇಶವೆಲ್ಲಾ ಸುತ್ತಿಬರೋಣ. ಕಾಶ್ಮೀರದ ಡಾಲ್ ಸರಸ್ಸಿನಲ್ಲಿ ಬೋಟ್‌ಹೌಸ್ ಕುರಿತು ಕೇಳಿದೀಯಾ?...."

"ಆಂ...."

"ಕುಫ್ರಿ ಐಸ್ ಸ್ಕೇಯಿಂಗ್ ಅಂದ್ರೆ ಗೊತ್ತೇನು?"

"............"

"ಸಿಮ್ಲಾ ಬೀದಿಗಳಲ್ಲಿ ಸ್ನೋಫಾಲ್ ಆಗುತ್ತಿರುವಾಗ ಓಡಾಡಿದೀಯಾ?"

"............"

"ದಿಡಿಲ್ಲಿ ಕೆಂಪು ಕೋಟೆಮೇಲೆ ಭಾರತದ ಪಾತಾಕೆ ನೋಡಿದೀಯಾ?"

"............"

"ಆಗ್ರಾ....ತಾಜಮಹಲ್....ಜೈಪೂರ್ ರಾಜಮಹಲ್ ಕೋಣಾರ್ಕದ ಶಿಲ್ಪ ಸಂಪತ್ತು....ಮೈಸೂರು ದಸರಾ ಉತ್ಸವ....ಕನ್ಯಾಕುಮಾರಿಯಲ್ಲಿನ ಉದಯ, ಸಂಧ್ಯೆ. ಏನು ನೋಡಿದ್ದೀ ರಾಣಿ....ಬದುಕೆಲ್ಲಾ ನಮ್ಮ ಮುಂದೆ ನಿಂತಿದೆ. ಬೇಕಾದಷ್ಟು ಸ್ವೇಚ್ಛೆ. ಎಷ್ಟು ಖರ್ಚುಮಾಡಿದರೂ ಕರಗದಷ್ಟು ಹಣ ....ನಮಗೇನು ಕಡಿಮೆ ಎಂದು ಭಯಪಡುತ್ತಿ?"

ಆ ಹುಡುಗಿ ಅಮೃತಧಾರೆಯಂತಹ ಅವನ ಮಾತುಗಳನ್ನು ಕೇಳುತ್ತಾ ಹಾಯಾಗಿ ನಿದ್ರಿಸಿದಳು. ಅವನು ಅವಳ ಕಡೆ ನೋಡಿ ನಸುನಕ್ಕು ದೀಪ ಆರಿಸಿದ. ಚಿಕ್ಕ ದೀಪ ಹಾಕಿದ. ಆ ನೀಲಿಬಣ್ಣದ ಕಾಂತಿಯಲ್ಲಿ ಅವಳ ಕೆನ್ನೆ ಊದಾರಂಗಿನಲ್ಲಿ ಹೊಳೆಯುತ್ತಿತ್ತು. ಮನಸಾರೆ ಆ ಕೆನ್ನೆಯನ್ನು ಮುದ್ದಿಸಿ ಅವಳ ಪಕ್ಕದಲ್ಲೇ ತಾನೂ ಮಲಗಿದ.

ಮದ್ರಾಸ್ ಸೆಂಟ್ರಲ್ ಸ್ಟೇಷನ್ನಿನಲ್ಲಿ ಸೂಟ್‌ಕೇಸ್ ಹಿಡಿದು ಕೆಳಗಿಳಿದ ಅವನು. ಹಿಂದೆಯೇ ಅವಳೂ ಇಳಿದಳು. ಟ್ಯಾಕ್ಸಿಯಲ್ಲಿ ಕುಳಿತು ಯಾವುದಾದರೂ ಹೋಟೆಲಿಗೆ ಹೋಗುವಂತೆ ಹೇಳಿದ.

"ಸ್ವಲ್ಪ ಪ್ರಶಾಂತವಾಗಿ ಗಲಾಟೆ ಕಡಿಮೆಯಾಗಿರುವ ಹೋಟೆಲಿಗೆ ಕರಕೊಂಡು ಹೋಗು."

ಒಂದು ಹೋಟಲಿನ ಮುಂದೆ ಟ್ಯಾಕ್ಸಿ ನಿಂತಿತು.

"ಪಟ್ಟಣಕ್ಕೆ ಮಧ್ಯದಲ್ಲಿದ್ದರೆ ತಿಳಿದವರ ಕಣ್ಣಿಗೆ ಬೀಳುತ್ತೇವೆ. ಅವರ ಕೈಗೆ ಸಿಕ್ಕಿದರೆ ಬಿಡೊಲ್ಲ. ನಾನು ಈ ಊರಿಗೆ ಬಂದಿದೀನೀಂತ ತಿಳಿದರೆ ಹುಡುಕುವ ಕೊನೆಯ ಹೋಟೆಲ್ ಇದು. ಇಂತಹ ಕಡಿಮೆ ದರ್ಜೆಯ ಹೋಟಲಿನಲ್ಲಿ ನಾನು ಇಳಿಯುತ್ತೇನೆಂದು ಅವರು ಕನಸಿನಲ್ಲಿಯೂ ಊಹಿಸಿರಲಾರರು" ಎಂದ ಅವನು.

ಆದರೆ ಆ ಹುಡುಗಿಗೆ ಆ ಹೋಟೆಲೇ ಅದ್ಭುತವಾಗಿ ಕಾಣಿಸುತ್ತಿತ್ತು. ನುಣುಪಾದ ನೆಲ, ನಿಲುಗನ್ನಡಿಗಳು, ಬಿಳಿಯ ವಾಷ್‌ಬೇಸಿನ್, ಬೆಲ್ ಒತ್ತಿದ ಕೂಡಲೇ ಹಾಜರಾಗುವ ನೌಕರರು, ಇದೆಲ್ಲಾ ಕಡಿಮೆಯೇ? ಹಾಗಾದರೆ

ಇನ್ನೂ ಎಂತಹ ಹೋಟಲಿನಲ್ಲಿ ಇಳಿದುಕೊಳ್ಳುತ್ತಾನೆ ಈತ?....ಅದು ಅವಳ ಊಹೆಗೆ ನಿಲುಕಲಿಲ್ಲ.

ಅವನ ಆಶಯ ನೆರವೇರಿತ್ತು. ಪರಿಚಯಸ್ಥರಾರ ಕಣ್ಣಿಗೂ ಬೀಳದಂತೆ ಊರೆಲ್ಲಾ ಸುತ್ತಿದರು. ಬೀಚಿನಲ್ಲಿ, ಪಾರ್ಕಿನಲ್ಲಿ ಮನಸಾರೆ ಅಲೆದಾಡಿದರು. ಕಾಲ ಹೇಗೆ ಕಳೆಯುತ್ತಿತ್ತೋ. ಇದು ಹಗಲೋ, ರಾತ್ರಿಯೋ, ಎಂಬುದೇ ತಿಳಿಯದಂತೆ ಕಳೆಯುತ್ತಿತ್ತು. ಗಾಳಿಯಲ್ಲಿ ತೇಲಿಹೋಗುತ್ತಿರುವಂತೆ ಅವನ ಕೈಹಿಡಿದು ಹೆಜ್ಜೆಹಾಕುತ್ತಿದ್ದಳು.

ಆ ದಿನ ಸಾಯಂಕಾಲದ ವಾಕಿಂಗ್ ನಂತರ ಹೋಟೆಲಿಗೆ ಹಿಂದಿರುಗಿ ಬರುತ್ತಿದ್ದರು. ಆಗಲೇ ಕತ್ತಲಾಗಿತ್ತು. ಅಲ್ಲೊಂದು ಮನೆ ಅತಿ ಶೋಭಾಯಮಾನವಾಗಿ ದೀಪಗಳಿಂದ ಅಲಂಕೃತವಾಗಿತ್ತು. ಮನೆಯೊಳಗಿನಿಂದ ಮೃದುಮಧುರವಾದ ಸಂಗೀತ ಕೇಳಿ ಬರುತ್ತಿತ್ತು.

"ಏನದು? ಏನು ನಡೆಯುತ್ತಿದೆ ಅಲ್ಲಿ?"—ಆಸಕ್ತಿಯಿಂದ ಕೇಳಿದಳು ಹುಡುಗಿ.

"ಅದು ಕಲ್ಯಾಣಮಂಟಪ. ಮದ್ರಾಸಿನಲ್ಲಿ ಇಂತಹವು ತುಂಬಾ ಇವೆ. ಇದನ್ನು ಬಾಡಿಗೆಗೆ ತೆಗೆದುಕೊಂಡು ಇಲ್ಲಿ ಮದುವೆ ಮಾಡುತ್ತಾರೆ" ಎಂದಂದು, ಕೂಡಲೇ ಮಾತು ಜಾರಿತಲ್ಲಾ ಎಂದು ನಾಲಗೆ ಕಚ್ಚಿಕೊಂಡ. ಅವನ ತಪ್ಪು ಕೂಡಲೇ ಅವಳ ಮುಖದಲ್ಲಿ ಪ್ರತಿಫಲಿಸಿತ್ತು.

ಆ ರಾತ್ರಿ ಎಷ್ಟು ಹೇಳಿದರೂ ಅವಳು ಕೇಳಲಿಲ್ಲ. ಪ್ರಬಲವಾದ ಅವಳ ಕೋರಿಕೆಯನ್ನು ಯಾವ ವ್ಯಾಮೋಹವೂ ಜಯಿಸಲಾರದೆ ಹೋಯಿತು.

"ಏನಾದರೂ ಸರಿ, ನಾಳೆ ಹೊರಡಬೇಕಾದ್ದೇ. ಯಾವ ಕೆಲಸವಾದರೂ ತಿರುಪತಿಯಿಂದ ಬಂದ ನಂತರವೇ" ಎಂದು ಹಠ ಹಿಡಿದಳು.

ಅವನು ಮಾರನೆಯ ದಿನದ ಪ್ರಯಾಣಕ್ಕೆ ಎಷ್ಟೋ ಅಡ್ಡಿ ಆತಂಕಗಳನ್ನು ಹೇಳಿದ. ಅವಳು ಕೇಳುವ ಸ್ಥಿತಿಯಲ್ಲಿರಲಿಲ್ಲ.

ವಾದಿಸಿ ವಾದಿಸಿ ಬೇಸತ್ತ ಅವನು, "ಸರಿ, ಹಾಗೆಯೇ ಮಾಡೋಣ" ಎಂದ, ಒಂದು ಪಕ್ಕಕ್ಕೆ ತಿರುಗಿ ಮಲಗಿಕೊಳ್ಳುತ್ತಾ.

"ಕೋಪ ಬಂತೇ?" ಎಂದಳು ಅವಳು. ಅವನನ್ನು ತನ್ನ ಕಡೆಗೆ ತಿರುಗಿಸಿಕೊಳ್ಳುತ್ತಾ.

"ಇಲ್ಲ. ನಿನ್ನ ಮೂರ್ಖತೆಗೆ ಬೇಜಾರಾಯಿತು" ಎಂದ ಬೇಸರದಿಂದ.

"ಹಾಗಲ್ಲರೀ. ಇದೊಂದು ನನ್ನ ಇಷ್ಟ ಪ್ರಕಾರ ನಡೆಯಲಿ. ಅನಂತರ ನಿಮ್ಮ ಮಾತನ್ನು ಎಂದಾದರೂ ಮೀರುತ್ತೇನೇನೋ ನೋಡಿ" ಎಂದಳು

ಅವಳು, ಅವನ ತಲೆ ನೇವರಿಸುತ್ತಾ.

"ಮಲಕ್ಕೋ. ಬೆಳಿಗ್ಗೆ ಬೇಗ ಏಳಬೇಕು."

"ಎಚ್ಚರವಾಗುತ್ತೋ ಇಲ್ಲವೋ ಬೇರರ್‌ಗೆ ಹೇಳೋಣವೇ?"

"ಬೇಡ, ನಾನು ಎಬ್ಬಿಸುತ್ತೇನೆ" ಎಂದ ಅವನು.

ಬಾಗಿಲು ಬಡಿದ ಶಬ್ದಕ್ಕೆ ಅವಳಿಗೆ ಎಚ್ಚರವಾಯಿತು. ಬೇರರ್ ಬಾಗಿಲು ತಳ್ಳಿ ಒಳಕ್ಕೆ ಬಂದು ಕಾಫಿ ಟ್ರೇ ಇರಿಸಿ ಹೋದ. ಅವಳು ಪಕ್ಕಕ್ಕೆ ನೋಡಿದಳು. ಅವನು ಬಾತ್‌ರೂಮಿಗೆ ಹೋದಂತಿತ್ತು. ತನ್ನ ಕಾಫಿ ಕುಡಿದು ಅವನ ಕಾಫಿಗೆ ಮುಚ್ಚಳ ಹಾಕಿದಳು. ಅರ್ಧಗಂಟೆಯಾದರೂ ಅವನು ಬರಲಿಲ್ಲ.

ಬಾಗಿಲ ಹತ್ತಿರಕ್ಕೆ ಹೋಗಿ, "ಇನ್ನೂ ಈವತ್ತಿಗೆ ತಿರುಪತಿ ಪ್ರಯಾಣ ಇಲ್ಲವೇನು? ಎಷ್ಟು ಹೊತ್ತು ಬರೋದು?" ಎಂದಳು.

ಒಳಗಿನಿಂದ ಜವಾಬು ಬರಲಿಲ್ಲ. ಸ್ವಲ್ಪ ಬಾಗಿಲು ತೆರದ ಹೊರತು ಒಳಗಿನ ಮಾತು ಕೇಳಿಸಲಾರದೆಂದು ಬಾಗಿಲನ್ನು ಸರಿಸಿದಳು. ಒಳಗೆ ಸದ್ದಿರಲಿಲ್ಲ.

ಗಾಬರಿಯಿಂದ ನೋಡಿದಳು. ಸೂಟ್‌ಕೇಸ್ ಇರಬೇಕಾದ ಸ್ಥಳದಲ್ಲಿ ಇರಲಿಲ್ಲ. ಸ್ಟಾಂಡಿಗೆ ರಾತ್ರಿ ಹಾಕಿದ ಬಟ್ಟೆಗಳೂ ಇರಲಿಲ್ಲ. ಅವಳ ತಲೆ ತಿರುಗಿದಂತಾಯಿತು. ಭೂಮಿ ಕುಸಿಯುತ್ತಿರುವಂತೆ ತೋರಿತು. ಕೋಣೆ, ಕೋಣೆಯಲ್ಲಿದ್ದ ವಸ್ತುಗಳೂ ಅವಳ ಕಣ್ಣ ಮುಂದೆ ಗಿರ್ರೆಂದು ತಿರುಗಲಾರಂಭಿಸಿದುವು. ಆಯೋಮಯದಿಂದ ನೋಡುತ್ತಿದ್ದ ಅವಳ ಕಣ್ಣಿಗೆ ದಿಂಬಿನ ಕೆಳಗಿನಿಂದ ಕಾಗದವೊಂದು ಇಣಿಕಿ ನೋಡುತ್ತಿರುವುದು ಕಾಣಿಸಿತು. ಆತುರದಿಂದ ಓದಿದಳು.

"ರೂಪರಾಣೀ,

ನಿನ್ನ ಮೇಲಿನ ಮೋಜು ನನಗಿನ್ನೂ ತೀರಲಿಲ್ಲ. ಇನ್ನೂ ಕೆಲವು ದಿನ ನಿನ್ನೊಂದಿಗೆ ಹಾಯಾಗಿ ಕಳೆಯಬೇಕೆಂಬ ಮನಸಿತ್ತು. ಇಷ್ಟು ಒಳ್ಳೆಯ ಅವಕಾಶವನ್ನು ನಿನ್ನ ಮೂರ್ಖತನದಿಂದ ಹಾಳು ಮಾಡಿದೆ ....ಹೋಟೆಲ್ ಬಿಲ್ ಕೊಟ್ಟಿದ್ದೇನೆ. ನಿನ್ನ ಬ್ಯಾಗಿನಲ್ಲಿ ಇಪ್ಪತ್ತೈದು ರೂಪಾಯಿ ಇದೆ. ಜಾಣ ಹುಡುಗಿಯಂತೆ ಟಿಕೆಟ್ ತೆಗೆದುಕೊಂಡು ಮನೆಗೆ ಹೋಗು. ಎಂದಾದರೂ ಸಾಧ್ಯವಾದರೆ ನೋಡೋಣ. ಅದುವರೆವಿಗೂ....ಗುಡ್‌ಬೈ."

ಹಾಸಿಗೆಯ ಮೇಲೆ ಬಿದ್ದು ಬಿಕ್ಕಿಬಿಕ್ಕಿ ಅತ್ತಳು. ಸಮಾಧಾನ ಮಾಡುವವರಿಲ್ಲದುದರಿಂದಲೋ ಏನೋ ದುಃಖ ತನ್ನಷ್ಟಕ್ಕೆ ತಾನು ಹೊರಟು ಹೋಯಿತು. ಮುಂದೇನು ಎಂಬ ಪ್ರಶ್ನೆ ಎದ್ದು ನಿಂತಿತು. ಎಷ್ಟೋ ವಿಧವಾದ

ಆಲೋಚನೆಗಳು ಅವಳ ಮನದಲ್ಲಿ ಸುಳಿದಾಡಿದುವು. ಅದಾವುದೂ ತನ್ನಿಂದ ಆಗದ ಕೆಲಸಗಳೆಂದು ತೀರ್ಮಾನಿಸಿಕೊಂಡಳು. ನೇರವಾಗಿ ಸ್ಟೇಷನ್ನಿಗೆ ಹೋಗಿ ಟಿಕೆಟ್ ಕೊಂಡು ರೈಲು ಹತ್ತಿದಳು. ಬೆಂಚಿನ ಮೇಲೆ ಒಂದು ಮೂಲೆಯಲ್ಲಿ ಕುಳಿತಳು.

ಒಂದು ವಾರದ ಹಿಂದೆ ಇದೇ ಸಮಯದಲ್ಲಿ ಸುಂದರ ಪ್ರಕೃತಿಯನ್ನು ನೋಡಿ ಮೈಮರೆತಿದ್ದಳು. ಈ ದಿನ ಅವಳ ದೃಷ್ಟಿ ಮುಂದೆ ತನ್ನ ಗತಿಯೇನು? ತಾನು ಹೇಗೆ ಬದುಕಬೇಕು? ಎಂಬುದರ ಮೇಲೆ ನಿಂತಿತ್ತು.

ಅವಳ ಆಲೋಚನೆಗಳೊಂದಿಗೆ ಸಂಬಂಧವಿಲ್ಲದಂತೆ ರೈಲು ಓಡುತ್ತಿತ್ತು.

* * *

ರಾತ್ರಿ ಹತ್ತುಗಂಟೆಗೆ ಮನೆ ಸೇರಿದ ಪ್ರಕಾಶ. ಮನೆಯಲ್ಲಿ ಎಲ್ಲರೂ ಜೀವಶವಗಳಂತೆ ಒಂದೊಂದು ಮೂಲೆಯಲ್ಲಿ ಕುಳಿತಿದ್ದರು. ಸುಂದರಮ್ಮ ಇಳಿ ವಯಸಿನಲ್ಲಿ ತಲೆಯ ಮೇಲೆ ಬಂದು ಬೀಳುತ್ತಿದ್ದ ಕಷ್ಟಗಳನ್ನು ನೆನೆಸಿಕೊಂಡು ಅಳುತ್ತಿದ್ದಂತೆ ಉಬ್ಬಿದ ಆಕೆಯ ಕಣ್ಣು, ಗದ್ಗದವಾದ ಕಂಠ ಹೇಳುತ್ತಿದ್ದವು. ಜಾನಕಿಯ ಮುಖ ಭಾವಶೂನ್ಯವಾಗಿತ್ತು. ಜೀವರಹಿತವಾದ ಕಲ್ಲಿನ ಬೊಂಬೆಯಂತೆ ಕುಳಿತಿದ್ದಳು. ಶ್ರೀಹರಿ ಎಲ್ಲರ ಮೇಲೂ ರೇಗಿ ಉರಿದುಬಿದ್ದು ಆಯಾಸದಿಂದ ಕುಸಿದು ಕುಳಿತಿದ್ದ.

ಈ ಆವೇದನೆಯಲ್ಲಿ ಪಾಲು ಹಂಚಿಕೊಳ್ಳಬೇಕಾದ ವ್ಯಕ್ತಿ ಪ್ರಕಾಶ ಇದುವರೆವಿಗೂ ಏಕೆ ಬರಲಿಲ್ಲವೆಂದು ಆತುರದಿಂದ ಎದುರು ನೋಡುತ್ತಿದ್ದಳು ಕನಕ. ತಾನು ಶಾಂತ ಬರಲಿಲ್ಲವೆಂದು ಹೇಳಿದ ಕೂಡಲೇ ಪ್ರಕಾಶ ಹೊರಗೆ ಹೋಗಿದ್ದ. ಶಾಂತಳನ್ನು ಹುಡುಕಲು ಹೋದನೇನೋ! ಶಾಂತ ಅವನಿಗೆಲ್ಲಾದರೂ ಕಾಣಿಸಿದಳೇನೋ ಎಂದು ಆಸೆಯಿಂದ ಎದುರುನೋಡುತ್ತಿದ್ದಳು.

ಬೀದಿಯ ಬಾಗಿಲಲ್ಲಿ ಪ್ರಕಾಶನನ್ನು ಕಾಣುತ್ತಲೇ ಎಲ್ಲರೂ ತಲೆಯೆತ್ತಿ ನೋಡಿದರು. ಮನೆಯೊಳಕ್ಕೆ ಹೆಜ್ಜೆಯಿಡುವವರೆಗೂ ಪ್ರಕಾಶನಲ್ಲಿ ಕಿಂಚಿತ್ ಮಾತ್ರ ಆಸೆ ಉಳಿದೇ ಇತ್ತು.

ಇದನ್ನೆಲ್ಲಾ ತಾನು ಅನಾವಶ್ಯಕವಾಗಿ ಊಹಿಸುತ್ತಿದಾನೇನೋ! ಶಾರದನ ಮನೆಗೆ ಹೊರಟಿದ್ದ ಶಾಂತ ದಾರಿಯಲ್ಲಿ ಮನಸು ಬದಲಾಯಿಸಿಕೊಂಡು ಮತ್ತೊಬ್ಬ ಸ್ನೇಹಿತಳ ಮನೆಗೆ ಹೋದಳೇನೋ. ಹಾಗಿದ್ದರೆ ಇಷ್ಟು ಹೊತ್ತಿಗೆ ಶಾಂತ ಮನೆಗೆ ಹಿಂದಿರುಗಿ ಬಂದಿರಬೇಕು....ಆದರೆ ಮನೆಯವರ ಮುಖಗಳನ್ನು ನೋಡಿದನಂತರ ತನ್ನ ಅನುಮಾನವೇ ನಿಜವೇನೋ ಅನ್ನಿಸಿತು.

ಮೆಲ್ಲನೆ ಒಳಕ್ಕೆ ಹೆಜ್ಜೆಯಿಟ್ಟ. ಪ್ರಕಾಶ ಬಂದಕೂಡಲೇ, "ಏಕೆ ಹೀಗಿದೀರಿ?" ಎಂದು ಕೇಳುತ್ತಾನೆಂದು ಭಾವಿಸಿದ್ದಳು ಕನಕ.

ಆದರೆ ಅವನೇನೂ ಮಾತನಾಡಲಿಲ್ಲ. ಮೌನವಾಗಿ ಅಲ್ಲಿದ್ದ ಬೆಂಚಿನ ಮೇಲೆ ಕುಳಿತ.

"ಬೇಕೂಂದಾಗ ಎಂದೂ ನೀನು ಮನೆಗೆ ಬರಲಿಲ್ಲವಲ್ಲೋ, ಪ್ರಕಾಶ?" ಎಂದಳು ಕನಕ ನಿಷ್ಠೂರದಿಂದ.

"ಹೋಗಬೇಕಾಗಿದ್ದ ಕಡೇನೇ ಹೋಗಿದ್ದೆ ಅತ್ತಿಗೇ!"

"ಶಾಂತ ಮನೆಗೆ ಬರಲಿಲ್ಲ, ಗೊತ್ತೇನು? ಶಾರದನ ಮನೆಗೂ ಹೋಗಲಿಲ್ಲವಂತೆ."

"ನನಗೆ ಮೊದಲೇ ಗೊತ್ತಾಯಿತು ಅತ್ತಿಗೇ. ಆದರೆ ಸಮಯ ಮಿಂಚಿ ಹೋಗಿತ್ತು. ಅವರು ಹೊರಟುಹೋದರು."

"ಅವರು....ಯಾರೋ ಪ್ರಕಾಶ?" ಶ್ರೀಹರಿ ಆತುರದಿಂದ ಪ್ರಶ್ನಿಸಿದ.

"ಶಾಂತ, ಇನ್ನೊಬ್ಬ ಹುಡುಗ."

ಜಾನಕಿ ನಂಬಲಾರನೆಂಬಂತೆ ನೋಡಿದಳು. ಶಾಂತನಿಗಿಷ್ಟು ಸಾಹಸ ಹೇಗೆ ಬಂತು? ಏಕೆ? ತನಗೆ ಓದು ಇಷ್ಟವಿಲ್ಲವೆಂದಿದ್ದರೆ ಸಂಸಾರವೇ ಬೇಕೆಂದಿದ್ದರೆ ಯಾರ ಮುಂದಾದರೂ ಹೇಳಬಹುದಾಗಿತ್ತಲ್ಲಾ! ಇಷ್ಟು ಜನ ಇದ್ದೂ ಅವಳಿಗೆ ಮದುವೆ ಮಾಡಲಾರೆವೆಂದುಕೊಂಡಳೆ? ಎಲ್ಲರಿಗಿಂತ ಚಿಕ್ಕವಳೆಂದು ಮುದ್ದಾಗಿ ನೋಡಿಕೊಳ್ಳುತ್ತಿದ್ದ ಶಾಂತ ಇಂತಹ ಕೆಲಸ ಏಕೆ ಮಾಡಿದಳು? ಎಂದುಕೊಂಡಳು ಜಾನಕಿ.

"ಹೀಗಾಗುತ್ತೇಂತ ನಿನಗೆ ಮೊದಲೇ ಗೊತ್ತೇನು? ತಿಳಿದೂ ಏನೂ ತಿಳಿಯದವನಂತೆ ಸುಮ್ಮನಿದ್ದೆಯಾ?" ತೀಕ್ಷ್ಣವಾಗಿ ಪ್ರಶ್ನಿಸಿದ ಶ್ರೀಹರಿ.

"ಈಗಿನ ವಿಷಯ ನನಗೇನೂ ಗೊತ್ತಿಲ್ಲಣ್ಣ. ಬಹಳ ದಿನಗಳ ಹಿಂದೆ ಶಾಂತನನ್ನು ಆ ಹುಡುಗನೊಂದಿಗೆ ಪಾರ್ಕಿನಲ್ಲಿ ನೋಡಿದ್ದೆ. ಯಾಕೋ ಆ ಹುಡುಗ ನನ್ನ ಮನಸಿಗೆ ಬರಲಿಲ್ಲ. ಅವನ ಜತೆ ಸ್ನೇಹ ಬೆಳಸಬೇಡವೆಂದು ಹೇಳಿದೆ. ಸ್ವಲ್ಪ ಜೋರಾಗಿಯೇ ಹೇಳಿದೆ. ಆ ನಂತರವೂ ಅವರು ಸ್ನೇಹವಾಗಿಯೇ ಇದ್ದರೆಂದು ನನಗೆ ಗೊತ್ತಿಲ್ಲ. ನಾನು ಆ ವಿಷಯವನ್ನೇ ಮರೆತು ಬಿಟ್ಟೆ...."

"ಎಂಥ ಕೆಲಸ ಮಾಡಿದೆಯೋ ಪ್ರಕಾಶಾ? ಆಗಲೇ ಆ ವಿಷಯ ನನಗೆ ಹೇಳಿದ್ದರೆ, ನನ್ನ ಪ್ರಾಣ ಒತ್ತೆಯಿಟ್ಟಾದರೂ ಯಾವುದೋ ಒಂದು ಸಂಬಂಧ ತಂದು ಅವಳಿಗೆ ಮದುವೆ ಮಾಡುತ್ತಿದ್ದೆ. ನೀನೇ ಕೈಯಾರೆ ಇಂಥಾ ಕೆಲಸ

ಮಾಡಿದೆಯಲ್ಲೋ! ತಿಳಿದೂ ತಿಳಿದೂ ಮನೆಗೆ ಬೆಂಕಿಯಿಟ್ಟೆಯಲ್ಲೋ!

"ಅವನೇನು ಮಾಡಿದನಣ್ಣಾ. ಹೀಗಾಗುತ್ತದೆಯೆಂದು ಅವನಿಗೆ ಮಾತ್ರ ಗೊತ್ತೇನು? ಚಿಕ್ಕವಳು....ಒಂದು ಸಲ ಬುದ್ಧಿ ಹೇಳಿದರೆ ಕೇಳುತ್ತಾಳೆ ಅಂದು ಕೊಂಡಿರುತ್ತಾನೆ...."

"ನೀವೆಲ್ಲಾ ಸೇರಿ ಬುದ್ಧಿ ಹೇಳಿ ಅವಳನ್ನ ಹೀಗೆ ಮಾಡಿದ್ದು. ನನ್ನ ಅಕ್ಕ ಹಾಗೆ ತಿರುಗುತ್ತಿದ್ದಾಳೆ. ಅಣ್ಣ ಹೀಗೆ ತಿರುಗುತ್ತಿದ್ದಾನೆ, ನಾನು ಮಾತ್ರ ಮಾನ ಮರ್ಯಾದೆಗೆ ಏಕೆ ಕಟ್ಟುಬಿದ್ದಿರಬೇಕು ಅಂದುಕೊಂಡಿರುತ್ತಾಳೆ.... ಇದಲ್ಲಾ ನಾವು ತೋರಿಸಿದ ದಾರೀನೇ ತಾಯೀ...."

"ಅಣ್ಣಾ....ಎಲ್ಲರನ್ನೂ ಅನ್ನುತ್ತಿದ್ದೀ....ಆದರೆ ಶಾಂತ ಹೀಗೆ ಪರಾರಿ ಯಾಗಲೂ ಕಾರಣರಾದವರಲ್ಲಿ ನೀನೂ ಇದ್ದೀಯೆಂದು ಮರೆತು ಹೋಗು ತ್ತಿದ್ದೀ. ಸಾಂಬೂಗೆ ಬರೋ ವರದಕ್ಷಿಣೆಗೂ ಶಾಂತನ ಮದುವೆಗೂ ಗಂಟು ಹಾಕಿ ಮಾತನಾಡುತ್ತಿದ್ದೆ ನೀನು. ಶಾಂತ ತನ್ನ ಭಾವಿ ಜೀವಿತದ ಭವ್ಯತೆ ಸಾಂಬೂನ ಓದಿನೊಂದಿಗೆ ಬೆರೆತಿದೆಯೆಂದು ಭಾವಿಸಿದ್ದಳು. ಆ ಆಸೆ ಕಡಿದು ಹೋಯಿತು. ಇನ್ನು ನಾವು ಪ್ರಯತ್ನಿಸಿ ಮದುವೆ ಮಾಡಿದರೂ ವರದಕ್ಷಿಣೆ ಹೆಚ್ಚಾಗಿ ಕೊಡಲಾರೆವಾದ್ದರಿಂದ, ಯಾರೋ ಒಬ್ಬ ಗುಮಾಸ್ತೆಗೋ, ಎರಡನೆ ಸಂಬಂಧಕ್ಕೋ ಕಟ್ಟುತ್ತೀವೆಂದು ಭಯಪಟ್ಟಿರುತ್ತಾಳೆ. ಅವಳ ಮನಸಿನಲ್ಲಿ ಆಸೆಯ ಬೀಜ ನೆಟ್ಟವರು ಅವಳ ಭಯವನ್ನೂ ಊಹಿಸಬೇಕಾಗಿತ್ತು" ಎಂದ ಪ್ರಕಾಶ.

"ನೀವು ಹೀಗೆ ವಾದಿಸುತ್ತಾ ಕುಳಿತರೆ ಅವಳು ಹಿಂತಿರುಗಿ ಬರುತ್ತಾ ಳೇನು? ನಾಲ್ಕು ಜನದ ಬಾಯಲ್ಲಿ ಬಿದ್ದು ನಗುಪಾಟಲಾಗುವುದಕ್ಕೆ ಮುಂಚೆಯೇ ಹಿಂದಕ್ಕೆ ಕರೆತರುವ ದಾರಿ ನೋಡಿ" ಎಂದರು ಸುಂದರಮ್ಮ.

"ಊರು ಬಿಟ್ಟು ಹೋದವಳನ್ನು ಎಲ್ಲೀಂತ ಹುಡುಕುತ್ತೀಯಮ್ಮಾ" ಎಂದ ಶ್ರೀಹರಿ.

"ನಾನೂ ಕಣ್ಣಿಂದ ನೋಡಲಿಲ್ಲ, ಅಣ್ಣಾ. ಇದು ನನ್ನ ಸಂದೇಹ ಮಾತ್ರ. ಪೋಲೀಸಿಗೆ ರಿಪೋರ್ಟ್ ಕೊಡೋದು ಒಳ್ಳೇದು" ಎಂದ ಪ್ರಕಾಶ.

"ಅದರಿಂದ ಏನು ಪ್ರಯೋಜನ?"

"ಸಾಂಬು ಕಾಣಲಿಲ್ಲಾಂತ ಪೋಲೀಸ್ ರಿಪೋರ್ಟ್ ಕೊಡಲಿಲ್ಲವೇ?"

"ಅದು ಬೇರೆ ವಿಷಯ. ಹೆಣ್ಣುಮಗಳು ಹೊಸಿಲು ದಾಟಿದಳೆಂದರೆ ಬೆಟ್ಟದಷ್ಟು ನಿಂದೆ ಹೊರಬೇಕು. ಅವಳು ಹಿಂದಿರುಗಿ ಬಂದರೂ ಆ ಮಚ್ಚೆ ಹೋಗುವುದಿಲ್ಲ."

"ಹಾಗಾದರೆ ಏನು ಮಾಡಬೇಕೆಂದು ನಿನ್ನ ಉದ್ದೇಶ?"

"ಅವಳಾಗಿ ಅವಳು ಹಿಂತಿರುಗಿ ಬರಲಿ, ನೋಡೋಣ."

"ನಿನ್ನ ಅಭಿಪ್ರಾಯ ನನಗೆ ಸರಿತೋರಲಿಲ್ಲಣ್ಣಾ. ಶಾಂತ ಎಲ್ಲಿದ್ದಾಳೆಂದು ತಿಳಿದುಕೊಳ್ಳುವುದು ನಮ್ಮ ಪ್ರಥಮ ಕರ್ತವ್ಯ. ಅವಳಿಗೆ ತಾನಿರುವ ಸ್ಥಳ ಚೆನ್ನಾಗಿದೆ, ಅಲ್ಲಿಯೇ ಇರುತ್ತೇನೆಂದರೆ ನನ್ನ ಅಭ್ಯಂತರವಿಲ್ಲ. ಹಾಗಲ್ಲದೆ ಮೋಸಹೋಗಿ ಅವಸ್ಥೆಯ ಪಾಲಾಗಿದ್ದರೆ ಅವಳಿಗೆ ಆಶ್ರಯ ಕೊಡಬೇಕಾದ ಬಾಧ್ಯತೆ ನಮ್ಮೆಲ್ಲರ ಮೇಲೂ ಇದೆ" ಎಂದ ಪ್ರಕಾಶ ಹೊರಕ್ಕೆ ಕಾಲಿಡುತ್ತಾ.

"ಪ್ರಕಾಶ, ನಮ್ಮ ಪ್ರಯತ್ನ ನಾವು ಮಾಡೋಣ. ಪೋಲೀಸ್ ರಿಪೋರ್ಟ್ ಕೊಡಬೇಡ. ನಾಲ್ಕು ಜನಕ್ಕೆ ತಿಳಿದರೆ ಅವಳಿಗೆ ಮದುವೆ ಆಗೋಲ್ಲ. ಊರಿನಲ್ಲಿ ತಲೆಯೆತ್ತಿ ತಿರುಗೋಕಾಗೋಲ್ಲ" ಎಂದರು ಸುಂದರಮ್ಮ.

"ಈ ಊರಿನಲ್ಲಿ ತಿರುಗಲಾಗದಿದ್ದರೆ ಇನ್ನೊಂದೂರು ಇರುತ್ತಮ್ಮಾ. ಶಾಂತನಿಗೆ ಮದುವೆ ಆಗದಿದ್ದರೆ ಹೋಯಿತು. ನೌಕರಿ ಮಾಡಿಕೊಂಡು ಬದುಕುತ್ತಾಳೆ. ಆದರೆ ಈ ಅವಮಾನ ಸಹಿಸಲಾರದೆ ಶಾಂತ ಬಾವಿಗೀವಿ ನೋಡಿಕೊಂಡರೆ ನಿನಗಿನ್ನೊಬ್ಬ ಮಗಳು ಬರಲಾರಳು. ಅವನು ಹೋಗಲಿ ಅಮ್ಮಾ" ಎಂದಳು ಜಾನಕಿ.

ಸುಂದರಮ್ಮ ಹೋಗಗೊಡಲೂ ಬಿಡಲೂ ಪ್ರಕಾಶ ಅಲ್ಲಿರಲಿಲ್ಲ. ಬೀದಿಯ ಕೊನೆಯಲ್ಲಿ ಅವನ ಆಕಾರ ಕಾಣುತ್ತಿತ್ತು.

* * *

ಜೋರಾಗಿ ಶಬ್ದವಾಗುವಂತೆ ಕುರ್ಚಿಯನ್ನು ಹಿಂದಕ್ಕೆ ತಳ್ಳಿ ಎದ್ದು ನಿಂತಳು ಜಾನಕಿ. ಎದುರಾಗಿ ಎರಡು ಕೈಗಳಿಂದ ಬಾಗಿಲನ್ನು ಹಿಡಿದು ನಿಂತಿದ್ದ ಗೋವಿಂದಬಾಬು ಕಾಣಿಸಿದ. ಆತ ನಿಂತ ಭಂಗಿ, ನೋಡುತ್ತಿದ್ದ ರೀತಿ ಕಂಡರೆ ಬಹಳ ಹೊತ್ತಿನಿಂದ ಆತ ಹಾಗೆಯೇ ನಿಂತಿದ್ದಂತೆ ಕಾಣುತ್ತಿತ್ತು.

"ಓ....ನೀವೇ....ಬನ್ನಿ ಒಳಗೆ. ಅಲ್ಲಿಯೇ ನಿಂತುಬಿಟ್ಟಿರಲ್ಲಾ" ಎಂದಳು ಜಾನಕಿ ತಡವರಿಸುತ್ತಾ.

"ನನ್ನಿಂದ ನಿಮ್ಮ ತಪೋಭಂಗವಾದಂತಿದೆಯಲ್ಲಾ!" ನಗುತ್ತಾ ಅಂದ ಗೋವಿಂದಬಾಬು.

"ತಪೋಭಂಗವೇ?"

"ಹುಂ. ಅಂದರೆ ಪರಿಸರಗಳನ್ನೂ ಎದುರಿಗಿರುವವರನ್ನೂ ಮರೆತು ಆಲೋಚನೆಗಳಲ್ಲಿ ಲೀನವಾಗುವುದು. ಐದು ನಿಮಿಷಗಳ ಕಾಲ ನನ್ನನ್ನೂ

ಬಾಗಿಲನ್ನೂ ಮತ್ತೆಮತ್ತೆ ನೋಡಿದ ಹೊರತು ನಾನು ಗೋಡೆಯಲ್ಲವೆಂದೂ ನನ್ನ ಹೆಸರು ಗೋವಿಂದಬಾಬು ಎಂದೂ ನಿಮಗೆ ಹೊಳೆಯಲಿಲ್ಲ. ಇಂತಹ ಏಕಾಗ್ರತೆಯನ್ನೇ ತಪಸ್ಸು ಎನ್ನುತ್ತಾರೆ. ಅಂತಹ ಸಾಧನೆಯನ್ನೇನಾದರೂ ಮಾಡುತ್ತಿದೀರೇನೋ ಹೋಗೋಣ ಅಂದುಕೊಳ್ಳುತ್ತಿರುವಾಗಲೇ...."

"ಎಚ್ಚರತ್ತು ಬಿಟ್ಟೆ ಅನ್ನುತ್ತೀರಾ?" ಜಾನಕಿ ನಕ್ಕಳು.

• "ಇಷ್ಟಕ್ಕೂ ದೀರ್ಘಾಲೋಚನೆಯ ಆವಶ್ಯಕತೆಯೇನು?"

"ಆಲೋಚನೆಗಳಿಲ್ಲದ ಮನುಷ್ಯರಿರುತ್ತಾರೆಯೇ? ಗೋವಿಂದಬಾಬು" ಆ ಮಾತು ಪ್ರಶ್ನೆಯಂತಲ್ಲದೆ ಅವಳ ಮನಸ್ಸಿನ ವ್ಯಾಕುಲತೆಯನ್ನು ಸೂಚಿಸುತ್ತಿತ್ತು.

"ಇರೊಲ್ಲ ಅಂತಿಟ್ಟುಕೊಳ್ಳಿ. ಆದರೆ ಆಲೋಚನೆಗಳಲ್ಲಿ ಧೀರರೂ, ಆಚರಣೆಯಲ್ಲಿ ಹೇಡಿಗಳೂ ಆದವರಿಗೆ ಆಲೋಚನೆ ಹೆಚ್ಚು ಅಂತಾರೆ. ಮನಸ್ಸಿನಲ್ಲಿ ಹುಟ್ಟಿದ ಆಲೋಚನೆಗಳನ್ನು ತಕ್ಷಣ ಕ್ರಿಯಾರೂಪಕ್ಕೆ ತರುವವರು, ಆಗಿಂದಾಗ್ಗೆ ಅದನ್ನು ಹೊಡೆದೋಡಿಸುತ್ತಾ ಹೊಸದಕ್ಕೆ ಸ್ಥಾನ ಕಲ್ಪಿಸುತ್ತಾರೆ. ಕೆಲವರು ಯಾವುದೊಂದನ್ನೂ ಕಾರ್ಯರೂಪಕ್ಕೆ ತರಲೂ ಆಗದೆ, ಬಿಡಲೂ ಆಗದೆ ಆವುಗಳನ್ನು ಕಟ್ಟಿಕೊಂಡೇ ಬದುಕುತ್ತಾರೆ. ಅದು ಅವರ ಜೀವನದ ಒಂದು ಭಾಗವಾಗಿಬಿಡುತ್ತದೆ. ಅವರಿಗೆ ಅದರಿಂದ ವಿಮುಕ್ತಿ ಎಂಬುದೇ ಇರುವುದಿಲ್ಲ."

"ಈ ಎರಡರಲ್ಲಿ ನಾನು ಯಾವ ತರಹ ಎಂದು ನಿಮ್ಮ ಅಭಿಪ್ರಾಯ?"

"ಯಾವ ತರಹೆ ಆದರೇನಂತೆ, ನಿಮಗೆ ಅಂತಹ ಆಲೋಚಿಸಬೇಕಾದ ವಿಷಯಗಳೇನೂ ಇರೊಲ್ಲ ಅಂತ ನನ್ನ ಅಭಿಪ್ರಾಯ."

"ನಮ್ಮ ಕುಟುಂಬವನ್ನು ಕುರಿತು, ನನ್ನನ್ನು ಕುರಿತು ನಿಮಗೇನೂ ತಿಳಿಯದು. ಆದ್ದರಿಂದ ನೀವು ಹಾಗೆ ಭಾವಿಸುವುದೂ ಸಹಜವೇ."

"ನನಗೆ ನಿಮ್ಮನ್ನು ಕುರಿತು ತಿಳಿದದ್ದೆಲ್ಲಾ ಒಂದೇ. ಹಿಡಿದ ಕೆಲಸವನ್ನು ಸಕ್ರಮವಾಗಿ ಶ್ರದ್ಧೆಯಿಂದ ಮಾಡುತ್ತಾ, ಚಿಕ್ಕಮಕ್ಕಳೊಂದಿಗೆ ಮಗುವಾಗಿ ಕುಣಿಯುತ್ತಾ ಆಡುತ್ತಾ ಇರುವ ನಿರ್ಮಲ ಹೃದಯದ ಜಾನಕಿ ಮಾತ್ರ. ಅದಕ್ಕಿಂತ ಹೆಚ್ಚಾಗಿ ನಿಮ್ಮನ್ನು ಕುರಿತು ಆಲೋಚಿಸುವ ಅವಕಾಶ ನೀವು ನನಗೆ ಕೊಟ್ಟಿಲ್ಲ."

"ಹೌದು ಗೋವಿಂದಬಾಬೂ, ಮನುಷ್ಯನ ಬದುಕಿಗೆ ಎರಡು ಮುಖಗಳಿರುತ್ತವೆಯೆನ್ನುತ್ತಾರೆ. ನಗುತ್ತಾ ನಾಲ್ಕು ಜನರೆದುರಿಗೆ ಕಾಣಿಸಿಕೊಳ್ಳುವುದೊಂದು. ಅಂತರ್ಯದಲ್ಲಿ ಮನಸ್ಸನ್ನು ಕಳವಳಗೊಡಿಸಿ ಚಿಂತಿಸುವುದಿನ್ನೊಂದು

ಬಹಳ ಜನಕ್ಕೆ ಮನುಷ್ಯನ ಮೊದಲರೂಪದೊಂದಿಗೆ ಪರಿಚಯವಿರುತ್ತದೆ. ಅವನಿಗೇನು, ಅದೃಷ್ಟವಂತ ಅನ್ನುತ್ತಾರೆ. ಕೆಲವರು ಮಾತ್ರ ಅವನ ಬಾಳಿನೊಳಕ್ಕೆ ಇಣಿಕಿ ನೋಡಿ ಸಹಾನುಭೂತಿಯೊಂದಿಗೆ ಎರಡು ಮುಖಗಳನ್ನೂ ಅರ್ಥಮಾಡಿಕೊಂಡು, ಯಾವುದು ಸರಿ ಎಂದು ಆಲೋಚಿಸಿ ಅವನ ಮಾನಸಿಕ ವೇದನೆ ಸ್ವಯಂಕೃತವೋ, ಪರಿಸ್ಥಿತಿಯಿಂದಾಗಿ ಹೀಗಾಯಿತೋ ನಿರ್ಣಯಿಸಲು ಪ್ರಯತ್ನಿಸುತ್ತಾರೆ. ಆ ಮನುಷ್ಯನ ಬದುಕಿನ ರೂಪರೇಖೆಗಳು ಸ್ವಲ್ಪ ಮಟ್ಟಿಗಾದರೂ ಅವರಿಗೆ ತಿಳಿಯುತ್ತದೆ."

"ನನ್ನ ಅಭಿಪ್ರಾಯದಲ್ಲಿ ಈ ಬಾಹ್ಯ ಅಂತರ್ಗತ ಜೀವನಗಳು ಎಷ್ಟು ಹತ್ತಿರವಾಗಿದ್ದರೆ ಅಷ್ಟೂ ಒಳ್ಳೆಯದು ಜಾನಕಿ. ಈ ಎರಡರ ವ್ಯತ್ಯಾಸವನ್ನು ಎಷ್ಟು ಕಡಿಮೆ ಮಾಡಿಕೊಂಡರೆ ಅಷ್ಟು ಬೇಗ ಮನುಷ್ಯ ಚೇತರಿಸಿಕೊಳ್ಳುತ್ತಾನೆ. ವ್ಯಥೆಯನ್ನೆಲ್ಲಾ ತನ್ನಲ್ಲಿಯೇ ಇರಿಸಿಕೊಂಡು ಹೊರ ಪ್ರಪಂಚಕ್ಕೆ ತಾನು ತುಂಬಾ ಸುಖವಾಗಿರುವಂತೆ ಭ್ರಾಂತಿಯನ್ನುಂಟ ಮಾಡುತ್ತಾ ದಿನ ಕಳೆಯುತ್ತಿದ್ದರೆ ಒಂಟಿಯಾಗಿದ್ದಾಗ ಒಳಗೊಳಗೇ ಅಡಗಿರುವ ಚಿಂತೆ ಅವನನ್ನು ಸಾಕಷ್ಟು ಹಿಂಸಿಸುತ್ತದೆ. ಹಾಗೆಂದು ಕಂಡವರಿಗೆಲ್ಲಾ ತಮ್ಮ ದುಃಖ-ಚಿಂತೆಗಳನ್ನು ವಿವರಿಸಬೇಕೆಂಬುದು ನನ್ನ ಅಭಿಪ್ರಾಯವಲ್ಲ. ಕಷ್ಟಸುಖಗಳನ್ನು ಹಂಚಿಕೊಳ್ಳಬೇಕೆನ್ನಿಸುವ ಆತ್ಮೀಯರೊಂದಿಗಾದರೂ ಮನಸುಬಿಚ್ಚಿ ಮಾತನಾಡಿ ಅದನ್ನು ಹಗುರಪಡಿಸಿಕೊಳ್ಳಬೇಕಾದ ಅವಶ್ಯಕತೆ ಮನುಷ್ಯನಿಗೆ ಎಂದಾದರೂ ಒಂದು ಸಲ ಉಂಟಾಗುತ್ತದೆ."

"ಜಾನಕಿ ಅವನ ಮಾತಿಗೆ ಜವಾಬು ಕೊಡಲಿಲ್ಲ. ಮೇಜಿನ ಮೇಲೆ ಬಿದ್ದಿದ್ದ ಕಾಗದಗಳನ್ನು ನೀಟಾಗಿ ಜೋಡಿಸಿಟ್ಟು, "ಇನ್ನು ಹೊರಡೋಣವೇ ಗೋವಿಂದಬಾಬೂ" ಎಂದಳು.

'ತಾನಂದ ಮಾತಿನಲ್ಲಿ ತಪ್ಪೇನಾದರೂ ಇದೆಯೇ? ಅದುವರೆವಿಗೂ ಸರಿಯಾಗಿ ಮಾತನಾಡುತ್ತಿದ್ದ ಜಾನಕಿ ಹಠಾತ್ತಾಗಿ ಸಂಭಾಷಣೆಯನ್ನು ಕಡಿದುಹಾಕಲು ಕಾರಣವೇನು?' ಎಂದು ಆಲೋಚಿಸತೊಡಗಿದ ಗೋವಿಂದ ಬಾಬು.

ಜಾನಕಿಯ ಆಲೋಚನೆಗಳು ಬೇರೆ ವಿಧವಾಗಿದ್ದುವು. ಈ ಗೋವಿಂದ ಬಾಬು ಪ್ರತಿಯೊಂದು ಚಿಕ್ಕ ಅವಕಾಶವನ್ನೂ ತನ್ನ ಬದುಕಿನೊಳಕ್ಕೆ ಇಣಿಕಿ ನೋಡಲು ಉಪಯೋಗಿಸಿಕೊಳ್ಳುತ್ತಿದಾನೇಕೆ? ತನ್ನ ಮಾತು ಅರ್ಥವಾಗದೆ ಆ ಮಾತಿನ ಹಿಂದೆ ಅಡಗಿದ ಭಾವನೆಯನ್ನು ತಿಳಿದುಕೊಳ್ಳಲು ಚಡಪಡಿಸುವುದೇಕೆ?

ಇಷ್ಟು ದಿನದಿಂದ ಈ ಇಬ್ಬರೂ ಕಲೆತು ಕೆಲಸ ಮಾಡುತ್ತಿದ್ದರೂ ಒಂದು ಕಡೆ ಕುಳಿತು ಅನೇಕ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದರೂ ಮನಸು ಮಾತ್ರ ದೂರದೂರವಾಗಿಯೇ ನಿಂತಿತ್ತು. ಮೊದಲ ದಿನ ಹೇಳಿದ್ದನ್ನು ಬಿಟ್ಟರೆ ಗೋವಿಂದಬಾಬುವಿನ ವಿಷಯ ತನಗೇನೂ ತಿಳಿಯದು. ತನ್ನನ್ನು ಕುರಿತು ಆತನಿಗೆ ತಿಳಿದದ್ದು ಅತ್ಯಲ್ಪ.

ಆದರೆ ಈ ನಡುವೆ ಆ ದೂರ ಕಡಿಮೆಯಾಗುತ್ತಿದ್ದಂತೆ ಅನ್ನಿಸುತ್ತಿತ್ತು. ಅದಕ್ಕೆ ಕಾರಣ ಹುಡುಕಬೇಕೆಂಬ ಆಸಕ್ತಿ ತನಗೆಂದೂ ಉಂಟಾಗಲಿಲ್ಲ. ಬಹಳ ಕಾಲ ಒಂದು ಕಡೆ ಇದ್ದು ಜತೆಯಾಗಿ ಕೆಲಸ ಮಾಡುವವರ ಮಧ್ಯೆ ಸ್ನೇಹ ಬಲಪಡುವುದರಲ್ಲಿ ಅಸಹಜತೆಯೇನೂ ಕಾಣಲಿಲ್ಲ.

ಆತ ಅಧಿಕಾರಿಯಾದರೂ ತಾನು ಆತನ ಮಾತಿನಂತೆ ನಡೆಯಬೇಕಾದ ಆವಶ್ಯಕತೆಯಿದ್ದರೂ ತಾವು ಮಾಡುತ್ತಿದ್ದ ಕೆಲಸ ಇತರ ಸಂಸ್ಥೆಗಳಂತೆ ಮನುಷ್ಯರನ್ನು ಸಾಕಷ್ಟು ದೂರದಲ್ಲಿರಿಸುವಂತಹುದಾಗಿರಲಿಲ್ಲ. ಒಂದು ವಿಧವಾಗಿ ನೋಡಿದರೆ ಬಾಲವಿಹಾರ ಒಂದು ಅವಿಭಕ್ತ ಕುಟುಂಬದಂತಹುದು. ಪ್ರತಿಯೊಂದು ಸಮಸ್ಯೆಯನ್ನೂ ಎಲ್ಲಾ ಕೋಣಗಳಿಂದಲೂ ಪರಿಶೀಲಿಸಿ ಆಚರಣೆಯಲ್ಲಿ ತರಬೇಕಾಗುತ್ತಿತ್ತು.

"ಒಟ್ಟು ಕುಟುಂಬ ಸರಿಯಾಗಿ ನಡೆಯಬೇಕಾದರೆ ಕುಟುಂಬದಲ್ಲಿನ ಸದಸ್ಯರೆಲ್ಲರ ಸಹಕಾರ ಎಷ್ಟು ಆವಶ್ಯವೋ ಇಂತಹ ಸಂಸ್ಥೆಗಳು ಸಮರ್ಪಕ ರೀತಿಯಲ್ಲಿ ನಡೆಯಬೇಕಾದರೆ ಅದರಲ್ಲಿ ಕೆಲಸ ಮಾಡುವವರ ಚಿತ್ತಶುದ್ಧಿ, ಸಹಕಾರ ಅಷ್ಟೇ ಆವಶ್ಯಕವಾದದ್ದು" ಎನ್ನುತ್ತಿದ್ದರು ಅನಸೂಯಮ್ಮ.

"ಯಾವುದಾದರೂ ಒಂದು ಒಳ್ಳೆಯ ಕೆಲಸ ಸಾಧಿಸಬೇಕಾದರೆ ಅದನ್ನು ಮಾಡಬೇಕೆಂದು ನಿರ್ಧರಿಸಿಕೊಂಡ ಒಬ್ಬ ವ್ಯಕ್ತಿಯಿಂದ ಮಾತ್ರವೇ ಅದು ನೆರವೇರಲಾರದು, ಜಾನಕಿ. ಮಿಕ್ಕ ಎಲ್ಲರ ಸಹಕಾರವೂ ಬೇಕು ಅವನಿಗೆ. ಅದಕ್ಕೆ ಸಂಬಂಧಪಟ್ಟವರೆಲ್ಲ ಪರಸ್ಪರ ಅರ್ಥಮಾಡಿಕೊಂಡು ಕೆಲಸ ಮಾಡಿದಾಗಲೇ ಒಳ್ಳೆಯ ವಾತಾವರಣ ಏರ್ಪಟ್ಟು ಕೆಲಸದಲ್ಲಿ ಪೂರ್ಣ ಫಲಿತ ಕಂಡು ಬರುತ್ತದೆ" ಎನ್ನುತ್ತಿದ್ದ ಗೋವಿಂದ ಬಾಬು.

ಕೇವಲ ಅಂತಹ ಉದ್ದೇಶದಿಂದಲೇ ತನ್ನನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆಯೇ ಈತ? ಇಷ್ಟು ದಿನಗಳ ನಂತರ ಇನ್ನು ಕೆಲವು ದಿನಗಳಲ್ಲಿಯೇ ಆತ ಹೊರಟು ಹೋಗಲಿರುವ ಸಮಯದಲ್ಲಿ ಈಗ ಇದರ ಆವಶ್ಯಕತೆಯೇನು?—ಎಂದುಕೊಂಡಳು ಜಾನಕಿ.

ಮಾತನಾಡದೆ ಮೌನವಾಗಿ ನಿಂತಿರುವುದು ಅಸಹನೀಯವಾಯಿತು

ಗೋವಿಂದಬಾಬೂಗೆ ಏನಾದರೂ ಹೇಳಿ ಅಲ್ಲಿಂದ ಹೊರಟುಹೋಗೋಣ ವೆಂದುಕೊಂಡ.

"ಅಂ....ಜಾನಕಿ! ನಿನ್ನನ್ನು ಈ ಸ್ಥಿತಿಯಲ್ಲಿ ನೋಡಿ ನಾನು ಬಂದ ಕೆಲಸಾನೇ ಮರೆತುಬಿಟ್ಟೆ. ನೀವು ಮೌನವ್ರತ ಹಿಡಿದು ನನ್ನ ಜ್ಞಾಪಕಶಕ್ತಿಯನ್ನು ಎಚ್ಚರಗೊಳಿಸಲು ವೇಳೆ ಕೊಟ್ಟಿರಿ. ಇಲ್ಲದಿದ್ದರೆ ಹೀಗೇ ಏನಾದರೂ ಮಾತಾಡುತ್ತಾ ಇದ್ದುಬಿಡುತ್ತಿದ್ದೆ...."

"ಇಷ್ಟಕ್ಕೂ ನೀವು ಬಂದ ಕೆಲಸ...."

"ನೀವು ಮನೆಗೆ ಹೋಗುವ ಮುನ್ನ ತನ್ನನ್ನೊಂದು ಸಲ ನೋಡಿ ಹೋಗಬೇಕೂಂತೆ—ಅಕ್ಕ ಹೇಳಿದಳು."

"ನಡೆಯಿರಿ, ಈವತ್ತಿನ ನನ್ನ ಕೆಲಸ ಮುಗಿದಂತೆಯೇ. ಮನೆಗೆ ಹೋಗುವ ಪ್ರಯತ್ನದಲ್ಲಿರುವಾಗಲೇ ನೀವು ಬಂದಿರಿ" ಎಂದಳು ಜಾನಕಿ.

"ನನಗೆ ಬೇರೆ ಕೆಲಸ ಇದೆ. ನೀವು ಹೋಗಿ" ಎಂದು ಅವಳ ಉತ್ತರವನ್ನು ನಿರೀಕ್ಷಿಸದೆಯೇ ಹೊರಟುಹೋದ ಗೋವಿಂದಬಾಬು.

ಆತ ಹೋದ ಕಡೆಯೇ ನೋಡುತ್ತಾ ನಿಂತುಬಿಟ್ಟಳು ಜಾನಕಿ. ಬೆಳಕಿನಲ್ಲಿ ಹಸಿರುಗಂಬಳಿಯಂತಿದ್ದ ಲಾನ್ ದಾಟಿ ಬಣ್ಣಬಣ್ಣದ ಹೂಗಿಡಗಳನ್ನು ದಾಟಿ ಕಾಲುದಾರಿಯಿಂದ ಮುಂದಕ್ಕೆ ನಡೆದ ಆತ. ಆ ಗಿಡಗಳ ಹಿಂದೆ ಮಕ್ಕಳ ಹಾಸ್ಟೆಲಿತ್ತು. ಆ ಗಿಡಗಳು ಆಫೀಸಿಗೂ ಹಾಸ್ಟೆಲಿಗೂ ಸರಿಹದ್ದಿನಂತಿತ್ತು.

ಕೊಂಚ ಹೊತ್ತು ಮಕ್ಕಳೊಂದಿಗೆ ಹರಟೆ ಹೊಡೆಯಲೆಂದೇ ಆತ ಹೊರಟಿದಾನೆಂದು ಜಾನಕಿಗೆಗೊತ್ತಿತ್ತು. ದಿನಾ ಸ್ವಲ್ಪ ಹೊತ್ತು ಅವರೊಂದಿಗೆ ಆಟವಾಡಿ, ಕೀಟಲೆ ಮಾಡಿ, ರೇಗಿಸಿ, ನಗಿಸದಿದ್ದರೆ ಅವನಿಗೆ ತೋಚುತ್ತಿರಲಿಲ್ಲ. ದೊಡ್ಡ ಹುಡುಗರು ದೊಡ್ಡವರೆಂಬ ಭಾವನೆಯಿಂದ ಸುಮ್ಮನಿದ್ದರೂ ಚಿಕ್ಕ ಮಕ್ಕಳು ಅಣ್ಣನ ತಪ್ಪಿಗೆ ತಕ್ಕ ಪ್ರತೀಕಾರಮಾಡಿ ತೀರಿಸಿಕೊಳ್ಳದೆ ಬಿಡುತ್ತಿರಲಿಲ್ಲ. ಅವನ ಕ್ರಾಪು ಕೆಡಿಸಿ, ಬಣ್ಣದ ಸೀಮೆಸುಣ್ಣದಿಂದ ಅವನ ಷರ್ಟಿನ ಮೇಲೆ ರಾಕ್ಷಸರ ಚಿತ್ರ ಗೀಚಿ, ಗಲಾಟೆ ಮಾಡಿ, ಸಂತೃಪ್ತಿಪಡುತ್ತಿದ್ದರು.

"ಗೋವಿಂದೂ ನಿನಗೆ ಮಕ್ಕಳೆಂದರೆ ಇಷ್ಟು ಇಷ್ಟವಲ್ಲೋ. ಏಕೆ ಇನ್ನೂ ಮದುವೆ ಮಾಡಿಕೊಂಡಿಲ್ಲ?" ಎಂದು ಪ್ರಶ್ನಿಸಿದರು ಅನಸೂಯಮ್ಮ ಒಂದು ಸಲ—ಆತ ಮಕ್ಕಳೊಂದಿಗೆ ಆಟದಲ್ಲಿ ಮಗ್ನನಾಗಿದ್ದಾಗ.

"ಮದುವೇನೆ? ಮದುವೆ ಮಾಡಿಕೊಂಡರೆ ಇಂತಹ ಮುದ್ದುಮಕ್ಕಳು ಹುಟ್ಟುತ್ತಾರೆಂಬ ನಂಬಿಕೆಯೇನು?" ಎಂದ ತಾನು ಎತ್ತಿಕೊಂಡಿದ್ದ ಹಸುಕಂದನ ಕೆನ್ನೆ ಮುದ್ದಿಟ್ಟುಕೊಳ್ಳುತ್ತಾ.

"ಓ, ಹುಟ್ಟುತ್ತಾರೆ. ಒಳ್ಳೆ ಚಂದದ ಹುಡುಗಿಯನ್ನು ನೋಡಿ ಮದುವೆ ಮಾಡಿಕೋ."

"ಒಂದು ವೇಳೆ ಮಕ್ಕಳಿಗೆ ನನ್ನ ಹೋಲಿಕೆ ಬಂದರೆ?"

"ಬಂದರೇನಂತೆ? ಏನಾಗಿದೆ ನಿನಗೆ?"

"ಅಕ್ಕನಾದ್ದರಿಂದ ಹಾಗೆ ಹೇಳುತ್ತಿದ್ದಿ. ಇನ್ನು ಯಾರನ್ನಾದರೂ ಹಾಗನ್ನು ನೋಡೋಣ" ಎಂದ ತುಂಟನಗೆ ನಗುತ್ತಾ.

ತನ್ನ ಪಕ್ಕದಲ್ಲಿದ್ದ ಜಾನಕಿಯನ್ನು ನೋಡಿ, "ನೀನು ಹೇಳು ಜಾನಕಿ, ಗೋವಿಂದೂಗೆ ಏನಾಗಿದೆ. ನೋಡಲು ಚೆನ್ನಾಗಿಲ್ಲವೆ?" ಎಂದರು ಆಕೆ ಮುಂದಕ್ಕೆ ಹೆಜ್ಜೆ ಹಾಕುತ್ತಾ.

"ಆತನಿಗೇನಂತೆ? ಎಷ್ಟು ಜನ ಇರುತ್ತಾರೆ ಅಂತಹವರು?"

"ನನ್ನ ಗುಣ ಕೇಳ್ತಾ ಇಲ್ಲ ಅಕ್ಕ. ರೂಪ ಕುರಿತು ಕೇಳ್ತಿದಾಳೆ. ಹೇಳಿ ಈಗ ನೋಡೋಣ" ಗೋವಿಂದ ಬಾಬು ಗಟ್ಟಿಯಾಗಿ ನಕ್ಕ.

ಮೊದಲ ಸಲ ಜಾನಕಿ ಗೋವಿಂದ ಬಾಬುವನ್ನು ಪರಿಶೀಲನಾದೃಷ್ಟಿಯಿಂದ ನೋಡಿದಳು. ಅದೇ ಸಮಯದಲ್ಲಿ ಆತ ಸಹ ಅವಳ ಕಡೆ ನೋಡಿದ. ಇಬ್ಬರ ಕಣ್ಣು ಕ್ಷಣಕಾಲ ಕಲೆತು ಬೇರೆಯಾದುವು. ಮರುಕ್ಷಣ ದೃಷ್ಟಿ ತಪ್ಪಿಸಿ ಮಕ್ಕಳನ್ನು ಮಾತನಾಡಿಸುತ್ತಾ ಮುಂದೆ ಹೋಗುತ್ತಿದ್ದ ಅನಸೂಯಮ್ಮನನ್ನು ಅನುಸರಿಸಿದಳು ಜಾನಕಿ.

ಗೋವಿಂದ ಬಾಬು ಗಿಡಗಳ ಹಿಂದೆ ಕಾಣದಂತಾಗುವವರೆಗೂ ನೋಡುತ್ತಾ ನಿಂತಿದ್ದಳು ಜಾನಕಿ. ಆ ದಿನ ಗೋವಿಂದ ಬಾಬುವಿನ ರೂಪವನ್ನು ಕುರಿತು ಏನೂ ಹೇಳಲಾರದಾಗಿದ್ದಳು, ಜಾನಕಿ. ಆದರೆ ಈ ದಿನ ಯಾರೂ ಪ್ರಶ್ನಿಸದೆಯೇ, 'ಗೋವಿಂದಬಾಬು ಸುಂದರ ಯುವಕ'—ಎಂದು ಜಾನಕಿಯ ಮನಸು ಹೇಳುತ್ತಿತ್ತು.

ಇದೇನು ಈ ದಿನ ತನ್ನ ಆಲೋಚನೆಗಳೆಲ್ಲಾ ಆತನ ಸುತ್ತಲೂ ಪರಿಭ್ರಮಿಸುತ್ತಿದೆಯಲ್ಲಾ, ಆತನ ಅಂದಚೆಂದಗಳೊಂದಿಗೂ, ಒಳಿತುಕೆಡಕುಗಳೊಂದಿಗೂ ನನಗೇನು ಸಂಬಂಧ? ಇಲ್ಲಿರುವಷ್ಟು ದಿನ ಸಕ್ರಮವಾಗಿ ಕೆಲಸ ಮಾಡಿ ಕಾಲ ಕಳೆಸರೆ ಆಯಿತು. ಅನಂತರ ತಾನಾರೋ ಆತನಾರೋ ಎಂದುಕೊಳ್ಳುತ್ತಾ ಬೇಗಬೇಗ ಹೆಜ್ಜೆ ಹಾಕತೊಡಗಿದಳು ಜಾನಕಿ.

ಅನಸೂಯಮ್ಮ ಜಾನಕಿಗೋಸ್ಕರ ಎದುರುನೋಡುತ್ತಿದ್ದವರಂತೆ ವರಾಂಡದಲ್ಲಿ ಕುಳಿತಿದ್ದರು.

"ಗೋವಿಂದು ಹೊರಟು ತುಂಬಾ ಹೊತ್ತಾಯಿತಲ್ಲಾ. ನೇರಾಗಿ ನಿನ್ನ

ಬಳಿಗೆ ಬರಲಿಲ್ಲವೇನು?" ಎಂದರಾಕೆ.

"ಆತ ಬಂದು ಹೋಗಿ ತುಂಬಾ ಹೊತ್ತಾಯಿತು. ಯಾವುದೋ ಕಾಗದಗಳನ್ನು ನೋಡುತ್ತಾ ಕುಳಿತದ್ದರಿಂದ ಹೊತ್ತಾಯಿತು."

"ಮತ್ತೇನಿಲ್ಲ, ಮೊನ್ನೆ ಮನೆಯ ವಿಷಯ ಕೇಳಿದೆಯಲ್ಲಾ. ಈಗ ಸಧ್ಯಕ್ಕೆ ನಿನಗೆ ಕೊಡಲು ಮನೆ ಇಲ್ಲಾಂದುಕೊಂಡೆ. ಆದರೆ ಗೋವಿಂದು ಹೇಳಿದ— ಮಕ್ಕಳ ಹಾಸ್ಟೆಲಿನ ಪಕ್ಕದಲ್ಲಿರುವ ಎರಡು ಕೋಣೆಗನನ್ನು ಜಾನಕಿ ಬೇಕಾದರೆ ಉಪಯೋಗಿಸಿಕೊಳ್ಳಬಹುದು ಅಂತ. ತಿಂಗಳೊಳಗಾಗಿ ಉತ್ತರದ ಕಡೆ ಮನೆಗಳು ಸಿದ್ಧವಾಗುತ್ತವೆ. ಸುಣ್ಣ ಬಣ್ಣ ಮಾತ್ರ ಮಿಕ್ಕಿದೆಯಂತೆ. ನೀನು ಯಾವಾಗ ಬೇಕೂನ್ನಿಸಿದರೆ ಆಗ ಬಂದುಬಿಡು" ಎಂದರು ಅನಸೂಯಮ್ಮ.

"ಈಗ ಅಷ್ಟು ಅವಸರವೇನಿಲ್ಲ. ಇನ್ನೂ ಈ ವಿಷಯ ಅಣ್ಣನೊಂದಿಗೆ ಮಾತನಾಡಲೇ ಇಲ್ಲ ನಾನು. ಅವನೇನಂತಾನೋ ಏನೋ. ನಿಮ್ಮ ಸಹಾಯಕ್ಕೆ ತುಂಬಾ ಧನ್ಯವಾದಗಳು. ನಾನು ಆಲೋಚಿಸಿ ಎರಡು ಮೂರು ದಿನಗಳಲ್ಲಿ ಹೇಳುತ್ತೀನಿ" ಎಂದು ಮೇಲೆದ್ದಳು, ಜಾನಕಿ.

"ಸರಿ, ಹಾಗೇ ಮಾಡು, ನಿನ್ನಿಷ್ಟ. ನನ್ನ ಉದ್ದೇಶ ಬೇರೇನೂ ಅಲ್ಲ. ಗೋವಿಂದು ಹೊರಟುಹೋಗುತ್ತೀನಿ ಅನ್ನುತ್ತಿದ್ದಾನೆ. ತುಂಬಾ ಬಲವಂತ ಮಾಡಿದ್ದಕ್ಕೆ ಒಂದೆರಡು ತಿಂಗಳು ಇರಲು ಒಪ್ಪಿಕೊಂಡ ನನ್ನ ದೇಹಶಕ್ತಿ ದಿನ ದಿನಕ್ಕೂ ಕುಗ್ಗುತ್ತಿದೆ. ಈ ಕೆಲಸ ಮಾಡಲು ದುಡ್ಡು ಕೊಟ್ಟರೆ ಯಾರೂ ಬರೋಲ್ಲ ಅಂತಲ್ಲ. ಆದರೆ ಗೋವಿಂದಬಾಬು ಮಾಡಿದಂತೆ ಶ್ರದ್ಧೆ ಆಸಕ್ತಿಗಳಿಂದ ಯಾರು ಮಾಡುತ್ತಾರೆ? ಅವನು ಬಂದಮೇಲೆ ಬಾಲವಿಹಾರವನ್ನು ಎಷ್ಟು ಅಭಿವೃದ್ಧಿಗೆ ತಂದ, ಎಷ್ಟು ಬದಲಾವಣೆ ಮಾಡಿದ. ಇಂಥಾ ಕೆಲಸಗಳು ನನ್ನಂತಹ ವಯಸ್ಸಾದವರಿಂದ ಹೇಗೆ ಸಾಧ್ಯ! ಜಾನಕಿ, ನಿಮ್ಮಂತಹ ಉತ್ಸಾಹವಂತರಾದವರು ಮಾಡಬೇಕಾದ ಕೆಲಸ ಇದು. ಗೋವಿಂದು ಇನ್ನೊಂದು ವರ್ಷ ಇಲ್ಲಿದ್ದರೆ....ಹೋಗಲಿ ನೀನೊಂದು ಸಲ ಹೇಳಿ ನೋಡಬಾರದೇ?"

ಅನಸೂಯಮ್ಮನ ಮಾತಿನ ಧೋರಣೆ ಜಾನಕಿಯನ್ನು ಆಶ್ಚರ್ಯಗೊಳಿಸಿತು. ಗೋವಿಂದ ಬಾಬು ತನ್ನ ಆಜ್ಞಾನುವರ್ತಿಯಾಗಿರುವಂತೆ ಮಾತನಾಡುತ್ತಿದಾರಲ್ಲಾ ಈಕೆ ಎಂದುಕೊಂಡಳು.

"ನೀವು ಹೇಳಿದರೆ ಕೇಳದ್ದು ನಾನು ಹೇಳಿದರೆ ನಿಲ್ಲುತ್ತಾರೆಯೋ?" ಎಂದಳು.

ಆ ಮಾತಿನಲ್ಲಿದ್ದ ಬೇಸರವನ್ನು ಗ್ರಹಿಸಿದರು ಅನಸೂಯಮ್ಮ. ನಿಜ.

ಜಾನಕಿಗೂ ಗೋವಿಂದಬಾಬುವಿಗೂ ಇರುವ ಸಂಬಂಧವೇನು? ವಯಸ್ಸಿನಲ್ಲಿರುವವರು ಸ್ವಲ್ಪ ಸಲಿಗೆಯಿಂದ ಇದ್ದಮಾತ್ರಕ್ಕೇ ನನ್ನಂತಹ ಮುದುಕರು ಅಷ್ಟಕ್ಕೇ ಏನೇನೋ ಕಲ್ಪಿಸಿಕೊಳ್ಳುತ್ತಾ, ಆ ಸಲಿಗೆಯಲ್ಲಿ ಮತ್ತೇನಾದರೂ ಭಾವ ಅಡಗಿದೆಯೇನೋ ಎಂದು ಹುಡುಕುತ್ತಾರೆ. ಈ ಮಾತು ತಾನು ಅನ್ನಬಾರದಾಗಿತ್ತು—ಎಂದುಕೊಂಡರು. "ಸರಿ ಬಿಡು ಜಾನಕಿ. ಗೋವಿಂದ ಬಾಬು ಹೊರಟುಹೋದರೂ ನೀನು ಇಲ್ಲಿಗೆ ಬಂದರೆ ಮಕ್ಕಳಿಗೆ ಹತ್ತಿರವಾಗಿರುತ್ತಿ. ಅದೇ ನನ್ನ ಅಭಿಪ್ರಾಯ. ಅವಸರವೇನಿಲ್ಲ. ಆಲೋಚಿಸಿ ನಿನಗೆ ಸರಿಯೆನಿಸಿದರೆ ಬಾ" ಎಂದರಾಕೆ.

ಜಾನಕಿ ಆಲೋಚಿಸುತ್ತಾ ಮನೆಗೆ ಹೊರಟಳು. ಅದಕ್ಕೆ ಮುಂಚೆ ಅನಸೂಯಮ್ಮನ ಬಳಿ ಈ ಮಾತು ತೆಗೆಯುವುದಕ್ಕೆ ಕಾರಣವಿತ್ತು. ಶಾಂತ ಮನೆ ಬಿಟ್ಟು ಹೋದಾಗಿನಿಂದ ಎಷ್ಟೆಷ್ಟೋ ವಿಧವಾದ ಸಂದೇಹ, ಕಳವಳ, ಕೊರಗು ಅವಳನ್ನು ಮುತ್ತಿ ಕಾಡುತ್ತಿತ್ತು. ಅಣ್ಣ ಶ್ರೀಹರಿಯ ಮಾತು ಕೇಳಿದರೆ ಯಾವ ಕಾರಣದಿಂದಾದರೂ ಶಾಂತ ಹಿಂದಿರುಗಿ ಬಂದರೆ ಅಣ್ಣ ಅವಳನ್ನು ಮನೆಗೆ ಸೇರಿಸುವುದಿಲ್ಲವೆನಿಸಿತ್ತು.

ವರ್ಷದ ಹಿಂದೆ ತಮ್ಮ ಮನೆಯ ಎದುರು ಮನೆಯ ಅರ್ಧರಾತ್ರಿ ಕೂಗು ಚೀರಾಟ ಕೇಳಿಸಿತ್ತು. ಅಮಾಯಕವಾಗಿ ಮೋಸ ಹೋಗಿದ್ದ ಬಾಲವಿಧವೆ ಚೆಲ್ಲಾಯಮ್ಮ, ಆ ಕಡೆ ನಂಬಿಸಿ ಕೈಬಿಟ್ಟವನಿಂದ ದೂರವಾಗಿ, ಈ ಕಡೆ ಗುಟ್ಟಾಗಿ ತನ್ನನ್ನು ಹೆತ್ತವರು ಕಾಪಾಡುತ್ತಾರೆಂಬ ಭರವಸೆಯಿಂದ ಬಂದು, ನಾಯಿಗಿಂತ ಹೀನವಾಗಿ ತಳ್ಳಲ್ಪಟ್ಟು ಆ ಅವಮಾನ ಸಹಿಸಲಾರದೆ ಗಂಗಾದೇವಿಗೆ ಶರಣುಹೋಗಿದ್ದಳು. ಪರಿಚಯಸ್ಥರ ಹೇಳನೆ, ಹೆತ್ತವರ ಕಠೋರೋಕ್ತಿಗಳು ಅವಳನ್ನು ಸೇರದ ದೂರಕ್ಕೆ ಪ್ರಯಾಣ ಮಾಡಿಸಿದ್ದುವು. ಸತ್ತ ಮೇಲೂ ತನ್ನವರ ಕಣ್ಣೀರನ್ನು ತೊಡೆಯುವ ಭಾಗ್ಯ ಇರಲಿಲ್ಲ ಅವಳಿಗೆ.

ಶಾಂತ ಮತ್ತೊಬ್ಬ ಚೆಲ್ಲಾಯಮ್ಮ ಆಗಬಾರದು. ಮನಸು ಮಾನವತೆ ಇರುವ ಯಾವ ಕುಟುಂಬದಲ್ಲೂ ಚೆಲ್ಲಾಯಮ್ಮರನ್ನು ಸೃಷ್ಟಿಸಬಾರದು. ತಪ್ಪಿಗೆ ಶಿಕ್ಷೆಯ ಆವಶ್ಯಕತೆಯೆಷ್ಟಿದೆಯೋ ಕ್ಷಮೆಯ ಆವಶ್ಯಕತೆಯೂ ಅಷ್ಟೇ ಇದೆ. ತಾವು ಮಾಡಿದ ತಪ್ಪನ್ನು ತಿಳಿದುಕೊಂಡು ತಿದ್ದಿಕೊಳ್ಳುವ ಪರಿಸ್ಥಿತಿ, ವಾತಾವರಣ ಕಲ್ಪಿಸಿಕೊಡಬೇಕು ಅವರಿಗೆ.

ಚೆಲ್ಲಾಯಮ್ಮ, ಶಾಂತ ಮಾಡಿದ ಕೆಲಸದಲ್ಲಿನ ತಪ್ಪೊಪ್ಪುಗಳನ್ನು ಕುರಿತು ತಾನು ಚರ್ಚಿಸಬೇಕಾಗಿರಲಿಲ್ಲ. ಮನುಷ್ಯನಿಗೆ ಊಟ, ಒಟ್ಟೆ ಅಲ್ಲದೆ ಮತ್ತೂ ಕೆಲವು ಪ್ರಕೃತಿಸಿದ್ಧವಾದ ಆವಶ್ಯಕತೆಗಳಿರುತ್ತವೆಯೆಂದು ಎಲ್ಲರೂ

"ರಂಗೋಲಿ ನಾನು ಹಾಕ್ತೀನಿ. ಈ ಗಾಳಿ ನಿನ್ನ ಮೈಗೆ ಒಳ್ಳೇದಲ್ಲ. ಒಳಕ್ಕೆ ಹೋಗತ್ತಿಗೇ" ಎನ್ನುತ್ತ ರಂಗೋಲಿ ಡಬ್ಬ ಕೈಗೆ ತೆಗೆದುಕೊಂಡಳು ಜಾನಕಿ.

"ಈವತ್ತಿಗೆ ಬಿಡಮ್ಮ, ನಾಳೆಯಿಂದ ನೀನೇ ಹಾಕುವಿಯಂತೆ. ಮೊನ್ನೆ ಪಕ್ಕದ ಮನೆಯವರ ಹತ್ತಿರ ಕಲಿತುಕೊಂಡೆ ಹುಲಿಯುಗುರು ಚುಕ್ಕಿ ರಂಗೋಲಿ ಇಡಲೇ ಇಲ್ಲ. ಸರಿಯಾಗಿ ಬರುತ್ತೋ ಇಲ್ಲವೋ ಇಟ್ಟು ನೋಡ್ತೀನಿ" ಎಂದಳು ಕನಕ.

"ರಂಗೋಲೀಂದ್ರೆ ನಿಂಗೆಷ್ಟು ಇಷ್ಟ ಅತ್ತಿಗೆ" ಎಂದಳು ಜಾನಕಿ.

ಜಾನಕಿಯ ಮಾತಿನಿಂದ ಕನಕಳ ಆಲೋಚನೆಗಳು ಪ್ರವಾಹದಂತೆ ಹರಿಯತೊಡಗಿದುವು.

ಚಿತ್ರವಿಚಿತ್ರವಾದ ಹಸೆಬಿಡಿಸುವುದೆಂದರೆ ತನಗೆಷ್ಟೋ ಇಷ್ಟ. ಹಾಡು ಅಂದರೂ ತನಗೆ ಇಷ್ಟವೇ. ಒಂದು ವಿಧವಾಗಿ ಅವು ಎರಡೂ ತನ್ನ ಭಾವನೆ ಗಳಲ್ಲಿ ಹಾಸುಹೊಕ್ಕಾಗಿ, ಪಾಲು ಹಂಚಿಕೊಳ್ಳುತ್ತಾ, ಸದಾ ತನ್ನನ್ನು ಅನುನಯಿಸುವ ಆಪ್ತರಂತಹುವು.

ಮೊಣಕಾಲ ಮೇಲಕ್ಕೆ ಫ್ರಾಕುಕೊಟ್ಟು ಅಮ್ಮನ ಜತೆಯಲ್ಲಿ ರಂಗೋಲಿ ಗೆರೆ ಎಳೆಯಲು ಪ್ರಾರಂಭಿಸಿದಾಗಿನಿಂದ ಅವು ತನ್ನೊಂದಿಗೇ ಇವೆ. ಆಟಪಾಟ ಗಳಲ್ಲಿ ಹಬ್ಬಹರಿದಿನಗಳಲ್ಲಿ ತನ್ನೊಂದಿಗೆ ಸಮಾನವಾಗಿ ಆನಂದವನ್ನು ಹಂಚಿ ಕೊಂಡಿವೆ. ಎಷ್ಟೋ ಮರೆಯಲು ಸಾಧ್ಯವಾದ ಅನುಭವಗಳು ಅವುಗಳೊಂದಿಗೆ ಬೆಸೆತುಕೊಂಡಿವೆ. ಅವನ್ನು ತಾನು ಕಡಿದುಕೊಳ್ಳಲಾರಳು. ಆದ್ದರಿಂದಲೇ ರಂಗೋಲಿಯನ್ನು ತಾನು ಬಿಡಲಾರಳು.

ಚಳಿಗಾಳಿ ಸುಯ್ಯೆಂದು ಆ ಕಿವಿಯಿಂದ ಈ ಕಿವಿಗೆ ಬೀಸುತ್ತಿದ್ದರೂ ಉದಯರಾಗ ಹಾಡುತ್ತಾ ರಂಗೋಲಿ ಇಡುತ್ತಿದ್ದ ಅಜ್ಜಿಯ ಮುಖ 'ತಿಂಗಳ ಗಂಟೆ' ಹಸೆಯಲ್ಲಿ ತನಗೆ ಕಾಣುತ್ತಿತ್ತು.

"ಗುಮ್ಮನೆಲ್ಲಿ ಗೋಪಿದೇವಿ" ಹಾಡಿನ ಪಲ್ಲವಿ ಹಾಡುವಾಗ ಸದಾ ತನ್ನ ಕಂಠ ಗದ್ಗದವಾಗುತ್ತಿತ್ತು. ಅಮ್ಮ ಮೊಸರು ಕಡೆಯುತ್ತಾ ಆ ಹಾಡು ಹೇಳು ತ್ತಿದ್ದರೆ ತಮ್ಮ ಬೆನ್ನ ಮೇಲೆ ಬಿದ್ದು ಬೆಣ್ಣೆ ಕೊಡೆಂದು ಪೀಡಿಸುತ್ತಿದ್ದ. ಆಡುತ್ತಾಡುತ್ತಲೇ ಕಣ್ಣುಮುಚ್ಚಿದ ಆ ತಮ್ಮನ ಮುದ್ದುಮಾತು, ಆ ಹಾಡಿನ ಪಲ್ಲವಿಯೊಂದಿಗೆ ತನ್ನ ಕಿವಿಯಲ್ಲಿ ತೂರಿ ಬರುತ್ತಿತ್ತು. ಆದರೂ ಆ ಹಾಡನ್ನು ಹಾಡಿಕೊಳ್ಳದೆಯೂ ಇರಲಾರಳು. ಆ ವ್ಯಥೆಯನ್ನು ಮರೆಯಲೂ ಆರಳು.

ಆ ಪದ್ಯಗಳಲ್ಲಿ, ಹಾಡುಗಳಲ್ಲಿ ಇಷ್ಟು ಶಕ್ತಿ ಎಲ್ಲಿಯದೋ ತಿಳಿಯುತ್ತಿರ

ಲಿಲ್ಲ. ಎಂದೋ ಕೇಳಿದ ಒಂದು ಹಾಡು ಮನುಷ್ಯನ ಮೆದುಳಿಗೆ ಕೀಕೊಟ್ಟು, ಗತಕಾಲಕ್ಕೆ ಎಳೆದುಕೊಂಡು ಹೋಗುತ್ತದೆ. ಆ ಪರಿಸರಗಳನ್ನೂ ಆ ಸಂಘಟನೆ ಗಳನ್ನೂ ಕಣ್ಣಮುಂದೆ ಚಲಿಸುವ ಚಿತ್ರಗಳಂತೆ ತೋರಿಸುತ್ತವೆ. ವ್ರಲಿ ಸಂತೋಷ ವನ್ನುಂಟು ಮಾಡುವಂತಹುದಾದರೂ, ಕಣ್ಣೀರು ಹರಿಸುವಂತಹುದಾದರೂ ಅನುಭವ ಮಾತ್ರ ಒಂದೇ.

ಧನುರ್ಮಾಸ ಬಂದು ಹತ್ತು ದಿನವಾಗಿತ್ತು. ಹಳ್ಳಿಗಳಲ್ಲಾದರೆ ಎದುರು ಬದುರು ಮನೆಗಳ ಹಸೆಗಳು ಒಂದರಲ್ಲೊಂದು ಬೆರೆತು ಹೋಗುತ್ತಿದ್ದುವು. ಪಟ್ಟಣಗಳಲ್ಲಿ ಹಾಗಲ್ಲ. ಕೆಲವರು ಕೆಲಸದವಳ ಕೈಲಿ ಸಾರಣೆ ಮಾಡಿಸಿದರೂ ತಾವೇ ರಂಗೋಲಿ ಹಾಕುತ್ತಿದ್ದರು. ಕೆಲವರು ಅವಳ ಕೈಲೇ ಒಂದೆರಡು ಎಳೆ ರಂಗೋಲಿ ಹಾಕಿಸುತ್ತಿದ್ದರು. ಇನ್ನೂ ಆಧುನಿಕರೆನಿಸಿಕೊಂಡವರಿಗೆ ಮನೆಯ ಮುಂದೆ ರಂಗೋಲಿಯ ಆವಶ್ಯಕತೆಯೇ ತೋಚುತ್ತಿರಲಿಲ್ಲ.

ಹೋದವರ್ಷ ಎದುರು ಮನೆಯ ಸುಶೀಲಾ, ತಾನೂ ಪಂದ್ಯ ಹಾಕಿ ಕೊಂಡವರಂತೆ ಹಸೆ ಬಿಡಿಸುತ್ತಿದ್ದರು. ಈಗ ಆ ಹುಡುಗಿಗೆ ಮದುವೆಯಾಗಿ ಅತ್ತೆಯ ಮನೆಗೆ ಹೊರಟುಹೋಗಿದ್ದಳು. ಆ ಹುಡುಗಿಯ ತಾಯಿಗೆ ಅಷ್ಟು ಆಸಕ್ತಿಯಿರಲಿಲ್ಲ. ಮನೆಮುಂದೆ ಸಾರಿಸಿ ಎರಡುಗೆರೆ ರಂಗೋಲಿ ಎಳೆದು ಸುಮ್ಮ ನಾಗುತ್ತಿದ್ದರು. ಆದರೆ ತಾನು ಮಾತ್ರ ಬಿಡದೆ ರಂಗೋಲಿ ಹಾಕುತ್ತಲೇ ಇದ್ದಳು. ಆದರೆ ಅದರಲ್ಲಿ ಮೊದಲಿನ ಸಂತೋಷ ಇರಲಿಲ್ಲ. ಎಂತಹುದೋ ವ್ಯಥೆ ಗೂಡುಕಟ್ಟಿಕೊಂಡಿತ್ತು.

ತಾನು ಸೂರ್ಯರಥದ ಹಸೆ ಬಿಡಿಸುತ್ತಿದ್ದರೆ ಓದುತ್ತಿದ್ದ ಪುಸ್ತಕ ಮುಚ್ಚಿ ತನೇಕದೃಷ್ಟಿಯಿಂದ ನೋಡುತ್ತಿದ್ದ ಸಾಂಬು. ಹಬ್ಬಕ್ಕೆ ಮುಂಚೆ ಸಾಂಬು ಪರೀಕ್ಷೆಗೆ ಓದಿಕೊಳ್ಳಲು ಬೇಗ ಏಳುತ್ತಿದ್ದ. ರಂಗೋಲಿಯಿಡಲು ತಾನೂ ಏಳುತ್ತಿದ್ದಳು.

"ಹಸೆ ಪೂರ್ತಿಯಾದಮೇಲೆ ನನ್ನನ್ನೊಂದು ಸಲ ಕರೆಯಿರಿ, ಅತ್ತಿಗೇ" ಎನ್ನುತ್ತಿದ್ದ.

ಆ ಹಸೆ ಅವನಿಗೆ ತುಂಬಾ ಇಷ್ಟ. "ಎಷ್ಟು ಚೆನ್ನಾಗಿದೆ ಅತ್ತಿಗೇ. ಸದಾ ಇದನ್ನೇ ಏಕೆ ಇಡೋಲ್ಲ ನೀವು?" ಎನ್ನುತ್ತಿದ್ದ.

"ಅದಕ್ಕೂ ಒಂದು ರೀತಿ ರಿವಾಜು ಇರುತ್ತದೆ ಸಾಂಬೂ. ಆಯಾ ಸಮಯಗಳಲ್ಲೇ ಅದನ್ನು ಇಡಬೇಕು" ಎನ್ನುತ್ತಿದ್ದಳು ತಾನು.

"ಬರೀ ಬೆರಳ ಕೊನೆಯಿಂದ ರಂಗೋಲಿಯಲ್ಲೇ ಇಷ್ಟು ಚೆನ್ನಾಗಿ ಇಡು ತ್ತೀರಲ್ಲಾ ನಿಮಗೆ ಬಣ್ಣ, ಬ್ರಷ್ಷು, ಕ್ಯಾನ್ವಾಸ್ ಕೊಟ್ಟಿದ್ದರೆ ಎಷ್ಟು ಚೆನ್ನಾಗಿ

ಚಿತ್ರ ಬಿಡಿಸುತ್ತಿದ್ದಿರೋ" ಎನ್ನುತ್ತಿದ್ದ.

"ಹಳ್ಳಿಯಲ್ಲಿ ಹುಟ್ಟಿ ಬೆಳೆದ ಹುಡುಗಿಯರೆಲ್ಲಾ ಹೀಗೆ ಹಸೆ ಬಿಡಿಸ ಬಲ್ಲರು ಕಣೋ. ಇದೇನು ಮಹಾ" ಎನ್ನುತ್ತಿದ್ದಳು ಕನಕ.

"ಛಿ! ಆ ಸಗಣಿ ಮುದ್ದೆಗೆ ಯಾರು ಪೂಜೆ ಮಾಡ್ತಾರೆ. ಅದು ಮುಟ್ಟೋಕೆ ಅಸಹ್ಯ ನನಗೆ" ಎನ್ನುತ್ತಿದ್ದಳು ಶಾಂತ.

ಶಾಂತ ಗಂಡನಿಗಾಗಿ ಗೊಬ್ಬೆಮ್ಮನನ್ನು ಪ್ರಾರ್ಥಿಸದೆ ತನ್ನಷ್ಟಕ್ಕೆ ತಾನೇ ಸಂಪಾದಿಸಿಕೊಂಡಿದ್ದಳು. ಆ ಹುಡುಗ ಯಾರೋ, ಇಷ್ಟು ಹೊತ್ತಿಗೆ ಶಾಂತ ನನ್ನು ಮದುವೆ ಮಾಡಿಕೊಂಡಿರುತ್ತಾನೆ. ಜಾತಿ-ಕುಲ ಅಂತ ದೊಡ್ಡವರು ಅಡ್ಡಿ ಪಡಿಸುತ್ತಾರೆ ಅಂತ ಮೊದಲು ಹೇಳಿರೋಲ್ಲ. ಇನ್ನು ಈಗಲೋ, ಆಗಲೋ ಹೊಸ ಉಡುಪಿನಲ್ಲಿ ಬಂದಿಳಿದು, "ಅಣ್ಣಾ, ಅಮ್ಮಾ ನಮ್ಮನ್ನು ಆಶೀರ್ವದಿಸಿ" ಅನ್ನುತ್ತಾರೆ.

ಪ್ರಕಾಶ ಹೇಳಿದ ಪ್ರಕಾರ ಆ ಹುಡುಗ ರೂಪವಂತ, ಹಣವಂತ, ಅನ್ನಿ ಸುತ್ತೆ. ಅವನು ಮಾತ್ರ ಮದುವೆ ಮಾಡಿಕೊಳ್ಳದೆ ಹುಡುಗಿಯನ್ನು ಹಿಂದಿಟ್ಟು ಕೊಂಡು ತಿರುಗುತ್ತಾನೇನು? ಎಲ್ಲಾ ಒಳ್ಳೇದಕ್ಕೇ. ತಾವು ಮಾತ್ರ ಶಾಂತನಿಗೆ ಅದಕ್ಕಿಂತ ಒಳ್ಳೆಯ ಸಂಬಂಧ ತರಲಾಗುತ್ತಿತ್ತೇ?....

ಅಷ್ಟು ಹೊತ್ತಿಗೆ ಅವಳ ರಂಗೋಲಿ ಹಾಕಿದ್ದು ಪೂರ್ತಿಯಾಗಿತ್ತು. ಚುಕ್ಕಿಯ ಹುಲಿಯುಗುರು ದೂರದಿಂದ ನೋಡುತ್ತಿದ್ದರೆ ಸೂರ್ಯರಥದಂತೆಯೇ ಕಾಣಿಸಿತು ಅಭ್ಯಾಸಬಲದಿಂದ ಎಂಬಂತೆ ಸಾಂಬುಗೋಸ್ಕರ ಜಗುಲಿಯ ಕಡೆ ನೋಡಿದಳು. ಅಲ್ಲಿ ಸಾಂಬು ಇರಲಿಲ್ಲ. ಅವನ ಮಾತು ಮಾತ್ರ ಅವಳಿಗೆ ಕೇಳಿ ಸುತ್ತಿತ್ತು: 'ಎಷ್ಟು ಚೆನ್ನಾಗಿ ಇಟ್ಟಿದೀರಿ ಅತ್ತಿಗೇ. ಸದಾ ಇದನ್ನೇ ಏಕಿಡೊಲ್ಲ.'

ಕನಕಳ ಕಣ್ಣಲ್ಲಿ ನೀರೂರಿತು. ಕಣ್ಣು ಮಂಜಾಯಿತು. ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತಾ ಜಗುಲಿಯ ಕಡೆ ನೋಡಿದಳು. ಜಗುಲಿಯ ತುದಿಯಲ್ಲಿ ಮುದುಡಿಕೊಂಡು ತಲೆಯ ಮೇಲಿಂದ ಸೆರಗು ಹೊದ್ದುಕೊಂಡು ಯಾರೋ ಕುಳಿತಿದ್ದಂತೆ ಕಾಣಿಸಿತು. ಯಾರು? ಯಾರದು? ಹಿಂದಿನ ರಾತ್ರಿ ಪ್ರಕಾಶ ಮನೆಗೆ ಬಂದಿರಲಿಲ್ಲ. "ಅಪ್ಪಣ್ಣನಿಗೆ ಜ್ವರ ಬಂದಿದೆ. ಮಾಣಿಕ್ಯ ಬರೋವರೆಗೂ ನಾನಲ್ಲಿರಬೇಕು" ಅಂದಿದ್ದ.

ಮತ್ತೆ ಹಾಗೆ ಮುದುಡಿ ಕುಳಿತಿರೋದು ಯಾರು? ಭಯದಿಂದ ಅವಳ ಕಾಲು ಥರಥರನೆ ನಡುಗಿತು. ಆ ಭಯ ಯಾವ ಕಾರಣಕ್ಕಾಗಿ ಎಂಬುದು ಅವಳಿಗೇ ಅರ್ಥವಾಗಲಿಲ್ಲ. ಬಾಗಿಲನ್ನು ತಳ್ಳಿಕೊಂಡು ಒಳಕ್ಕೆ ನುಗ್ಗಿದಳು.

ಅತ್ತಿಗೆ ಇನ್ನೂ ಏನು ಮಾಡುತ್ತಿದಾಳೆಂದು ನೋಡಲು ಬರುತ್ತಿದ್ದ

ಜಾನಕಿಯ ಮುಂದೆ ಬಾಗಿಲು ತೆರೆದುಕೊಂಡಿತ್ತು. ಕೈಯಲ್ಲಿದ್ದ ರಂಗೋಲಿ ಡಬ್ಬ ಕೆಳಗೆ ಹಾಕಿ ಜಾನಕಿಯನ್ನು ತಬ್ಬಿಕೊಂಡಳು. ಕನಕ.

"ಏನತ್ತಿಗೇ? ಏನಾಯಿತು?"

"ಜಗುಲಿಯ ಮೇಲೆ ಮೂಲೇಲಿ ಯಾರೋ ಕೂತಿದಾರೆ!"

"ಅದಕಿಷ್ಟು ಗಾಬರಿಯಾಕೆ? ಯಾರೋ ದಾರಿಹೋಕರಿರಬೇಕು. ಚಳಿಗೆ ಸ್ವಲ್ಪ ಬೆಚ್ಚಗಿರುತ್ತೇಂತ ಕುಳಿತಿರುತಾರೆ" ಎನ್ನುತ್ತಾ ಜಾನಕಿ ಹೊರಗೆ ಬಂದಳು. ಪೂರ್ತಿ ಬೆಳಕು ಹರಿಯದಿದ್ದರೂ ಸಾಕಷ್ಟು ಬೆಳಕಿತ್ತು.

"ಯಾರದು?" ಜಾನಕಿ ಕೇಳಿದಳು.

ಉತ್ತರ ಬರಲಿಲ್ಲ.

"ಯಾರದು?" ಜೋರಾಗಿ ಕೂಗಿದಳು ಜಾನಕಿ.

ಈ ಸಲವೂ ಉತ್ತರ ಬರಲಿಲ್ಲ. ಅದಕ್ಕೆ ಬದಲಾಗಿ ಬಿಕ್ಕಿಬಿಕ್ಕಿ ಅಳುವ ಶಬ್ದ ಕೇಳಿಸಿತು. ಸಂದೇಹದಿಂದ ಜಾನಕಿ ಒಂದು ಹೆಜ್ಜೆ ಮುಂದಿಟ್ಟಳು. ಆ ವ್ಯಕ್ತಿ ಸ್ತ್ರೀ....ತಲೆಯ ಮೇಲಿಂದ ಸೆರಗು ಹೊದ್ದುಕೊಂಡಿದ್ದಳು. ಆ ಸೀರೆ.... ಕನಕಳಿಗೆ ಸೀರೆ ತಂದ ದಿನ ತನಗೂ ಬೇಕೆಂದು ಪ್ರಕಾಶನಿಂದ ತೆಗೆಸಿಕೊಂಡಿದ್ದ ಗುಲಾಬಿ ಬಣ್ಣದ ನೂಲಿನ ಸೀರೆ.

"ಶಾಂತಾ...." ತಲೆಯ ಮೇಲಿನ ಮುಸುಕು ತೆಗೆಯುತ್ತಾ ಕೂಗಿದಳು ಜಾನಕಿ.

"ಅಕ್ಕಾ....ಅಕ್ಕಾ...." ಜಾನಕಿಯ ಎರಡುಕಾಲುಗಳನ್ನೂ ಬಿಗಿಯಾಗಿ ಹಿಡಿದುಕೊಂಡಳು ಶಾಂತ.

ಇವರ ಮಾತು ಕೇಳಿ ಹೊರಗೆ ಬಂದ ಕನಕ "ಯಾರು? ಯಾರದು? ನಮ್ಮ ಶಾಂತಾನೇ....ನಮ್ಮ ಶಾಂತಾನೇ" ಎಂದಳು ಸಂತೋಷದಿಂದ.

ಸುಂದರಮ್ಮ, ಶ್ರೀಹರಿ ಹೊದಿಕೆಯನ್ನು ಕಿತ್ತೆಸೆದು ಓಡಿ ಬಂದರು. ಶಾಂತ ಜಾನಕಿಯ ಕಾಲನ್ನು ಬಿಡದೆ ಅಳುತ್ತಿದ್ದಳು. ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಹಾಗೆ ಅಳುತ್ತಿದ್ದ ಶಾಂತಳನ್ನು ಶಿಕ್ಷಿಸಬೇಕೋ ಸಮಾಧಾನಪಡಿಸಬೇಕೋ ಅರ್ಥವಾಗಲಿಲ್ಲ ಜಾನಕಿಗೆ. ಮೆಲ್ಲನೆ ಕೈಹಿಡಿದೆತ್ತಿ, "ಒಳಕ್ಕೆ ಬಾ ಶಾಂತಾ" ಎಂದಳು.

ನೆರೆಹೊರೆಯವರೆಲ್ಲಾ ಕೆಲಸ ಕಾರ್ಯಗಳಿಗೋಸ್ಕರ ಏಳುವ ಸಮಯ. ನಡುಬೀದಿಯಲ್ಲಿ ರಗಳೆ ಚೆನ್ನಾಗಿರೊಲ್ಲ. ಎನ್ನಿಸಿತು ಜಾನಕಿಗೆ. ಅಕ್ಕನ ಆಸರೆಯಿಂದ ಶಾಂತ ಎದ್ದು ಒಂದು ಹೆಜ್ಜೆ ಮುಂದಿಟ್ಟಳು. ಅಷ್ಟರಲ್ಲಿಯೇ ಮುಳ್ಳು ತುಳಿದವಳಂತೆ ಕಾಲನ್ನು ಹಿಂತೆಗೆದುಕೊಂಡಳು. ಜಾನಕಿ ತಲೆಯೆತ್ತಿ ನೋಡಿ

ದಳು. ಎದುರಾಗಿ ಬಾಗಿಲಲ್ಲಿ ನಿಂತಿದ್ದ ಅಣ್ಣ, ಶಾಂತನ ಕಾಲನ್ನು ಹಿಂದಕ್ಕೆ ತಳ್ಳಿತ್ತು ಅವನ ನೋಟ.

"ನಡೆ ಶಾಂತಾ...." ತಂಗಿಯನ್ನು ಮುಂದಕ್ಕೆ ತಳ್ಳಿದಳು ಜಾನಕಿ.

"ಅವಳೆಲ್ಲಿಗೆ?" ಶ್ರೀಹರಿ ಬಾಗಿಲಿಗೆ ಅಡ್ಡವಾಗಿ ನಿಂತ.

"ಶಾಂತನ್ನ ಒಳಕ್ಕೆ ಬರಗೊಡು ಅಣ್ಣಾ. ನಡೆದದ್ದೇನೆಂದು ಸಾವಕಾಶ ವಾಗಿ ವಿಚಾರಿಸೋಣ. ಅನಂತರ ನಿನಗೆ ತೋಚಿದಂತೆ ಮಾಡು. ಈ ಮನೆ ಯಲ್ಲಿ ಹುಟ್ಟಿ ಬೆಳೆದ ಹೆಣ್ಣುಮಗಳನ್ನು ಬೀದಿಯಲ್ಲಿ ನಿಲ್ಲಿಸಿ ವಿಚಾರಣೆ ಮಾಡು ವುದು ನ್ಯಾಯವಲ್ಲ" ಎಂದಳು ಜಾನಕಿ, ಅಣ್ಣನನ್ನು ಬೇಡಿಕೊಳ್ಳುತ್ತಾ.

"ಅವಳು ನನ್ನ ಮಾನ ಮರ್ಯಾದೆ ಹಾಳುಮಾಡಿ ಯಾವ ದಿನ ಹೊಸಿಲು ದಾಟಿದಳೋ...."

"ಅವಳು ಆ ಕೆಲಸ ಮಾಡಿದಳೋ ಇಲ್ಲವೋ ನೀನು ಮಾತ್ರ ನಿನ್ನ ಕೂಗಿನಿಂದ ಈಗ ಮಾನಮರ್ಯಾದೆಯನ್ನ ಬೀದಿಯ ಪಾಲು ಮಾಡುತ್ತಿದ್ದೀ. ನೆರೆಹೊರೆಯವರು ಎದ್ದು ಬರುವ ಮುಂಚೆಯೇ ಶಾಂತನ್ನ ಒಳಗೆ ಬರಗೊಡು. ಅವಳು ಹೇಳಬೇಕು ಅಂದುಕೊಂಡದ್ದನ್ನು ಹೇಳಲಿ. ಅಮೇಲೆ ಏನು ಮಾಡ ಬೇಕೆಂಬುದನ್ನು ಎಲ್ಲರೂ ಸೇರಿ ಆಲೋಚಿಸೋಣ. ಆ ಹುಡುಗನನ್ನು ಕುರಿತು ಒಂದಿಷ್ಟಾದರೂ ತಿಳಿದವನು ಪ್ರಕಾಶ ಒಬ್ಬನೇ. ಅವನೂ ಬರಲಿ. ವಿವೇಕ ದಿಂದಲೂ, ಸಹನೆಯಿಂದಲೂ ಆಲೋಚಿಸಬೇಕಾದ ಸಮಯ ಇದು. ನಾವು ಮಾಡುವ ನಿರ್ಣಯದ ಮೇಲೆ ಒಬ್ಬ ಹುಡುಗಿಯ ಭವಿಷ್ಯ ಆಧಾರಪಟ್ಟಿದೆ ಯೆಂದಮೇಲೆ ಆವೇಶದಲ್ಲಿ ಏನಾದರೂ ಅನ್ನುವುದಾಗಲೀ ಮಾಡುವುದಾಗಲೀ ಸರಿಯಲ್ಲ ಅಣ್ಣ" ಎಂದಳು ಜಾನಕಿ ನಿಧಾನವಾಗಿ.

ಅಷ್ಟು ಹೊತ್ತಿಗಾಗಲೇ ಇವರ ಮನೆಯ ಮುಂಭಾಗದಲ್ಲಿ ಇಷ್ಟು ಜನ ಸೇರಿರುವುದನ್ನು ಎದುರು ಮನೆಗಳ ಕಿಟಕಿಗಳಿಂದ ಕೆಲವರು ಇಣಿಕಿ ನೋಡಲು ಆರಂಭಿಸಿದ್ದರು. ತಾನು ಬೀದಿಯ ಬಾಗಿಲಲ್ಲಿ ನಿಂತು ಏನಂದರೂ ನೆರೆಹೊರೆ ಯವರು ಕೇಳಲು ಸಿದ್ಧರಾಗಿದ್ದಾರೆಂದು ಶ್ರೀಹರಿ ಗ್ರಹಿಸಿದ. ನಾಲ್ಕು ಜನರ ಕಣ್ಣಿಗೆ ಶಾಂತ ಬೀಳುವುದು ಸರಿಯಲ್ಲವೆನಿಸಿತು.

"ಸರಿ, ನಡೆಯಿರಿ. ನಡೆಯೋ ರಾಮಾಯಣ ಮನೆಯಲ್ಲೇ ನಡೆಯಲಿ" ಎಂದ.

* * *

ಸುಂದರಮ್ಮ ಮಗಳನ್ನು ನೋಡಿ ಸಂಕಟ ತಡೆಯಲಾರದೆ ಬಾಯಿಗೆ ಬಂದಂತೆ ಬೈದರು, ಅತ್ತರು, ನೀನು ಹುಟ್ಟದಿದ್ದರೂ ಚೆನ್ನಾಗಿತ್ತು ಎಂದರು.

"ನಿನ್ನ ತಂದೆಯೊಡನೆ ನಾನೂ ಸತ್ತಿದ್ದರೆ ಎಷ್ಟು ಚೆನ್ನಾಗಿತ್ತು. ಹಾಳು ಬಾಳು ನನ್ನದು. ಎಂಥಾ ಮಕ್ಕಳನ್ನು ಹೆತ್ತೆನಪ್ಪಾ ದೇವರೇ...." ಎಂದು ತಮ್ಮನ್ನು ತಾವು ನಿಂದಿಸಿಕೊಂಡರು. ಶಾಂತ ಯಾವುದಕ್ಕೂ ಜವಾಬು ಕೊಡಲಿಲ್ಲ. ಮನೆಯಲ್ಲಿ ಕಾಲಿಟ್ಟು ಕುಳಿತ ಕಡೆಯೇ ಕದಲದೆ ಕುಳಿತು ಬಿಟ್ಟಿದ್ದಳು.

ಕ್ಷಣ, ನಿಮಿಷ, ಗಂಟೆಗಳನ್ನು ತಪ್ಪಿಸಿಕೊಂಡು ಕಾಲ ಮುಂದಕ್ಕೆ ಹೋಗಿತ್ತು. ಇವರ ಮನೆಯಲ್ಲಿ ಏನೋ ತಮಾಷೆ ನಡೆಯುತ್ತಿದೆ ನೋಡೋಣ ಎಂದು ಬಿಸಿಲು ಕಿಟಕಿಯೊಳಗಿನಿಂದ ತೂರಿ ಬಂದಿತು. ಒಂದು ಗಂಟೆಯಾದರೂ ಯಾವ ವಿಧವಾದ ಗಲಾಟೆಯೂ ಕೇಳಿಬರದ್ದನ್ನು ಕಂಡು ನೆರೆಹೊರೆಯವರು ತಮ್ಮ ಕಾಲಕೃತ್ಯಗಳಲ್ಲಿ ನಿಮಗ್ನರಾದರು.

ಮುಖದಮೇಲೆ ಬಿಸಿಲು ಬಿದ್ದದ್ದರಿಂದ ಶಾಂತ ತಲೆಯೆತ್ತಿ ನೋಡಿದಳು. ಪ್ರಕಾಶ ಬಾಗಿಲನ್ನು ತೆಗೆದುಕೊಂಡು ಒಳಕ್ಕೆ ಬರುತ್ತಿದ್ದ.

"ಓಹೋ, ವಾಪಸ್ ಬಂದುಬಿಟ್ಟೆಯಾ? ನಿನ್ನ ಸ್ನೇಹಿತ ಏನಾದ? ಟಿಕೆಟ್ ತೆಗೆದುಕೊಟ್ಟು ಮನೆಗೆ ದಾರಿ ತೋರಿಸಿದನೇನು" ಎಂದ ಶಾಂತನನ್ನು ನೋಡಿ ಪ್ರಕಾಶ.

"ಏನೋ ಪ್ರಕಾಶ ಹಾಗೆ ಮಾತಾನಾಡುತ್ತಿ. ಮೊದಲೇ ಹುಡುಗಿ ಕೊರಗ್ತಿದಾಳೆ" ಎಂದು ಕನಕ ಮೈದುನನನ್ನು ಗದರಿಸಿದಳು.

ಜಾನಕಿ ಅದುವರೆವಿಗೂ ಪ್ರಕಾಶನಿಗೋಸ್ಕರ ಎದುರುನೋಡುತ್ತಿದ್ದಳು. ಯಾವುದಾದರೂ ಆಲೋಚನೆಗಾಗಲೀ, ಅಣ್ಣನನ್ನು ಎದುರಿಸಬೇಕಾದರಾಗಲೀ ತನಗೆ ಪ್ರಕಾಶನ ಒತ್ತಾಸೆ ಬೇಕೆಂದುಕೊಂಡಿದ್ದಳು. ಆದ್ದರಿಂದಲೇ ಶಾಂತನನ್ನು ಮಾತಾಡಿಸದೆ ಅದುವರೆವಿಗೂ ಸುಮ್ಮನಿದ್ದಳು.

"ಶಾಂತ ನಡೆದದ್ದೇನೂಂತ ಈಗ ಹೇಳು" ಎಂದಳು.

ಶಾಂತ ಧೈರ್ಯ ತಂದುಕೊಂಡು ಕಣ್ಣೊರೆಸಿಕೊಂಡು ಅಕ್ಕನ ಕಡೆ ನೋಡಿದಳು. ಅವಳು ಆಶಿಸಿದಂತಹ ಸಹಾನುಭೂತಿ ಅಕ್ಕನ ಮುಖದಲ್ಲಿರಲಿಲ್ಲ. ಆದರೆ ಕೋಪ, ಹೇಳನೆಯೂ ಕಾಣಿಸಲಿಲ್ಲ. ಅವಳಿಗೆ ಅರ್ಥವಾಗದಂತಹ ಭಾವನೆಯೊಂದು ಜಾನಕಿಯ ಮುಖದಲ್ಲಿ ಮನೆಮಾಡಿಕೊಂಡಿತ್ತು.

ಶಾಂತ ಕಂಠ ಸರಿಪಡಿಸಿಕೊಂಡು, "ನಾನು ಮೋಸಹೋದೆ, ಅಕ್ಕಾ."

"ಅದು ಕಾಣುತ್ತಲೇ ಇದೆಯಲ್ಲಾ ವಿವರವಾಗಿ ಹೇಳು" ಎಂದ ಪ್ರಕಾಶ. ಶಾಂತ ಪ್ರಕಾಶನ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಅವನ ಕಡೆಯೂ ನೋಡಲಿಲ್ಲ. ಮತ್ತೆ ಹೇಳಲಾರಂಭಿಸಿದಳು:

"ತಂದೆ-ತಾಯಿಗೆ ಒಬ್ಬನೇ ಮಗ ಬೇಕಾದಷ್ಟು ಆಸ್ತಿಯಿದೆ ಎಂದ.

ಅಮ್ಮ ಪೂರ್ವಕಾಲದವರು ಹೇಳಿದರೆ ಒಪ್ಪಿಕೊಳ್ಳೊಲ್ಲ. ತಿರುಪತಿಯಲ್ಲಿ ಮದುವೆ ಮಾಡಿಕೊಂಡು ಮನೆಗೆ ಹೋಗೋಣ ಎಂದ. ಮದುವೆಯಾಗಿದೆ ಎಂದರೆ ಅಮ್ಮ ಏನೂ ಅನ್ನೊಲ್ಲ ಆಶೀರ್ವದಿಸುತ್ತಾಳೆ ಎಂದ....

"ಅವನು ಹೇಳಿದ್ದನ್ನೆಲ್ಲಾ ನಂಬಿದೆ. ಏಕೆ ನಂಬಿದೆನೋ, ಹೇಗೆ ನಂಬಿದೆನೋ ನನಗೀಗ ಅರ್ಥವಾಗುತ್ತಿಲ್ಲ. ಅವನು ನನ್ನ ಮುಂದೆ ಚಿತ್ರಿಸಿದ ಮಧುರ ಜೀವನವನ್ನು ಊಹಿಸಿಕೊಳ್ಳುತ್ತಾ ಅವನನ್ನು ಹಿಂಬಾಲಿಸಿದೆ. ಕಣ್ಣು ತೆರೆದು ನೋಡುವ ವೇಳೆಗೆ ನಾನು ಮೋಸಹೋದ ವಿಷಯ ತಿಳಿದು ಬಂತು.

ವಿಶಾಲವಾದ ಸಮುದ್ರ, ಓಡುತ್ತಿರುವ ರೈಲು, ವೆಂಟಿಲೇಟರ್‌ನಿಂದ ಇಳಿಬಿದ್ದ ಹಗ್ಗ, ಇವೆಲ್ಲಾ ನನ್ನ ಸಮಸ್ಯೆಯನ್ನು ಪರಿಹರಿಸುವಂತಹುದಾಗಿ ಕಾಣಿಸಿದುವು. ಆದರೆ ಆಗಲೇ ತಿಳಿಯಿತು, ನನಗೆ ಬದುಕಿನ ಮೇಲೆ ಎಷ್ಟು ಮೋಹವಿದೆ—ಎಂದು. ಕೈಯಾರೆ ಪ್ರಾಣ ಕಳೆದುಕೊಳ್ಳುವುದು ನನ್ನಿಂದಾಗ ಲಿಲ್ಲ. ನೀವೆಲ್ಲಾ ಇದೀರೆಂದು....ನನ್ನ ಹಿತೈಷಿಗಳಾದ ನೀವೆಲ್ಲಾ ಇದೀರೆಂದು ....ಹಿಂತಿರುಗಿ ಬಂದೆ."—ಮಾತನ್ನು ಪೂರ್ತಿಮಾಡುತ್ತಾ ಶ್ರೀಹರಿಯ ಕಡೆ ನೋಡಿದಳು ಶಾಂತ. ಎಂದೂ ಇಲ್ಲದಷ್ಟು ಸಹನೆಯಿಂದ ಅವಳು ಹೇಳಿದ್ದನ್ನು ಕೇಳಿದ್ದ ಶ್ರೀಹರಿ. ಎಷ್ಟೋ ವಿಧವಾದ ಆಲೋಚನೆಗಳು ಅವನ ಮನಸಿನಲ್ಲಿ ಬಂದು ಹೋಗುತ್ತಿದ್ದುವು. ಅವನ ಕೈ ತೆಳ್ಳಗಾಗಿದ್ದ ಅವನ ಕೂದಲಿನಲ್ಲಿ ಆಡುತ್ತಿತ್ತು.

ಬೆಳಿಗ್ಗೆ ತಾನು ನೋಡಿದ ಅಣ್ಣ, ತನ್ನನ್ನು ಕಂಡು ಉರಿದು ಬೀಳುತ್ತಾ ನೆಂದುಕೊಂಡಿದ್ದ ಅಣ್ಣ, ಎಷ್ಟೋ ಕರುಣೆಯಿಂದ ತಾನು ಹೇಳಿದ್ದನ್ನೆಲ್ಲಾ ಕೇಳಿದ್ದನ್ನು ನೋಡಿ ಶಾಂತ ಧೈರ್ಯತಂದುಕೊಂಡು ಅಣ್ಣನ ಕಡೆ ನೋಡಿದಳು.

"ಅಣ್ಣಾ, ಅಣ್ಣಾ, ನನ್ನನ್ನು ಕ್ಷಮಿಸಣ್ಣಾ. ಇನ್ನೆಂದೂ ಇಂತಹ ಕೆಲಸ ಮಾಡೊಲ್ಲಣ್ಣಾ" ಎಂದು ಅಣ್ಣನ ಕಾಲನ್ನು ಹಿಡಿದುಕೊಂಡು ಗಟ್ಟಿಯಾಗಿ ಅಳಲಾರಂಭಿಸಿದಳು.

ಅವಳ ಅಳುವಿನಿಂದಾಗಲೀ, ಮಾತಿನಿಂದಾಗಲೀ ಶ್ರೀಹರಿ ಚಲಿಸಲಿಲ್ಲ. ಮೆಲ್ಲನೆ ಶಾಂತನ ಕೈಹಿಡಿದೆಬ್ಬಿಸಿ "ಏಳು ಶಾಂತಾ, ಅಳಬೇಡ. ನಡೆದದ್ದಕ್ಕೆಲ್ಲ ಅಳುತ್ತಾ ಕುಳಿತರೇನೂ ಪ್ರಯೋಜನವಿಲ್ಲ. ಮುಂದೆ ನಡೆಯಬೇಕಾದ್ದೇನು ಎಂಬ ವಿಷಯವನ್ನು ಆಲೋಚಿಸಬೇಕು" ಎಂದ ಅನುನಯದಿಂದ.

ಅವನು ಮಾತನಾಡಿದ ರೀತಿಗೆ ಅವನಲ್ಲುಂಟಾದ ಬದಲಾವಣೆಗೆ ಮನೆ ಯಲ್ಲೆಲ್ಲರಿಗೂ ಆಶ್ಚರ್ಯವಾಯಿತು.

ಶಾಂತ ಕಣ್ಣೊರೆಸಿಕೊಂಡಳು.

"ಶಾಂತಾ, ನನಗೆ ಬೇಕಾದ್ದು ನಿಮ್ಮೆಲ್ಲರ ಸುಖ-ಸಂತೋಷಗಳೇ. ನೀವೆಲ್ಲಾ ಚೆನ್ನಾಗಿ ಬದುಕಿ, ಬಾಳಿ, ಮನೆಯ ಹೆಸರನ್ನೂ ಗೌರವ ಮರ್ಯಾದೆಗಳನ್ನೂ ಕಾಪಾಡಬೇಕೆಂಬುದೇ ನನ್ನ ಕೋರಿಕೆ. ನನ್ನನ್ನು ನೀವು ಯಾರೂ ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ನಾವು ಮುಂದಕ್ಕೆ ಬರುವುದು ಅಣ್ಣನಿಗಿಷ್ಟವಿಲ್ಲ ಅಂದುಕೊಳ್ಳುತ್ತೀರಿ. ಒಂದು ದೇಶವಾಗಲಿ, ಸಮಾಜವಾಗಲಿ ಮನೆಯಾಗಲಿ ಚೆನ್ನಾಗಿರಬೇಕಾದರೆ ಅದಕ್ಕೆ ಸಂಬಂಧಿಸಿದವರು ಎಲ್ಲರ ಶ್ರೇಯಸ್ಸಿಗೋಸ್ಕರ ವ್ಯಕ್ತಿಗತವಾದ ಸೌಖ್ಯ-ಕೋರಿಕೆಗಳನ್ನು ಸ್ವಲ್ಪಕ್ಕೆ ಸ್ವಲ್ಪ ತ್ಯಾಗಮಾಡಲೇಬೇಕಾಗುತ್ತದೆ. ಒಬ್ಬ ಮನುಷ್ಯ ಮಾಡಿದ ಒಳಿತು ಕೆಡಕುಗಳ ಫಲಿತವನ್ನು ನ್ಯಾಯವಾಗಿ ಅವನೇ ಅನುಭವಿಸಬೇಕಾಗಿದ್ದರೂ, ಅದರ ನೆರಳು ಅವನ ಸಮೀಪದವರ ಬದುಕಿನ ಮೇಲೆ ಬಿದ್ದೇ ಬೀಳುತ್ತದೆ. ಈಗ ನೀನು, ಪ್ರಕಾಶ, ಜಾನಕಿ—ನಿಮಗೆ ಒಳ್ಳೆಯದೆನ್ನಿಸಿದ ಕೆಲಸಗಳನ್ನು ಮಾಡಿದಿರಿ. ಅವು ನಿಮ್ಮ ವ್ಯಕ್ತಿಗತ ಸಮಸ್ಯೆಗಳು. ನಿಮ್ಮ ಜೀವನಕ್ಕೆ ಸಂಬಂಧ ಪಟ್ಟವು. ಅವುಗಳೊಂದಿಗೆ ನನಗೇನೂ ಸಂಬಂಧವಿರಬೇಕಾಗಿಲ್ಲ. ಆದರೆ ನಾವೆಲ್ಲರೂ ಒಂದು ಕುಟುಂಬಕ್ಕೆ ಸೇರಿದವರು. ಏನು ನಡೆದರೂ ಅದನ್ನು ನಮ್ಮ ಕುಟುಂಬಕ್ಕೆ ಅನ್ವಯಿಸಿಯೇ ಮಾತನಾಡುತ್ತಾರೆ ಜನ. ಶ್ರೀಹರಿಯ ತಂಗಿ, ಜಾನಕಿಯ ತಮ್ಮ ಅಂತಾರೆ. ಮುಖ್ಯವಾಗಿ ಅಪಕೀರ್ತಿ ತರುವಂಥಾ ವಿಷಯಗಳನ್ನು ದೊಡ್ಡವರ ಹೆಸರಿನ ಮೇಲೆಯೇ ಹೇಳಿಕೊಳ್ಳುತ್ತಾರೆ—ಹುಡುಗರನ್ನು ಸರಿಯಾಗಿ ಬೆಳೆಸಲಾರದ ದೊಡ್ಡವರ ಅಶಕ್ತತೆಯೇ ಮಕ್ಕಳ ಕೆಟ್ಟ ಪ್ರವರ್ತನೆಗೆ ಕಾರಣ ಎಂಬ ಅಭಿಪ್ರಾಯದಿಂದ"—ಶ್ರೀಹರಿ ಇಷ್ಟು ಹೇಳಿ ಶಾಂತನ ಕಡೆ ನೋಡಿದ.

"ಈಗ ನನ್ನನ್ನೇನು ಮಾಡಂತಿ ಹೇಳಣ್ಣಾ. ನೀನು ಏನು ಮಾಡು ಅಂದರೂ ಮಾಡ್ತೀನಿ" ಎಂದಳು ಶಾಂತ.

"ತಪ್ಪದೆ ಮಾಡ್ತೀಯಾ?"

ಅಂಗೀಕಾರ ಸೂಚಕವಾಗಿ ತಲೆಯಾಡಿಸಿದಳು ಶಾಂತ.

"ವೆಂಕಣ್ಣ ಮಾವನ್ನ ಮದುವೆಯಾಗುತ್ತೀಯಾ?" ಶಾಂತನ ಭುಜದ ಮೇಲೆ ಕೈಹಾಕಿ ಅವಳ ಮುಖವನ್ನೇ ದೃಷ್ಟಿಸಿ ನೋಡುತ್ತಾ ಕೇಳಿದ ಶ್ರೀಹರಿ.

"ವೆಂಕಣ್ಣ ಮಾವನ್ನೇ!!!" ಎಂದರು ಅಲ್ಲಿದ್ದವರೆಲ್ಲಾ ಒಂದೆ ಸಲ.

"ಹೌದು ಅದಕ್ಕಿಂತ ಬೇರೆ ಮಾರ್ಗವಿಲ್ಲ. ನಾವು ಕೊಡುವ ವರ ದಕ್ಷಿಣೆಗೆ, ನಮ್ಮ ಹುಡುಗಿ ತಂದುಕೊಂಡಿರುವ ಕೆಟ್ಟ ಹೆಸರಿಗೆ ಅದಕ್ಕಿಂತ ಒಳ್ಳೆ ಸಂಬಂಧ ಬರೋಲ್ಲ" ಎಂದ ಶ್ರೀಹರಿ ನಿಧಾನವಾಗಿ.

"ಒಳ್ಳೇ ಸಂಬಂಧ ಸಿಗದಿದ್ದರೆ ಓದಿಕೋತಾಳೆ. ಇಲ್ಲ ಕೆಲಸಮಾಡ್ತಾಳೆ ....ಅಷ್ಟೇ. ಹೊರತು...." ಆವೇಶದಿಂದ ಪ್ರಕಾಶನ ಬಾಯಿಂದ ಮುಂದೆ ಮಾತು ಹೊರಡಲಿಲ್ಲ.

ಶ್ರೀಹರಿ ತಮ್ಮನ ಮಾತಿಗೆ ಉತ್ತರ ಹೇಳದೆ ಶಾಂತನನ್ನು ಈ ಮದುವೆಗೆ ಒಪ್ಪಿಸುವ ಪ್ರಯತ್ನದಲ್ಲಿದ್ದ.

"ನೋಡು ಶಾಂತಾ, ಈಗ ನಿನಗೆ ಬಂದ ಕೆಟ್ಟ ಹೆಸರು ಹೋಗ ಬೇಕಾದರೆ ನೀನು ಕೂಡಲೇ ಮದುವೆ ಮಾಡಿಕೊಳ್ಳಬೇಕು. ಗಂಡನೊಂದಿಗೆ ಸಂಸಾರಮಾಡಿಕೊಂಡಿರುವ ಹೆಣ್ಣುಮಗಳನ್ನು ಯಾರೂ ಆಡಿಕೊಳ್ಳಲು ಮುಂದೆ ಬರೊಲ್ಲ. 'ನಮಗೇಕೆ ಬಂತು? ಅವಳ ಸಂಸಾರ ಹಾಳಾದರೆ ಆ ಪಾಪ ನಮಗೇ ಸುತ್ತಿಕೊಳ್ಳುತ್ತೆ.' ಎಂದು ಭಯಪಡುತ್ತಾರೆ. ಈ ನಿಂದೆ ನಿನ್ನ ಒಬ್ಬಳೊಂದಿಗೇ ಹೋಗೋದಲ್ಲ. ನಿನ್ನ ಅಣ್ಣಂದಿರ ಸಂಸಾರವನ್ನೂ ಅಕ್ಕನ ಬದುಕನ್ನು ಮಲಿನಗೊಳಿಸುತ್ತೆ. ನಾಳೆ ನನ್ನ ಮಕ್ಕಳು ಹುಟ್ಟಿ ಬಂದರೆ ಅವ ರಿಗೂ ಈ ಹೆಸರಿನ ಋಣ ತಾಗುತ್ತೆ. ನಮ್ಮ ಮನೆಯ ಮಕ್ಕಳನ್ನು ಮದುವೆ ಯಾಗಲು ಯಾರೂ ಮುಂದೆ ಬರುವುದಿಲ್ಲ. ನಮ್ಮ ಮನೆಗೆ ಯಾರೂ ಹೆಣ್ಣು ಕೊಡುವುದಿಲ್ಲ. ನನ್ನ ಮಾತು ಕೇಳು. ವೆಂಕಣ್ಣಮಾವನಿಗೆ ನೀನು ಅಂದರೆ ತುಂಬಾ ಅಭಿಮಾನ. ನಿನ್ನನ್ನು ತಲೆಯಮೇಲಿಟ್ಟುಕೊಂಡು ಪೂಜಿಸುತ್ತಾನೆ ಬೇಕಾದ ಹಾಗೆ ಇದೆ. ಒಡವೆ, ವಸ್ತ್ರ ಯಾವುದಕ್ಕೂ ಕೊರತೆಯಿಲ್ಲ. ನಿನ್ನ ಕೋರಿಕೆಗಳೆಲ್ಲಾ ನೆರವೇರುತ್ತವೆ. ಚಿಕ್ಕಂದಿನಲ್ಲಿ ನಿನಗೂ ಆತನಮೇಲೆ ತುಂಬಾ ಅಭಿಮಾನವಿತ್ತು. ನಮ್ಮ ಮನೆಗೆ ಬಂದಾಗಲೆಲ್ಲಾ ಆತನ ಮಡಿಲಲ್ಲಿ ಕುಳಿತು 'ಮಾವನ ಮೀಸೇನ ಜಡೆ ಹೆಣೆಯುತ್ತೀನಿ' ಅಂತ ಗಲಾಟೆ ಮಾಡುತ್ತಿದ್ದಿ.

'ಈ ಮಧ್ಯೆ ನಿನ್ನನ್ನೆಲ್ಲೋ ನೋಡಿದನಂತೆ 'ನಮ್ಮ ಮೂರನೆ ಹುಡುಗನ ಓರಗೆಯಲ್ಲವೆ ಶಾಂತ? ಆಗಲೇ ಎಷ್ಟು ದೊಡ್ಡೋಳಾಗಿ ಬಿಟ್ಟಿದಾಳೆ' ಎಂದ. 'ಮತ್ತೆ ಮದುವೆ ಮಾಡಿಕೊಳ್ಳಬೇಕೆಂದು ನನಗಿಲ್ಲದಿದ್ದರೂ ಈ ಮಕ್ಕಳಿಗಾಗಿ ಮಾಡಿಕೊಳ್ಳಬೇಕಾಗಿದೆ ಕಣೋ' ಎಂದ. ಹತ್ತು ದಿನಗಳ ಹಿಂದೆ ಶಾಂತನ್ನ ಕೊಟ್ಟರೆ ಮಾಡಿಕೊಳ್ಳುತ್ತೇನೆಂದು ಹೇಳಿ ಕಳುಹಿಸಿದ. ಈಗ ನಡೆದ ವಿಷಯ ಅವನಿಗೆ ತಿಳಿದರೂ ನಿನ್ನ ಮೇಲಿನ ಅಭಿಮಾನದಿಂದ ಮಾಡಿಕೊಳ್ಳುತ್ತಾನೆ. ಏನಂತೀಯಾ? ಕೇಳಿನೋಡಲೇ?" ಎಂದ ಅವಳ ಮುಖ ಹಿಡಿದೆತ್ತುತ್ತಾ.

ಎರಡೂ ಕೈಗಳಿಂದ ಮುಖಮುಚ್ಚಿಕೊಂಡು ಬೋರೆಂದು ಅಳತೊಡಗಿ ದಳು ಶಾಂತ.

"ಈ ಮದುವೆ ಸಾಧ್ಯವಿಲ್ಲಣ್ಣ" ಎಂದರು ಪ್ರಕಾಶ, ಜಾನಕಿ ಒಮ್ಮೆಲೆ.

"ಇಷ್ಟಕ್ಕಿಂತ ಅವನು ತಾನೇ ಏನು ಮಾಡಬಲ್ಲನೇ? ಎಲ್ಲಾ ಅನುವಾಗಿ ಸವರಿಸಿಕೊಂಡು ಮಾಡುವಂಥಾ ಕೆಲಸ ಮಾಡಿದಾಳೇನು ನಿನ್ನ ತಂಗಿ? ಅವಳ ಕೊರಳಲ್ಲೊಂದು ಕರೀಮಣಿ ಸರ ಬಿದ್ದು, ಅವಳಿಗೆ ಬಂದಿರೋ ಕೆಟ್ಟ ಹೆಸರು ತೊಡೆದು ಹೋದರೆ ಸಾಲದೇ?" ಎಂದರು, ಸುಂದರಮ್ಮ.

ತನ್ನ ಮಗಳನ್ನು ಎರಡನೆಯ ಸಂಬಂಧಕ್ಕೆ ಅದರಲ್ಲೂ ಆರು ಜನ ಮಕ್ಕಳ ತಂದೆಗೆ ಕೊಡಲು ಆ ತಾಯಿಯ ಮನಸ್ಸು ಒಪ್ಪದಿದ್ದರೂ ನಾಲ್ಕು ಜನದಲ್ಲಿ ಮಾನ ಮರ್ಯಾದೆ ನಿಲ್ಲಬೇಕಾದರೆ ಶಾಂತನ ಬಾಳು ಹಸನಾಗ ಬೇಕಾದರೆ ಇದಕ್ಕಿಂತ ಬೇರೆ ಮಾರ್ಗವಿಲ್ಲವೆನಿಸಿತ್ತು.

"ಇದು ಸಾಧ್ಯವಿಲ್ಲಣ್ಣಾ. ಈ ಮದುವೆ ನನಗೆ ಸ್ವಲ್ಪವೂ ಇಷ್ಟವಿಲ್ಲ. ಎಂದೂ ನಮ್ಮನ್ನು ಕಾಪಾಡದ ಮಾನಮರ್ಯಾದೆಗಳಿಗಾಗಿ ಶಾಂತನ್ನ ಆ ಮುದುಕನ ಕೊರಳಿಗೆ ಕಟ್ಟುತ್ತೀಯಾ? ನಾವು ಕಷ್ಟದಲ್ಲಿದ್ದಾಗ ಈ ಗೌರವ ಮರ್ಯಾದೆಗಳು ನಮ್ಮನ್ನು ಕಾಪಾಡಿದುವೇನು? ನಾವು ತಿನ್ನುವುದಕ್ಕಿಲ್ಲದೆ ಒದ್ದಾಡುತ್ತಿದ್ದಾಗ ನೀನು ಹೇಳಿದ ಆ ಜನ ನಮಗೇನು ಮಾಡಿದರು? ಈ ದಿನ ನಾವೂ ಇದೀವಿ ಅಂತ ಬಂದು ನಮ್ಮ ವ್ಯವಹಾರಗಳಲ್ಲಿ ಕೈಯಿಟ್ಟು ತೀರ್ಪು ಕೊಡುವ ಅಧಿಕಾರ ಅವರಿಗೇಕೆ ಕೊಡಬೇಕು ನಾವು. ಯಾರೋ ಏನೋ ಅನ್ನುತ್ತಾರೆಂದು ಶಾಂತನ ಬದುಕನ್ನು ಹಾಳುಮಾಡಬೇಡಣ್ಣಾ.

"ನಾವು ಯಾರಿಗೋಸ್ಕರವೂ ಏನು ಮಾಡುವುದೂ ಬೇಡ. ನಮಗೆ ಒಳ್ಳೆಯದೆಂದು ತೋಚಿದ್ದನ್ನು ಧೈರ್ಯವಾಗಿ ಮಾಡೋಣ. ಈ ಮದುವೆ ಶಾಂತನಿಗಾಗಲೀ ನಮಗಾಗಲೀ ಯಾವ ವಿಧವಾಗಿಯೂ ಒಳಿತನ್ನು ಮಾಡು ವುದಿಲ್ಲ. ಈ ಆಲೋಚನೆ ಬೇಡಣ್ಣಾ" ಎಂದಳು ಜಾನಕಿ ಆವೇಶದಿಂದ.

"ಯಾರು ಏನಂದರೂ ಸರಿ ಎಂದು ನಿರ್ಲಕ್ಷ್ಯದಿಂದ ಪ್ರವರ್ತಿಸಲು ನಾನು ನಿಮ್ಮ ಹಾಗೆ ಒಬ್ಬಂಟಿಗನಲ್ಲ, ಜಾನಕಿ. ನನ್ನ ಹೆಂಡತಿ ಮಕ್ಕಳ ಗೌರವ ಕಾಪಾಡಬೇಕಾದ ಬಾಧ್ಯತೆ ನನ್ನ ಮೇಲಿದೆ. ನನ್ನ ಮನೆ ನಿಷ್ಕಳಂಕ ವಾಗಿದ್ದ ಹೊರತು ನನ್ನ ಮಕ್ಕಳಿಗೆ ಮದುವೆಗಳಾಗುವುದಿಲ್ಲ. ನನ್ನ ಮನೆಗೆ ಬಂಧು ಬಳಗ ಬಂದು ಹೋಗುವುದಿಲ್ಲ. ನನ್ನ ಕಷ್ಟ-ಸುಖಗಳಲ್ಲಿ ಸ್ನೇಹಿತರು ನೆರವಾಗುವುದಿಲ್ಲ. ಇವರನ್ನೆಲ್ಲಾ ಎದುರಿಸಿ ನಿಲ್ಲುವ ಶಕ್ತಿ ನನಗಿಲ್ಲ. ನೀವೆಲ್ಲಾ ಸಂಸ್ಕಾರ ಹೃದಯವುಳ್ಳವರು. ಯಾವುದಕ್ಕೂ ಹೆದರದ ಧೈರ್ಯಸ್ಥರು. ನಿಮ್ಮ ತಂಗಿಯ ಬದುಕನ್ನು ನೀವೇ ತಿದ್ದಿಕೊಳ್ಳಿ. ನನ್ನ ಮಾತು ಕೇಳಲಿಲ್ಲವೆಂದು ನಾನೇನೂ ವ್ಯಥೆಪಡುವುದಿಲ್ಲ. ನನ್ನ ಮಾತಿಗೆ ನೀವು ಎಂದೂ ಬೆಲೆ ಕೊಟ್ಟಿಲ್ಲ. ನೀವೂ ನಾನೂ ಪೂರ್ವಪಶ್ಚಿಮ ದಿಕ್ಕುಗಳಿಗೆ ಪ್ರಯಾಣ ಮಾಡುತ್ತಿದ್ದೇವೆ.

ನಾವು ಒಂದು ಕಡೆ ಸೇರುವುದು ಅಸಾಧ್ಯ.

"ನಾನು ನಿಮ್ಮನ್ನೆಲ್ಲಾ ಕೇಳಿಕೊಳ್ಳುವುದೊಂದೇ. ನನ್ನ ಪಾಡಿಗೆ ನನ್ನನ್ನು ಬಿಡಿ. ನಿಮ್ಮ ಕೆಲಸಗಳಿಂದ, ನಿಮ್ಮ ಸಾಮಿಪ್ಯದಿಂದ, ಇಲ್ಲಿಗೆ ಬಂದು ಹೋಗುವುದರಿಂದ ನನ್ನನ್ನು ಬಯಲಿಗೆಳೆಯಬೇಡಿ. ಮರ್ಯಾದೆಯಾಗಿ ನನ್ನನ್ನೊಂದು ಕಡೆ ಬಿದ್ದಿರಲು ಅವಕಾಶಕೊಡಿ. ನಿಮ್ಮಿಂದ ನಾನು ಬಯಸುವುದು ಇಷ್ಟನ್ನೇ. ಇಷ್ಟು ಮಾಡಿ ಸಾಕು" ಎಂದು ಎರಡೂ ಕೈ ಜೋಡಿಸಿದ ಶ್ರೀಹರಿ.

ಅಣ್ಣ ಏನಾದರೂ ಅನ್ನುತ್ತಾನೆಂದೂ ತಾನು ವಾದಿಸಿ, ಹಠ ಮಾಡಿ ಒಪ್ಪಿಸಬೇಕೆಂದೂ ಅಂದುಕೊಂಡಿದ್ದ ಪ್ರಕಾಶ. ಅಣ್ಣ ಹೀಗೆ ಮಾತನಾಡಿದ ಮೇಲೆ ಏನು ಮಾಡಬೇಕೋ ತೋಚಲಿಲ್ಲ ಅವನಿಗೆ. ಸಾಭಿಪ್ರಾಯವಾಗಿ ಅಕ್ಕನ ಕಡೆ ನೋಡಿದ.

ಶಾಂತಳನ್ನು ಅಣ್ಣ ಎಂತಹ ಪರಿಸ್ಥಿತಿಯಲ್ಲಿಯೂ ಮದುವೆ ಮಾಡದೆ ಮನೆಯಲ್ಲಿರಿಸಿಕೊಳ್ಳುವುದಿಲ್ಲವೆಂದು ಗ್ರಹಿಸಿದಳು ಜಾನಕಿ. ವಂಶಮರ್ಯಾದೆಗೋಸ್ಕರ ಒಬ್ಬ ಚಿಕ್ಕ ಹುಡುಗಿಯ ಬದುಕನ್ನು ಬಲಿ ಕೊಡುವುದು ಅವಳಿಗೆ ಅನ್ಯಾಯವೆನಿಸಿತು. ಈಗ ಸಧ್ಯಕ್ಕೆ ಅವಳನ್ನು ಓದಿಸುವುದೇ ಒಳ್ಳೆಯದೆನ್ನಿಸಿತು. ಆದರೆ ಈ ವಿಷಯ ಅಣ್ಣನ ಮನಸಿಗೆ ಹತ್ತಲು ಸ್ವಲ್ಪ ದಿನ ಹಿಡಿಸಬಹುದು. ಅದುವರೆವಿಗೂ ಶಾಂತನನ್ನು ಅಣ್ಣನಿಂದ ದೂರವಿರಿಸುವುದೇ ಒಳ್ಳೆಯದೆಂದು ನಿಶ್ಚಯಿಸಿಕೊಂಡಳು.

"ಏಳು ಶಾಂತಾ" ಎಂದು ತಂಗಿಯ ಕೈ ಹಿಡಿದೆಬ್ಬಿಸಿದಳು.

"ಎಲ್ಲಿಗಕ್ಕಾ?" ಎಂದಳು ಶಾಂತ, ಬೆದರುಗಣ್ಣುಗಳಿಂದ ಅಕ್ಕನ ಕಡೆ ನೋಡುತ್ತಾ.

"ನನ್ನ ಹತ್ತಿರ ಇದ್ದು ಓದಿಕೊಳ್ಳುವಿಯಂತೆ."

ಅಕ್ಕನ ಅಭಿಪ್ರಾಯವನ್ನು ಅರ್ಥಮಾಡಿಕೊಂಡ ಪ್ರಕಾಶ ಆಚೆಗೆ ಹೋಗಿ ರಿಕ್ಷಾ ಕೂಗಿದ. ಜಾನಕಿ ತನ್ನ ಮತ್ತು ಶಾಂತಳ ಬಟ್ಟೆಗಳನ್ನು ಒಂದು ಚಿಕ್ಕ ಟ್ರಂಕಿನೊಳಕ್ಕೆ ಹಾಕಿ ಕೈಗೆ ತೆಗೆದುಕೊಂಡಳು.

"ಎಲ್ಲಿಗೆ ಪ್ರಯಾಣ? ಏನಿದು?" ಎನ್ನುತ ಸುಂದರಮ್ಮ ಅಡ್ಡ ಬಂದರು.

"ಅಮ್ಮಾ ನೀನೇ ಎಲ್ಲಾ ಕೇಳಿದ್ದಿ. ನಾನಿನ್ನು ಹೇಳಬೇಕಾದ್ದೇನೂ ಇಲ್ಲ. ನಾವು ಸುಖವಾಗಿರೋದು ಬೇಕಂತೆ ಅಣ್ಣನಿಗೆ. ನಮಗೂ ಅಷ್ಟೇ ಅಮ್ಮಾ ಬೇಕಾದ್ದು. ನಮ್ಮಿಂದ ಅಣ್ಣ ಅವಮಾನಗಳ ಪಾಲಾಗದೆ ಗೌರವದಿಂದ ಬದುಕಬೇಕೆಂಬುದೇ ನನ್ನ ಕೋರಿಕೆ. ಅದಕ್ಕೇ ಶಾಂತನ್ನ ನನ್ನೊಂದಿಗೆ ಕರೆದುಕೊಂಡು ಹೋಗುತ್ತಿದ್ದೇನೆ. ಗಂಡನನ್ನು ಬಿಟ್ಟು ನೌಕರಿ ಮಾಡುತ್ತಿರುವ

ನನಗೆ ಶಾಂತ ನನ್ನ ಹತ್ತಿರ ಇದ್ದರೂ ಹೊಸದಾಗಿ ಹೋಗುವ ಗೌರವವೇನಿಲ್ಲ. ಹೋಗುವ ಮರ್ಯಾದೆಯಾದರೆ ಈಗಾಗಲೇ ಹೊರಟುಹೋಗಿರುತ್ತೆ" ಜಾನಕಿ ನಿದಾನವಾಗಿ ಹೇಳಿದಳು.

"ಅವನು ಏನಂದಾಂತ ಅವನನ್ನು ಕೆಟ್ಟವನನ್ನು ಮಾಡಿ ಹೋಗುತ್ತಿದೀರಿ? ಅಕ್ಕತಂಗಿಯರನ್ನು ಮನೆಯಿಂದ ಹೊರಗೆಹಾಕಿದನೆಂಬ ಅಪಖ್ಯಾತಿಯನ್ನು ಅವನ ಮುಖಕ್ಕೆ ಬಳಿದು ಹೋಗಲು ನಿನಗೆ ಹೇಗೆ ಮನಸು ಬಂತು? ಅವಳು ಮಾಡಿದ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಂಡು ಮದುವೆ ಮಾಡಿ ಅವಳಿಗೊಂದು ದಾರಿಮಾಡೋಣವೆಂದು ಅವನು ಆಲೋಚಿಸುತ್ತಿದ್ದರೆ ನೀನೇನೋ ಉದ್ಧಾರಮಾಡುವವಳಂತೆ ಅವಳನ್ನು ಕರೆದುಕೊಂಡು ಹೋಗುತ್ತಿದೀಯ? ನಿನ್ನ ಹಾಗೇ ಅವಳ ಬದುಕನ್ನೂ ಹಾಳುಮಾಡಬೇಕೆನ್ನುತ್ತೀಯಾ? ನಿನಗಿಲ್ಲಿರುವುದು ಇಷ್ಟವಿಲ್ಲದಿದ್ದರೆ ನೀನು ಹೋಗು. ಶಾಂತನನ್ನು ಕರೆದುಕೊಂಡು ಹೋಗಲು ಬಿಡುವುದಿಲ್ಲ" ಎಂದರು ಸುಂದರಮ್ಮ ಕೋಪದಿಂದ.

"ಅಮ್ಮಾ, ತಾಯಿಯಾಗಿದ್ದು ನೀನಾಡಬೇಕಾದ ಮಾತಲ್ಲವಮ್ಮಾ ಇದು. ಶಾಂತಳ ಬದುಕಿಗೊಂದು ಒಳ್ಳೆಯ ದಾರಿಯನ್ನು ತೋರಿಸಬೇಕೆಂಬುದೇ ನನ್ನ ತಾಪತ್ರಯ. ಅಣ್ಣ ತೋರಿಸಿದ ದಾರಿಗಿಂತ ಒಳ್ಳೆಯ ದಾರಿಯನ್ನು ತೋರಿಸಬಲ್ಲೆನೇನೋ ಎಂದೇ ನನ್ನ ಆಸೆ."

"ನಾನು ಅಕ್ಕನೊಂದಿಗೆ ಹೋಗ್ತೀನಿ"—ಇಷ್ಟು ಹೊತ್ತಿನ ಅನಂತರ ಶಾಂತ ಮೌನ ಮುರಿದು ಮಾತನಾಡಿದಳು.

"ಹೋಗೇ ಹೋಗು. ಇಲ್ಲಿದ್ದು ಯಾರನ್ನ ಉದ್ಧಾರ ಮಾಡ್ತೀರಿ. ಇಬ್ಬರೂ ಒಬ್ಬರನ್ನೊಬ್ಬರು ಕಟ್ಟಿಕೊಂಡು ಸತ್ತರೆ ಪೀಡೆನೇ ಕಳೀತು ಅಂದು ಅಂದುಕೋತೀನಿ. ನನಗೆ ಹೆಣ್ಣು ಮಕ್ಕಳೇ ಹುಟ್ಟಲಿಲ್ಲ ಅಂದುಕೋತೀನಿ. ಹುಟ್ಟಿದವರು ಸತ್ತರು ಅಂದುಕೋತೀನಿ—ಸುಂದರಮ್ಮ ಹುಚ್ಚರಂತೆಕೂಗಾಡಿದರು.

ಜಾನಕಿ ತಾಯಿಯ ಮುಂದೆ ನಿಂತು ಮೌನವಾಗಿ ಕೈಜೋಡಿಸಿದಳು. ಈ ವಿಷಯವನ್ನು ಕುರಿತು ಹಿಂದೆ ಅವಳು ಆಲೋಚಿಸಿದಾಗ ಈ ಘಟ್ಟ ಇಷ್ಟು ಬಾಧಕವಾಗಿ ಇರುತ್ತದೆಯೆಂದು ಊಹಿಸಿರಲಿಲ್ಲ. ಒಡಹುಟ್ಟಿದವರು ಒಂದು ಕಡೆ ಬೆಳೆದು ದೊಡ್ಡವರಾಗುವುದು ಎಷ್ಟು ಸಹಜವೋ ಅಭಿಪ್ರಾಯ ಹೊಂದದಿರುವಾಗ ದೂರವಾಗುವುದೂ ಅಷ್ಟೇ ಸಹಜವೆಂದುಕೊಂಡಿದ್ದಳು.

ಆದರೆ....

ಅತ್ತಿಗೆಯ ಬಳಿ ಹೋಗಿ ನಿಂತಳು. ಕನಕಳ ಕಣ್ಣಲ್ಲಿ ನೀರು ತುಂಬಿತ್ತು. "ಜಾನಕಿ" ಎಂದು ತಬ್ಬಿಹಿಡಿದಳು.

ಜಾನಕಿಯ ಗಂಟಲು ಕಟ್ಟಿತು.

"ಆಗಾಗ ಬರ್ತಾ ಇರ್ತೀನಿ ಅತ್ತಿಗೇ" ಎಂದಳು, ಗಂಟಲು ಸರಿಪಡಿಸಿ ಕೊಳ್ಳುತ್ತಾ.

ಶ್ರೀಹರಿ ಕೋಣೆಯೊಳಕ್ಕೆ ಹೋಗಿ ಬಾಗಿಲು ಹಾಕಿಕೊಂಡಿದ್ದ.

"ಅಣ್ಣನಿಗೆ ಹೇಳತ್ತೀಗೇ " ಎಂದಳು ಶಾಂತಾ.

ಜಾನಕಿ, ಶಾಂತ ಅತ್ತೆಯ ಮನೆಗೆ ಹೋಗುವಾಗ ಈ ರೀತಿಯ ಮಾತು ಕೇಳುತ್ತೇನೆಂದುಕೊಂಡಿದ್ದಳು ಕನಕ. ಆದರೆ ಈಗ ಎಂತಹ ಪರಿಸ್ಥಿತಿ ಯಲ್ಲಿ ಕೇಳಬೇಕಾಗಿ ಬಂದಿತ್ತು!

ಎಲ್ಲರೂ ನಗುತ್ತಿರುವಾಗ ಮನಸು ಬಿಚ್ಚಿ ಮಾತನಾಡಬಲ್ಲಳು ಕನಕ. ಹೃದಯ ವಿದಾರಕವಾದ ಇಂತಹ ಸಮಯದಲ್ಲಿ ಅವಳು ಮೂಕಳಾಗುತ್ತಿದ್ದಳು. ಮನಸಿನಲ್ಲಿಯ ವ್ಯಥೆ ಕಣ್ಣೀರಾಗಿ ಪ್ರವಹಿಸುತ್ತಿತ್ತು. ಅತ್ತರೆ ವ್ಯಥೆಯ ಭಾರ ಕಡಿಮೆಯಾಗುತ್ತದೆಯೆನ್ನುತ್ತಾರೆ. ಅಳುತ್ತಿದ್ದಂತೆಲ್ಲಾ ಕನಕಳ ಹೃದಯ ಭಾರವಾಗಿ ಅವಳನ್ನು ಮತ್ತಷ್ಟು ಕುಗ್ಗುವಂತೆ ಮಾಡುತ್ತಿತ್ತು. ಆದರೆ ಆ ದುಃಖ ಅನುಭವಿಸುವುದರಲ್ಲಿಯೋ ಅವಳಿಗೆ ಸಮಾಧಾನವಿರುತ್ತಿತ್ತೇನೋ. ಆ ದಿನವೆಲ್ಲಾ ಕನಕ ಅಳುತ್ತಲೇ ಇದ್ದಳು.

* * *

ಜಾನಕಿಯೊಂದಿಗೆ ಶಾಂತಳೂ ಬಂದದ್ದರ ಕಾರಣವನ್ನು ಅನಸೂಯಮ್ಮ ಪ್ರಶ್ನಿಸಲಿಲ್ಲ. "ಬೇಗಲೇ ಬಂದುಬಿಟ್ಟೆಯಲ್ಲಾ" ಎಂದು ಮಾತ್ರ ಕೇಳಿ ಸುಮ್ಮ ನಾಗಿದ್ದರು.

"ಅಂದುಕೊಂಡನಂತರ ಯಾವ ಕೆಲಸವನ್ನಾದರೂ ಕೂಡಲೇ ಮಾಡಿ ಬಿಡುವುದು ನನ್ನ ಅಭ್ಯಾಸ. ಅದೂ ಅಲ್ಲದೆ ಈವತ್ತು ಒಳ್ಳೇ ದಿನ" ಎಂದಳು.

ತಿಥಿ ವಾರಗಳ ರೀತ್ಯಾ ಆ ದಿನ ಒಳ್ಳೆಯ ದಿನ ಹೌದೋ ಅಲ್ಲವೋ ಜಾನಕಿಗೆ ಗೊತ್ತಿರಲಿಲ್ಲ. ಆದರೆ ಒಂದು ಒಳ್ಳೆಯ ಕೆಲಸ ಮಾಡಲು ಭಗವಂತ ತನಗೆ ಧೈರ್ಯ ಶಕ್ತಿಗಳನ್ನು ಕೊಟ್ಟ ದಿನ ಅದು. ಆದ್ದರಿಂದಲೇ ಆ ದಿನ ಒಳ್ಳೆಯ ದಿನವೆಂಬ ಭಾವನೆಯುಂಟಾಗಿತ್ತು, ಅವಳಿಗೆ.

ಅನಸೂಯಮ್ಮ ತಾನು ಮಾಡಬಹುದಾದ ಸಹಾಯ ಮಾಡಿದರು. ಮನೆಯಲ್ಲಿ ಎಲ್ಲಾ ವಸ್ತುಗಳನ್ನೂ ಹೊಂದಿಸಿಕೊಳ್ಳುವವರೆವಿಗೂ ಹಾಸ್ಟೆಲಿ ನಲ್ಲಿ ಊಟ ಏರ್ಪಾಟು ಮಾಡಿದರು. ಮನೆಗೆ ಬೇಕಾದ ಕೆಲವು ವಸ್ತುಗಳನ್ನು ತಂದುಕೊಳ್ಳುವವರೆವಿಗೂ ತಮ್ಮ ಮನೆಯಲ್ಲಿದ್ದ ವಸ್ತುಗಳನ್ನು ಬಳಸಿಕೊಳ್ಳಲು

ಕೊಟ್ಟರು. ಮನೆಯಿಂದ ಬರುತ್ತಾ ಜಾನಕಿ ಹೀಗೆ ಬರಿಗೈಯಲ್ಲಿ ಬಂದದ್ದೇಕೆ? ಮನೆಯಲ್ಲಿ ಜಗಳವಾಡಿ ಬರಲಿಲ್ಲವಷ್ಟೆ ಎಂಬ ಅನುಮಾನ ಬಂದಿತ್ತಾತನಿಗೆ.

ಜಾನಕಿ ಬಾಲವಿಹಾರದಲ್ಲಿದ್ದರೆ ಮಕ್ಕಳಿಗೆ ಒಳ್ಳೆಯದೆಂಬ ಸ್ವಾರ್ಥ ಚಿಂತನೆ ಜಾನಕಿಯ ಸ್ವಂತ ವಿಷಯಗಳನ್ನು ಪ್ರಶ್ನಿಸಿ ಸಲಹೆ ಕೊಡುವ ಅವಕಾಶವನ್ನು ಇಲ್ಲದಂತೆ ಮಾಡಿತ್ತು.

ಅಂತಹ ಪ್ರಶ್ನೆಗಳಿಂದ ತನ್ನನ್ನು ಬಾಧಿಸದಿದ್ದುದಕ್ಕಾಗಿ ಅನಸೂಯಮ್ಮನಿಗೆ ಜಾನಕಿ ಮನಸ್ಸಿನಲ್ಲಿಯೇ ಕೃತಜ್ಞತೆಗಳನ್ನು ಅರ್ಪಿಸಿದಳು. ಇಪ್ಪತ್ತು ದಿನ ಕಾಲೇಜಿಗೆ ಹೋಗದಿದ್ದುದರಿಂದ ಶಾಂತನಿಗೆ ಹೆಚ್ಚು ಕಷ್ಟವಾಗಲಿಲ್ಲ. ಸಹ ವಿದ್ಯಾರ್ಥಿನಿಯರ ಪುಸ್ತಕಗಳಿಂದ ನೋಟ್ಸ್ ಬರೆದುಕೊಂಡಳು.

ಒಂದು ದಿನ ಶಾಂತನ ಪುಸ್ತಕಗಳನ್ನು ಹಿಡಿದುಕೊಂಡು ಬಂದ ಪ್ರಕಾಶ. "ತಂದುಕೊಡೋಣ ಅಂದರೆ ಬಿಡುವೇ ಆಗಲಿಲ್ಲ. ಒಂದು ವಾರದಿಂದ ನನ್ನ ಹತ್ತಿರಾನೇ ಇದ್ದುಬಿಟ್ಟಿತ್ತು" ಎಂದ.

"ಅಣ್ಣ ಹೇಗಿದಾನೆ?"

"ನಾನೀಗ ಅಲ್ಲಿಲ್ಲ....?"

"ಯಾಕೆ, ಏನಾಯಿತು?"

"ಅಣ್ಣ ಕೆಲವು ದಿನ ಒಬ್ಬನೇ ಇರೋದು ವಾಸಿ ಅನ್ನಿಸಿತು."

"ನಾವು ಬಂದಮೇಲೆ ಏನಾದರೂ ಮತ್ತೆ ಮಾತು ಬಂತೇನು?"

ಪ್ರಕಾಶ ಉತ್ತರ ಹೇಳಲಿಲ್ಲ. ಕೆಲಸವಿದೆಯೆಂದು ಹೇಳಿ ಅಲ್ಲಿಂದ ಹೊರಟು ಹೋದ.

ಶಾಂತ ಪ್ರಕಾಶನ ಮಾತುಗಳನ್ನು ಕೇಳಿದಳು. ತನಗೋಸ್ಕರ ಇವರೆಲ್ಲಾ ಹೀಗೆ ಒಬ್ಬೊಬ್ಬರು ಒಂದೊಂದು ದಾರಿಯಾದರೆ ಈ ವಿಭಿನ್ನಕ್ಕೆ ತಾನು ನೆಪ ಮಾತ್ರವೇ?—ಎಂದು ಆಲೋಚಿಸತೊಡಗಿದಳು.

ಅಕ್ಕನ ಬಳಿ ಶಾಂತನಿಗೆ ಮೊದಲಿನ ಸಲಿಗೆಯಿರಲಿಲ್ಲ. ಏನಾದರೂ ಹೇಳಬೇಕಾಗಿದ್ದರೂ ಮನಸಿನಲ್ಲಿ ಮೊದಲೇ ಬಾಯಿಪಾಠ ಮಾಡಿಕೊಂಡು ಒಪ್ಪಿಸುತ್ತಿದ್ದಳು.

ಜಾನಕಿ ಅವಳನ್ನು ಎಂದೂ ಬೈದಿರಲಿಲ್ಲ. ಹೆಚ್ಚು ಪ್ರೀತಿಯಿಂದಲೂ ನೋಡುತ್ತಿರಲಿಲ್ಲ. ಸದಾ ಮಾತನಾಡಬೇಕಾದ ಆವಶ್ಯಕತೆಯಿಲ್ಲದಂತೆಯೇ ಕೆಲಸಕಾರ್ಯ [illegible] ನಡೆಯುವಂತೆ ಏರ್ಪಾಟು ಮಾಡಿದ್ದಳು. ಯಾವಾಗಲಾದರೂ ಮಾತನಾಡಿದರೂ ಎಷ್ಟು ಬೇಕೋ ಅಷ್ಟು. ಆ ಪರಿಸ್ಥಿತಿಯಲ್ಲಿ ತಾನಲ್ಲದೆ ಇನ್ನೊಬ್ಬ ಹುಡುಗಿಯಿದ್ದರೂ ಅಕ್ಕ ಹೀಗೆಯೇ ಪ್ರವರ್ತಿಸುತ್ತಿದ್ದಳೆನಿಸುತ್ತಿತ್ತು

ಶಾಂತನಿಗೆ. ಅಕ್ಕನ ಮನಸು ಬದಲಾಗಿದೆ. ಅಕ್ಕ ಕೂಡಾ ಬದಲಾಗಿದ್ದಾಳೆ ಎನ್ನಿಸತೊಡಗಿತು.

ಅಕ್ಕ ತನ್ನೊಂದಿಗೆ ಮೊದಲಿನಂತೆ ಮಾತನಾಡಬೇಕು. ತಾವಿಬ್ಬರೂ ತಮಾಷೆಯಾಗಿ ಹರಟೆ ಹೊಡೆಯಬೇಕು ಎಂದು ಆಶಿಸುತ್ತಿದ್ದಳು ಶಾಂತೆ. ಹೀಗೆ ಉದಾಸೀನವಾಗಿರುವುದಕ್ಕಿಂತ ತನ್ನನ್ನು ಬೈದರೂ ಚೆನ್ನಾಗಿರುತ್ತದೆ ಎನ್ನಿಸಿತವಳಿಗೆ. ಸ್ವಲ್ಪ ಹೊತ್ತು ಅತ್ತು ಸುಮ್ಮನಾಗಬಹುದಾಗಿತ್ತು. ಅಕ್ಕನ ಈ ಮೌನ ಅವಳಿಗೆ ಗರಗಸದಿಂದ ಕುಯ್ಯುತ್ತಿರುವಂತೆನಿಸುತ್ತಿತ್ತು.

ಆದರೆ ಜಾನಕಿಯ ಮನಸ್ಥಿತಿ ಶಾಂತಾ ಕೋರುತ್ತಿದ್ದುದಕ್ಕೆ ಭಿನ್ನವಾಗಿತ್ತು. ಅವಳಿಗೆ ಶಾಂತನ ಬಗ್ಗೆ ಉದಾಸೀನವಿರಲಿಲ್ಲ. ಆದರೆ ಸಂತೋಷವಾಗಿ ಹರಟೆ ಹೊಡೆಯುವಷ್ಟು ನಿರ್ಮಲ ಮನಸೂ ಇರಲಿಲ್ಲ. ತಾನು ಮೇಲೆ ಹಾಕಿಕೊಂಡ ಈ ಬಾಧ್ಯತೆಯನ್ನು ಸಕ್ರಮವಾಗಿ ನಿರ್ವಹಿಸಬಲ್ಲೆನೇ? ತಾನು ಸರಿಯೆಂದುಕೊಂಡ ದಾರಿಯಲ್ಲಿ—ಆ ದಾರಿ ಶಾಂತನಿಗೆ ಇಷ್ಟವೋ ಇಲ್ಲವೋ ತಿಳಿಯದೆ ಅವಳನ್ನು ನಿರ್ಭಂದವಾಗಿ ಎಳೆದುಕೊಂಡು ಹೋಗುತ್ತಿದೇನೆಯೋ ಎಂದು ಚಿಂತಿಸುತ್ತಿದ್ದಳು.

ತಾಯಿ, ಅಣ್ಣ, ಅತ್ತಿಗೆಯರಿಗೆ ದೂರವಾದೆನೆಂಬ ಭಾವನೆ ಆ ಕ್ಷಣದಲ್ಲಿ ಬಾರದಿದ್ದರೂ ತನ್ನವರೊಂದಿಗಿನ ಈ ದೂರ ಅವಳಿಗೆ ದುಃಖವನ್ನುಂಟು ಮಾಡಿತ್ತು. ಆಗಾಗ ಪ್ರಕಾಶ ಬಂದು ಅಲ್ಲಿನ ವಿಷಯಗಳನ್ನು ಹೇಳುತ್ತಿದ್ದ.

"ಅಣ್ಣನಿಗೆ ಹುಷಾರಿಲ್ಲವಂತೆ. ಎರಡು ತಿಂಗಳು ಆಫೀಸಿಗೆ ರಜಾ ಹಾಕಿದಾನಂತೆ" ಎಂದಿದ್ದ ಒಂದು ಸಲ.

"ಅಣ್ಣನನ್ನು ನೋಡಿದೆಯಾ? ಹೇಗಿದಾನೆ? ಮೈಯಲ್ಲಿ ಏನಾಗಿದೆ?" ಎಂದು ಆತುರದಿಂದ ಪ್ರಶ್ನಿಸಿದಳು ಜಾನಕಿ.

"ಮೊದಲಿಗಿಂತ ಕೃಶನಾಗಿದಾನೆ. ಕುಗ್ಗಿದಂತೆ ಕಾಣುತ್ತಾನೆ."

'ಅಣ್ಣನದು ಶಾರೀರಕರುಗ್ಣತೆಯಲ್ಲದಿರಬಹುದು. ಹೊರಗೆ ಬರಲು ಇಷ್ಟವಿಲ್ಲದೆ ಮನೆಯಲ್ಲಿದ್ದು ಬಿಟ್ಟಿರಬೇಕು' ಎಂದುಕೊಂಡಳು ಜಾನಕಿ.

ಮತ್ತೊಂದು ಸಲ ಶುಭ ಸಮಾಚಾರ ತಂದಿದ್ದ ಪ್ರಕಾಶ.

"ಅಣ್ಣನಿಗೆ ಹೆಣ್ಣು ಮಗು" ಅಂತ.

"ಎಷ್ಟು ದಿನವಾಯಿತು?" ಸಂತೋಷದಿಂದ ಪ್ರಶ್ನಿಸಿದಳು ಜಾನಕಿ.

"ನಿನ್ನೆ ದೀಪ ಹಚ್ಚುವ ವೇಳೆಗೆ ಹೋಗಿದ್ದೆ. ನಾನು ಯಾವಾಗ ಹೋದರೂ 'ಬಂದೆಯಾ ಪ್ರಕಾಶ' ಎಂದು ಪ್ರೀತಿಯಿಂದ ಮಾತನಾಡಿಸುತ್ತಿದ್ದರು ಅತ್ತಿಗೆ. ನಿನ್ನೆ ಕಾಣಲಿಲ್ಲ. ಅತ್ತಿಗೆಯನ್ನು ನೋಡಿದರೆ ಹೊಟ್ಟೆ

ಬರುವ ಮನಸ್ಸಾಗಲಿಲ್ಲ.

"ಅಣ್ಣಾ, ಅತ್ತಿಗೆ ಮನೇಲಿಲ್ಲವೇ?" ಎಂದೆ.

'ಆ ಕೋಣೆಯಲ್ಲಿದ್ದಾಳೆ' ಎಂದ ಅಣ್ಣ. ಚಿಕ್ಕ ಕೋಣೆ ತೋರಿಸುತ್ತಾ.

"ಹೋಗಲೇ ಬೇಡವೇ ಎಂದು ಹಿಂದೆ ಮುಂದೆ ನೋಡುತ್ತಿದ್ದೆ 'ಹೋಗಿ ನೋಡು, ನಿಮ್ಮ ಅತ್ತಿಗೆಗೆ ಮಗಳು ಹುಟ್ಟಿದಾಳೆ" ಎಂದಳು ಅಮ್ಮ.

"ಕೋಣೆಯೊಳಕ್ಕೆ ಓಡಿದೆ. ಅತ್ತಿಗೆ ಸುಸ್ತಾಗಿ ಮಂಚದ ಮೇಲೆ ಮಲಗಿದ್ದರು. ಪಕ್ಕದಲ್ಲಿ ಮಗು ಇತ್ತು. ನನ್ನ ಮಟ್ಟಿಗೆ ಮಗು ತುಂಬಾ ಸಣ್ಣಗಿದೆ ಅನ್ನಿಸಿತು. ಎಲ್ಲಾ ಎಳೆಯ ಮಕ್ಕಳೂ ಹಾಗೆಯೇ ಇರುತ್ತಾರೇನೋ ಕಾಣೆ. 'ಬಂದೆಯಾ ಪ್ರಕಾಶ, ವಾರದಿಂದ ಬರಲಿಲ್ಲವಲ್ಲಾ ಇನ್ನು ಬರ್ತೀಯೋ ಇಲ್ಲವೋ ಅಂದುಕೊಂಡೆ' ಎಂದಳು ಅತ್ತಿಗೆ.

"ಏಕೆ ಬರೋಲ್ಲ ಅತ್ತಿಗೆ. ಈ ವಿಷಯ ನನಗೆ ಗೊತ್ತಾಗಿದ್ದರೆ ಎಷ್ಟು ಕೆಲಸವಿದ್ದರೂ ಬಿಟ್ಟು ಓಡಿಬರುತ್ತಿದ್ದೆ ಎಂದೆ.

"ಅತ್ತಿಗೆ ಸುತ್ತಲೂ ನೋಡಿ, ಜಾನಕಿ ಹೊರಟುಹೋದ ಮೇಲೆ ಒಂದು ಸಲವೂ ಬರಲಿಲ್ಲ ಎಂದಳು.

"ನಾನು ಹೇಳ್ತೀನತ್ತಿಗೆ. ಹೀಗೇಂತ ತಿಳಿದರೆ ಓಡಿ ಬರುತ್ತಾಳೆ ಎಂದೆ. ಮಗು ಹುಟ್ಟಿ ವಾರವಾಯಿತಂತೆ, ಅತ್ತಿಗೆ ತುಂಬಾ ಹೇಳಿದಾಳೆ. ಒಂದು ಸಲ ನೋಡಿ ಬಾ" ಎಂದ ಪ್ರಕಾಶ.

"ಹೋಗೋಣ ಹೋಗೋಣ ಅಂದುಕೋತಾನೇ ಇದೀನಿ ಕಣೋ. ಆದರೆ ಅಣ್ಣನ ಮನಸಿಗೆ ನೋವಾಗುತ್ತೇನೋ ಅಂತ ಅನುಮಾನಿಸುತ್ತಿದೀನಿ. ಹೋದಮೇಲೆ ಅವನೇನಾದರೂ ಅಂದರೆ ನಾನು ಜವಾಬು ಹೇಳದೆ ಇರೋಲ್ಲ ಅವನಿಗೆ ಗಾಯ ಕಲಕಿದಂತಾಗುತ್ತೇನೋ ಅಂತ...."

"ಪರವಾಗಿಲ್ಲ ಒಂದು ಸಲ ಹೋಗಿ ಬಾ. ಅತ್ತಿಗೆ ನೊಂದುಕೋತಾರೆ."

"ಹುಂ. ಈವತ್ತು ಸಾಯಂಕಾಲ ಹೋಗುತ್ತೀವಿ" ಎಂದಳು ಜಾನಕಿ.

"ಅಕ್ಕಾ, ನಾನೂ ಬರಲೇ, ಮಗೂನ ನೋಡ್ತೀನಿ."

"ಬೇಡಾ ಶಾಂತಾ. ಅಲ್ಲಿನ ಪರಿಸ್ಥಿತಿ ಹೇಗಿದೆಯೋ? ನಾನು ಮುಂಚೆ ನೋಡಿ ಬರ್ತೀನಿ. ಅನಂತರ ನೀನು ಹೋಗುವಿಯಂತೆ."

ಆ ದಿನ ಸಾಯಂಕಾಲ ಪೇಟೆಗೆ ಹೋಗಿ ಮಗುವಿಗೋಸ್ಕರ ಎರಡು ಫ್ರಾಕು, ಟವಲ್ಸ್ ಕೊಂಡುಕೊಂಡಳು. ಅತ್ತಿಗೆಗೇಂತ ಮೂಸಂಬಿಹಣ್ಣು ತೆಗೆದುಕೊಂಡಳು.

ಜಾನಕಿ ಮನೆಯಲ್ಲಿ ಕಾಲಿಟ್ಟಾಗ ಶ್ರೀಹರಿ ಮನೆಯಲ್ಲಿರಲಿಲ್ಲ.

ಸುಂದರಮ್ಮ ಒಳಗೆಲ್ಲೋ ಕೆಲಸದಲ್ಲಿದ್ದರು, ಮೆಲ್ಲನೆ ಮೂಲೆಯ ಕೋಣೆಯ ಬಾಗಿಲನ್ನು ತಳ್ಳಿ ಒಳಕ್ಕೆ ಹೋದಳು. ಕೋಣೆಯಲ್ಲಿ ದೀಪ ಮಂದವಾಗಿ ಉರಿಯುತ್ತಿತ್ತು. ಆ ಬೆಳಕಿನಲ್ಲಿ ಬಿಳಿಚಿಕೊಂಡಿದ್ದ ಅತ್ತಿಗೆಯ ಮುಖವನ್ನೂ ಪಕ್ಕದಲ್ಲಿ ತಾಯಿಯ ಹಾಲಿಗೋಸ್ಕರ ಮಿಸುಕಾಡುತ್ತಿದ್ದ ರಕ್ತದ ಮುದ್ದೆಯಂತಿದ್ದ ಮಗುವನ್ನೂ ನೋಡಿದಳು.

ಸದ್ದು ಕೇಳಿ ಕಣ್ಣು ತೆರೆದಳು ಕನಕ. ಎದುರಾಗಿ ಜಾನಕಿ ಕಂಡಳು.

"ಯಾರು ಜಾನಕೀನೇ? ಬಂದೆಯಾ?" ಎಂದಳು ಮೆಲ್ಲನೆ.

"ನಾನೇ ಅತ್ತಿಗೇ ಪ್ರಕಾಶ ಹೇಳಿದ. ನಿನ್ನನ್ನೂ ಮಗುವನ್ನೂ ನೋಡೋಣ ಅಂತ ಬಂದೆ" ಎಂದಳು ಕೈಯಲ್ಲಿದ್ದ ಪ್ಯಾಕೆಟ್ಟನ್ನು ಮಂಚದ ಮೇಲಿಡುತ್ತಾ.

"ಹತ್ತಿರ ಬರಬೇಡ. ಇನ್ನೂ ಸ್ನಾನ ಆಗಿಲ್ಲ."

"ಪರವಾಗಿಲ್ಲ ಅತ್ತಿಗೇ. ಬೇಕಾದರೆ ಮನೆಗೆ ಹೋಗಿ ಸ್ನಾನ ಮಾಡ್ತೀನಿ. ನಿಮ್ಮನ್ನು ನೋಡೋಣ ಅಂತ ಇಷ್ಟು ದೂರ ಬಂದು ದೂರ ಕುಳಿತು ಹೋಗಲೇ?" ಎಂದಳು ಜಾನಕಿ ಮಗುವನ್ನು ಎತ್ತಿಕೊಳ್ಳುತ್ತಾ.

ಕನಕ ಎದ್ದು ಕುಳಿತಳು. "ಇದೇನಿದು" ಎಂದಳು ಪೊಟ್ಟಣ ನೋಡಿ.

"ಮಗೂಗೆ ಟವಲ್ಸ್, ಫ್ರಾಕು. ನಿನಗೆ ಹಣ್ಣು ಅಷ್ಟೆ."

"ಇವೆಲ್ಲಾ ಏಕಮ್ಮಾ. ನಿನಗಿರೋ ಖರ್ಚು ಸಾಲದೂಂತಲೇ?"

"ನನ್ನ ತೃಪ್ತಿಗಾಗಿ ಅತ್ತಿಗೇ. ಇನ್ನೇನು ಅಡ್ಡಿ ಹೇಳಬೇಡ."

ಅರ್ಧಗಂಟೆ ಅತ್ತಿಗೆ ನಾದಿನಿಯರು ಮಾತನಾಡುತ್ತಾ ಕುಳಿತಿದ್ದರು.

"ಅಣ್ಣ ರಜದಲ್ಲಿದ್ದಾನಂತಲ್ಲಾ, ಎಲ್ಲಿ ಕಾಣಲಿಲ್ಲ?"

"ಈವತ್ತಿಗೆ ರಜಾ ಪೂರ್ತಿಯಾಯಿತು. ಈಗ ತಾನೇ ಹೊರಗೆ ಹೋಗುತ್ತೀನೆಂದು ಹೇಳಿ ಹೋದರು. ನೀವು ಹೊರಟು ಹೋದಾಗಿನಿಂದ ಮನೆ ಬಿಟ್ಟು ಹೋಗಿರಲಿಲ್ಲ. ಮನೆಗೆ ಏನಾದರೂ ಬೇಕಾದರೂ ಪಕ್ಕದ ಮನೆ ಹುಡುಗರಿಗೆ ಹೇಳಿ ತರಿಸಿಕೋತಿದಾರೆ ಅತ್ತೆ." ಎಂದಳು ಕನಕ.

"ನಾನಿನ್ನು ಬರ್ತೀನಿ ಅತ್ತಿಗೆ" ಎಂದು ಮೇಲೆದ್ದಳು ಜಾನಕಿ.

"ಅಮ್ಮನ್ನ ನೋಡಿದೆಯಾ? ನಿಮ್ಮ ಅಣ್ಣ ಬರೋವರೆಗೂ ಇರೋಲ್ಲವಾ?"

"ಇನ್ನೊಂದು ಸಲ ಬರ್ತೀನಿ" ಎನ್ನುತ್ತಾ ಹೊಸಿಲು ದಾಟಿದಳು ಜಾನಕಿ.

ಶ್ರೀಹರಿ ಮನೆಗೆ ಬಂದು ತಾಯಿಯೊಡನೆ ಮಾತನಾಡುತ್ತಿದ್ದುದು ಕೇಳಿಸಿತು. ಒಂದು ಸಲ ಒಳಕ್ಕೆ ಹೋಗಲೇ ಎಂದುಕೊಂಡವಳು ಮನಸು

ಬದಲಾಯಿಸಿಕೊಂಡು ಬೀದಿಗೆ ಇಳಿದಳು. ಜಾನಕಿ ಹೊರಟು ಹೋದನಂತರ ಶ್ರೀಹರಿ ಕನಕಳ ಕೋಣೆಯೊಳಕ್ಕೆ ಹೋದ. ಜಾನಕಿ ಮಗುವಿಗಾಗಿ ತಂದ ಬಟ್ಟೆಗಳನ್ನು ನೋಡುತ್ತಿದ್ದಳು ಕನಕ.

"ಇದೆಲ್ಲಿಯದು? ಯಾರು ತಂದರು?" ಎಂದ. ಪ್ರಕಾಶ್ ತಂದಿರಬಹು ದೆಂದು ಊಹಿಸುತ್ತಾ.

"ಜಾನಕಿ ತಂದಿದ್ದು" ಎಂದಳು ಕನಕ ಗಂಡನ ಕಡೆ ನೋಡುತ್ತಾ.

"ಎಲ್ಲಿ? ಯಾವಾಗ ಬಂದಳು?"

"ಈಗ ತಾನೇ ಹೋದಳು. ನಿಮಗೆ ಬಾಗಿಲಲ್ಲಿ ಎದುರಾಗಿರಬೇಕಲ್ಲಾ!"

ಜಾನಕಿ ಮನೆಗೆ ಬಂದೂ ತನ್ನೊಡನೆ ಮಾತನಾಡದೆ ಹೋದದ್ದು ಶ್ರೀಹರಿಗೆ ತುಂಬಾ ಕೋಪವನ್ನುಂಟುಮಾಡಿತ್ತು. ಅಭಿಪ್ರಾಯ ಭೇಧದಿಂದ ಮಾತಿಗೆ ಮಾತು ಅಂದುಕೊಂಡ ಮಾತ್ರಕ್ಕೇ ಹೀಗೆ ಮುಖ ತಪ್ಪಿಸಬೇಕೆ? ರಕ್ತಸಂಬಂಧ, ಅಭಿಮಾನ ಅಂತಾರಲ್ಲಾ ಇಷ್ಟೇನೇ ಅದರ ಬೆಲೆ? ಈಗಿನ ಬಾಂಧವ್ಯಗಳೆಲ್ಲಾ ತಮಗೆ ಲಾಭವಿರುವವರಗೇನೆ? ರೆಕ್ಕೆ ಬಂದ ಪಕ್ಷಿಗಳು ಗೂಡನ್ನು ಬಿಟ್ಟು ಹೋದಂತೆ ಒಂದು ಮನೆಯಲ್ಲಿ ಹುಟ್ಟಿ ಬೆಳೆದವರು ಅವಕಾಶ ಬಂದಕೂಡಲೇ ತಮ್ಮ ದಾರಿ ತಾವು ನೋಡಿಕೊಳ್ಳುವುದೇ?

ತನ್ನೊಂದಿಗೆ ಮಾತನಾಡಲು ಇಷ್ಟವಿಲ್ಲದವರು ತನ್ನ ಮನೆಗೇಕೆ ಬರ ಬೇಕು? ಇವರಿಗೋಸ್ಕರ ಇಷ್ಟು ಕಷ್ಟಪಟ್ಟ ತಾನು ಕೆಟ್ಟವನು. ಅತ್ತಿಗೆ ಒಳ್ಳೆ ಯವಳೇ? ತನ್ನೊಂದಿಗಿಲ್ಲದ ಸಂಬಂಧ ತನ್ನ ಹೆಂಡತಿಯೊಂದಿಗೆ ಮಾತ್ರ ಏಕೆ ಇರಬೇಕು?

"ಏಕೆ ತಗೊಂಡೆ? ವಾಪಸ್ ತಗೊಂಡು ಹೋಗು ಅನ್ನಬೇಕಾಗಿತ್ತು." ಗದರಿಸಿದ ಶ್ರೀಹರಿ.

"ಯಾಕೆ ಹಾಗಂತೀರಿ? ಅಷ್ಟು ಖರ್ಚಿನಲ್ಲಿದ್ದೂ ಅಭಿಮಾನದಿಂದ ತಂದಿದಾಳೆ...."

"ಅವಳು ಕಂಡೋರ ದುಡ್ಡಿನಲ್ಲಿ ಅಭಿಮಾನದಿಂದ ತಂದರೆ ನೀನು ಸಂತೋಷ ದಿಂದ ತಗೋತೀಯಾ? ಅವಳಿಗೆ ನಾಚಿಕೆಯಿಲ್ಲದಿದ್ದರೆ ನಿನಗೂ ಇಲ್ಲವೇನು?" ಕೋಪದಿಂದ ಹಲ್ಲುಕಡಿದ ಶ್ರೀಹರಿ.

"ಛಿ! ಬಿಡತು ಅನ್ನಿ. ಹಾಳು ಮಾತಾಡಬೇಡಿ. ಜಾನಕಿ ಅಂಥಾವಳಲ್ಲ" ಕನಕ ನೊಂದುಕೊಳ್ಳುತ್ತಾ ನುಡಿದಳು.

"ಹೌದೌದು. ಜಾನಕೀನೂ ಅಂತಹವಳಲ್ಲ. ಶಾಂತಾನೂ ಅಂತಹವ ಳಲ್ಲ. ಜನಕ್ಕೇ ಬಾಯಿ ಸುಮ್ಮನಿರಲಾರದೆ ನಿನ್ನೆ ನಾದಿನಿಯರ ಮೇಲೆ

ಅಪಪ್ರಚಾರ ಮಾಡುತ್ತಿದಾರೆ, ಅಲ್ಲವೆ? ಎರಡು ತಿಂಗಳಿಂದ ಈ ಮಾತು ಕೇಳ ವಾರದೆ ಮನೆಯಲ್ಲಿ ಕುಳಿತು ಕಿವಿ ಮುಚ್ಚಿಕೊಂಡಿದ್ದೆ. ಬೆಕ್ಕು ಕಣ್ಣು ಮುಚ್ಚಿ ಕೊಂಡ ಮಾತ್ರಕ್ಕೆ ಊರು ಕತ್ತಲಾಗುತ್ತದೆಯೇ? ಈ ದಿನ ಹೊರಗೆ ಹೋದ ಕೂಡಲೇ "ಏನಯ್ಯ ಅಕ್ಕತಂಗಿಯರಿಗೆ ಬುದ್ಧಿ ಹೇಳಿ ಮನೆಗೆ ಕರೆತರೋದಕ್ಕೆ ಬದಲು ಅವನೊಂದಿಗೆ ತಿರುಗಲಿ ಅಂತ ಇನ್ನೊಬ್ಬಳನ್ನೂ ಕಳುಹಿಸಿದೆಯಾ? ಎಂದು ಎಲ್ಲರೂ ಮುಖದಮೇಲೆ ಕೇಳುತ್ತಿದ್ದರೆ ಏನು ಹೇಳೋಂತೀಯಾ?.... ಇನ್ನು ಈ ಊರಿನಲ್ಲಿ ನಾನಿರಲಾರೆ ಕನಕ. ಇವರೆಲ್ಲರಿಂದ ದೂರ ಹೋಗಬೇಕು. ಅದುವರೆವಿಗೂ ನನಗೆ ಸುಖವಿಲ್ಲ."—ಆವೇಶದಿಂದ ಗಟ್ಟಿಯಾಗಿ ಹೇಳುತ್ತಾ ಹೊರಗೆ ಬಂದ ಶ್ರೀಹರಿ.

ಹೊಸಿಲುದಾಟಿ ನಾಲ್ಕು ಹೆಜ್ಜೆ ಹಾಕಿದ ಜಾನಕಿಗೆ, ಆ ರೀತಿ ಹೊರಟು ಹೋಗಲು ಮನಸ್ಸೊಪ್ಪಲಿಲ್ಲ. ಮನೆಗೆ ಬಂದು ತಾಯಿಯನ್ನೂ ಅಣ್ಣನನ್ನೂ ನೋಡದೆ ಹೋಗುವುದು ಮಿಕ್ಕ ಸ್ವಲ್ಪ ಅಭಿಮಾನವನ್ನೂ ಕೈಯಾರೆ ಕಡಿದು ಕೊಂಡಂತೆ ಅನ್ನಿಸಿತು. ಸರಿ, ನೋಡಿಯೇ ಹೋಗೋಣ ಎಂದು ಹಿಂತಿರುಗಿ ಮನೆಯೊಳಕ್ಕೆ ಹೆಜ್ಜೆ ಇಡುತ್ತಿರುವಾಗಲೇ ಶ್ರೀಹರಿ ಆವೇಶದಿಂದ ಗಟ್ಟಿಯಾಗಿ ಹೇಳುತ್ತಿದ್ದ ಮಾತು ಅವಳ ಕಿವಿಯಮೇಲೆ ಬಿತ್ತು. ಅವಳ ಹೆಜ್ಜೆ ತಡೆಯಿತು. ಆಯಿತಲ್ಲಾ ಬಂದ ಕೆಲಸ! ಎನ್ನಿಸಿತು.

* * *

ಕಾಲವನ್ನು ಗಂಟೆ, ದಿನ, ತಿಂಗಳು ವರ್ಷಗಳಿಂದ ಅಳೆಯುತ್ತಾರೆ. ಜೀವನವನ್ನು ಅನುಭವ, ಸಂಘಟನೆ, ಸುಖ, ದುಃಖಗಳಿಂದ ಅಳೆಯುತ್ತಾರೆ. ಒಂದು ವರ್ಷ ಕಳೆಯಿತೆಂದರೆ ಆ ಸಮಯದಲ್ಲಿ ನಡೆದ ಒಳಿತು, ಕೆಡಕು ಸಂಘಟನೆಗಳು ಬಾಳಿನ ಗಮನವನ್ನು ಅಳೆದು ತೋರಿಸುವ ಅಳತೆಗೋಲಿನಂತೆ ಇರುತ್ತವೆ.

ಕೆಲವರ ಜೀವನ ಎಷ್ಟು ಕಾಲ ಕಳೆದರೂ ಅದರ ಉದ್ದವನ್ನಾಗಲೀ ಕಾಲಪರಿಮಿತಿಯನ್ನಾಗಲೀ ತಿಳಿಸುವ ಸಾಧನವಿಲ್ಲವೆಂಯೋ ಮುಂದಕ್ಕೆ ಹೋಗು ತ್ತದೆ. ಅವರ ಜೀವನ ಭ್ರಮಣದಲ್ಲಿ ನಿನ್ನೆಗೂ, ಈ ದಿನಕ್ಕೂ ವ್ಯತ್ಯಾಸವಿರದು. ಕಳೆದ ವರ್ಷಕ್ಕೂ, ಬರುವ ವರ್ಷಕ್ಕೂ ವ್ಯತ್ಯಾಸವಾಗಲೀ, ಆ ಮಧ್ಯಕಾಲದಲ್ಲಿ ಬೆಳೆದ ಮನೋವಿಕಾಸವಾಗಲೀ ಇರದು.

ಮತ್ತೆ ಕೆಲವರು ಬಾಳಿನಲ್ಲಿ ಹೆಜ್ಜೆಗೆ ಅಷ್ಟು ದೂರವಾಗಿ ಪ್ರಯಾಣಿಸುತ್ತಾ ದಾರಿಯುದ್ದಕ್ಕೂ ಅನುಭವಗಳ ಗುರುತು ಹಾಕಿಡುತ್ತಾ, ಸ್ವಲ್ಪ ದೂರ

ಪ್ರಯಾಣಿಸಿದಮೇಲೆ, ನಾವೆಷ್ಟು ದೂರ ನಡೆದಿವಿ ಎಂದು ಹಿಂದಿರುಗಿ ನೋಡಿ ಕೊಳ್ಳುತ್ತಾರೆ.

ಶಾಂತವಾಗಿ ಕುಳಿತು ಕಳೆದ ದಿನಗಳನ್ನು ನೆನಪಿಗೆ ತಂದುಕೊಳ್ಳುವುದರಲ್ಲಿ ಎಷ್ಟೋ ಒಳಿತು ಇರುತ್ತದೆ. ಅವೇಶದಲ್ಲಿ ತಮ್ಮನ್ನು ತಾವು ಮರೆತ ಸಮಯ ದಲ್ಲಿ ಮಾಡಿದ ಕೆಲಸಗಳನ್ನು, ಆಡಿದ ಮಾತುಗಳನ್ನು ಅನಂತರ ಕುಳಿತು ಸ್ವಚ್ಛಮನಸಿನಿಂದ ಆಲೋಚಿಸಿದರೆ ಆ ಮಾತಾಡಿದ್ದು, ಆ ಕೆಲಸಮಾಡಿದ್ದು ತಾವೇನೇ ಎಂಬ ಆಶ್ಚರ್ಯವೂ ಉಂಟಾಗುತ್ತದೆ.

ಆತ್ಮವಿಮರ್ಶೆ ಎಲ್ಲರಿಗೂ ಆವಶ್ಯವೇ. ತಮ್ಮಲ್ಲಿನ ಲೋಪದೋಷಗಳನ್ನು ತಿಳಿದುಕೊಂಡು ಅವನ್ನು ಸರಿಮಾಡಿಕೊಳ್ಳಬೇಕೆಂಬ ಸತ್ಸಂಕಲ್ಪ ಹುಟ್ಟಿದವರಿಗೆ ಇಂತಹ ಮಾನಸಿಕ ಚರ್ಚೆ ನಿಜವಾಗಿಯೂ ಉಪಯೋಗವನ್ನುಂಟುಮಾಡು ತ್ತದೆ.

ಗತಜಲಸೇತು ಬಂಧನದಿಂದ ಲಾಭವಿಲ್ಲದಿರಬಹುದು. ಆದರೆ ಕಳೆದ ವಿಷಯಗಳನ್ನು ನೆನಪಿಗೆ ತಂದುಕೊಳ್ಳುವುದರಿಂದ ಲಾಭ ಪಡೆಯಬಹುದು. 'ತಾನು' ಎಂಬ ವ್ಯಕ್ತಿಯನ್ನು ಮುಂದೆ ನಿಲ್ಲಿಸಿ ಪರೀಕ್ಷಿಸಿದಾಗಲೇ ಒಳಿತು–ಕೆಡುಕುಗಳ ನಿರ್ಣಯಗಳು ನ್ಯಾಯವಾಗಿ ನಡೆಯುತ್ತವೆ. ಅಂತಹ ಅನುಕೂಲ ವಾತಾವರಣ ಏರ್ಪಡಬೇಕಾದರೆ, ಆ ಸಂಘಟನೆ ಜರುಗಿದ ಕಾಲಕ್ಕೂ, ವಿಚಾ ರಣೆ ನಡೆಯುವ ಸಮಯಕ್ಕೂ ಮಧ್ಯೆ ತಕ್ಕಷ್ಟು ಸಾವಕಾಶ ಇರಬೇಕು. ಆಗಲೇ ಮನುಷ್ಯ ನಿಷ್ಪಾಕ್ಷಿಕವಾಗಿ ತನ್ನನ್ನು ಕುರಿತು ತಾನು ನ್ಯಾಯ ನಿರ್ಣಯ ಮಾಡಿಕೊಳ್ಳುವ ಅವಕಾಶ ಉಂಟಾಗುತ್ತದೆ. ತಮ್ಮ ಲೋಪದೋಷಗಳನ್ನು ಯಾರ ಮುಂದಾದರೂ ಎತ್ತಿ ತೋರಿಸಿದರೆ ಯಾರಿಗಾದರೂ ಕೋಪ ಬರು ತ್ತದೆ. ಆದರೆ ಅದನ್ನೇ ತಮ್ಮಷ್ಟಕ್ಕೇ ತಾವು ತಿಳಿದುಕೊಂಡರೆ ಅವನ್ನು ತಿದ್ದಿ ಕೊಳ್ಳುವ ಅವಕಾಶ ಇರುತ್ತದೆ.

ಈ ಕಾರಣಕ್ಕಲ್ಲದಿದ್ದರೂ ಕಳೆದ ಜೀವನದಲ್ಲಿನ ಒಳಿತು–ಕೆಡಕುಗಳನ್ನು ಆಲೋಚಿಸಿಕೊಳ್ಳುವ ಅಭ್ಯಾಸ ಬಹಳ ಜನಕ್ಕಿರುತ್ತದೆ. ಜಾನಕಿ ಸಹ ಈ ತರಹ ದವರಲ್ಲಿ ಸೇರಿದವಳೇ. ಆಗಿಂದಾಗ್ಗೆ ಆಲೋಚನೆಗಳನ್ನು ಕಡಿದುಹಾಕುವುದು ಅವಳ ಸ್ವಭಾವವಲ್ಲ. ಕಳೆದ ದಿನಗಳ ಚಿತ್ರ ಕಣ್ಣಮುಂದೆ ಹಾದುಹೋಗು ತ್ತಿದ್ದಂತೆಲ್ಲಾ ಅದರಲ್ಲಿ ತನ್ನ ರೂಪವನ್ನು ನೋಡಿಕೊಳ್ಳುತ್ತಿದ್ದಳು ಜಾನಕಿ.

ಜಾನಕಿ ಅತ್ತಿಗೆಯನ್ನು ನೋಡಿ ಬಂದಮೇಲೆ ಬಹಳ ದಿನಗಳವರೆಗೂ ಪ್ರಕಾಶ ಬರಲಿಲ್ಲ. ಅನಂತರ ಒಂದು ದಿನ ಅವೇಳೆಯಲ್ಲಿ ಬಂದ. ಜಾನಕಿ ಇನ್ನೂ ಹಾಸಿಗೆಯಲ್ಲಿ ಮಲಗಿಯೇ ಇದ್ದಳು. ಕೇಳಿ ಅಭ್ಯಾಸವಾಗಿದ್ದ ಹೆಜ್ಜೆಯ

ಸಪ್ಪಳ. ಬಾಗಿಲು ತಟ್ಟಿದ ಶಬ್ದ ಕೇಳಿ ಗೋವಿಂದ ಬಾಬು ಹಿಂದಿರುಗಿ ಬಂದರೇ, ಬಂದರೂ ಈ ಸಮಯದಲ್ಲಿ ತಮ್ಮ ಮನೆಗೆ ಬರಬೇಕಾದ ಕಾರಣವಿಲ್ಲವಲ್ಲಾ ಎಂದುಕೊಂಡಳು. ಆಗಾಗ ಬರುವ ಎರಡನೆಯ ವ್ಯಕ್ತಿ ಪ್ರಕಾಶ. ಆದರೆ ಪ್ರಕಾಶ ಎಂದೂ ಇಂತಹ ಸಮಯದಲ್ಲಿ ಬರುವುದಿಲ್ಲ. ಮತ್ತೆ ಯಾರು ಬಂದಿರಬಹುದು? ಇನ್ನೂ ಬೆಳಕು ಹರಿಯುವ ಮೊದಲೇ ನನ್ನೊಂದಿಗೇನು ಕೆಲಸ? ಜಾನಕಿ ಬಾಗಿಲು ತೆರೆಯುವ ಮೊದಲೇ ಹೊರಗಿನಿಂದ ಕೂಗು ಕೇಳಿಸಿತು.

"ಅಕ್ಕಾ, ನಾನು, ಬಾಗಿಲು ತೆಗಿ."

ಅದು ಪ್ರಕಾಶನ ಕಂಠ. ಜಾನಕಿ ಬಾಗಿಲು ತೆರೆದಳು. ನಿದ್ದೆಯಿಲ್ಲದೆ ಕೆಂಪಾದ ಕಣ್ಣು, ಕೆದರಿದ ಕ್ರಾಪು, ನಲುಗಿದ ಉಡುಪು. ಪ್ರಕಾಶನನ್ನು ನೋಡಿ ಜಾನಕಿಗೆ ಗಾಬರಿಯಾಯಿತು.

ತಿಂಗಳ ಹಿಂದೆ ಪ್ರಕಾಶ ವಿಶಾಖಪಟ್ಟಣದಲ್ಲಿ ಒಂದು ಬುಕ್‌ಸ್ಟಾಲ್ ಇಡುತ್ತಿದೀನಿ ಅಂತ ಹೇಳಿದ್ದ.

"ಅಪ್ಪಣ್ಣನ ಅಳಿಯ ತನ್ನ ಭೂಮಿಯನ್ನು ಮಾರಿದ ಹಣ ವ್ಯಾಪಾರ ದಲ್ಲಿ ಹಾಕಬೇಕೆಂದಿದಾನೆ. ನಾನು ಇಲ್ಲಿನ ಅಂಗಡಿ ಅಡವಿಟ್ಟು ಸ್ವಲ್ಪ ಹಣ ಸಾಲ ತೆಗೆದುಕೊಂಡಿದೀನಿ. ಇಬ್ಬರೂ ಸೇರಿ ವ್ಯಾಪಾರ ಮಾಡುತ್ತೇವೆ. ಅಲ್ಲಿ ಮಾಣಿಕ್ಯನ ಗಂಡ ಇರುತ್ತಾನೆ. ಇಲ್ಲಿ ಅಪ್ಪಣ್ಣ ಇರುತ್ತಾನೆ. ನಾನು ಅಲ್ಲಿಗೂ ಇಲ್ಲಿಗೂ ಓಡಾಡಿಕೊಂಡಿರುತ್ತೇನೆ ಅಂದಿದ್ದ. ಈ ಮಧ್ಯೆ ತನ್ನ ಕೈಕೆಳಗೆ ಇನ್ನೊಬ್ಬ ಹುಡುಗನನ್ನು ತರಪೇತು ಮಾಡುತ್ತಿದೇನೆ ಅಂದಿದ್ದ. ಧೈರ್ಯವಾಗಿ ಬದುಕಿನಲ್ಲಿ ಮುನ್ನುಗ್ಗುತ್ತಿರುವ ತಮ್ಮನ ಅಭಿವೃದ್ಧಿಯನ್ನು ನೋಡಿ ಜಾನಕಿ ಸಂತೋಷಪಟ್ಟಿದ್ದಳು.

ಅಷ್ಟರಲ್ಲಿಯೇ ಈ ಅವತಾರದಲ್ಲಿ ಪ್ರಕಾಶ ಪ್ರತ್ಯಕ್ಷವಾದುದನ್ನು ನೋಡಿ ಜಾನಕಿಗೆ ಗಾಬರಿಯಾಯಿತು. ಸಾಲ ಮಾಡಿದ ಹಣವನ್ನು ಕಳ್ಳರು ದೋಚಿ ಕೊಂಡರೇ? ಅಪ್ಪಣ್ಣನ ಅಳಿಯನೇನಾದರೂ ಮೋಸ ಮಾಡಿದನೇ? ಮೈ ಹುಷಾರಿಲ್ಲವೇ? ಇಲ್ಲಾ, ಅನಿವಾರ್ಯವಾಗಿ ಅಂಗಡಿ ಮುಚ್ಚಬೇಕಾಗಿ ಬಂತೇ? ಪ್ರಕಾಶ ಹೀಗೆ ಬರಲು ಕಾರಣವೇನು? ಜಾನಕಿಯ ಮನಸಿನಲ್ಲಿ ಕ್ಷಣಮಾತ್ರ ದಲ್ಲಿ ಸಾವಿರ ಪ್ರಶ್ನೆ ಉದ್ಭವಿಸಿದಂತಾಗಿತ್ತು.

"ಏನಪ್ಪಾ ಪ್ರಕಾಶಾ, ಏನಾಯಿತು?" ಎಂದಳು ಕಾತರದಿಂದ.

"ಅಣ್ಣಾ ಅವರು ಯಾವಾಗ ಊರುಬಿಟ್ಟು ಹೋದರು?" ಎಂದ ಪ್ರಕಾಶ, ಅವಳ ಕಾತರ ಗಮನಿಸದೆ.

"ಯಾರು ಅಣ್ಣಾವರೇ....ಅಂದರೆ ಅಮ್ಮ....ಅತ್ತಿಗೆ....ಎಲ್ಲರೂನೇ?

ಎಲ್ಲಿಗೆ ಹೋದರು?" ಎದುರುಪ್ರಶ್ನೆ ಹಾಕಿದಳು ಜಾನಕಿ.

"ನನಗೆ ತಿಳಿಯುದೂಂತಲೇ ನಿನ್ನನ್ನು ಕೇಳ್ತಿರೋದು. ವಿಶಾಖಪಟ್ಟಣದಲ್ಲಿ ಬುಕ್‌ಸ್ಟಾಲ್ ತೆಗೆಯುತ್ತಿದೀನಿ ಅಂತ ಹೇಳಿದೆನಲ್ಲಾ ಆ ಕೆಲಸದಮೇಲೆ ಹತ್ತು ದಿನಗಳಿಂದ ಅಲ್ಲಿಯೇ ಇದೀನಿ. ಈ ದಿನ ಬೆಳಿಗ್ಗೆ ತಾನೇ ಬಂದೆ. ದಾರಿಯಲ್ಲೇ ತಾನೇ, ಒಂದು ಸಲ ಅತ್ತಿಗೇನ ನೋಡಿ ಹೋಗೋಣಾಂತ ಮನೆಗೆ ಹೋದೆ. ಬೀಗ ಹಾಕಿತ್ತು. ಊರಿಗೆ ಹೋಗಿದಾರೇನೋ ಅಂದುಕೊಂಡೆ. ಎದುರು ಮನೆಯವರನ್ನು ಕೇಳಿದೆ. 'ನಿನಗೆ ಗೊತ್ತಿಲ್ಲವೇನೋ ಪ್ರಕಾಶ? ನಿಮ್ಮ ಅಣ್ಣನಿಗೆ ನರಸಣ್ಣಪೇಟೆಗೆ ವರ್ಗವಾಯಿತು. ನಾಲ್ಕು ದಿನದ ಹಿಂದೇನೇ ನಿಮ್ಮವರೆಲ್ಲಾ ಹೊರಟುಹೋದರು' ಎಂದರು. ನಿನಗೆ ಗೊತ್ತೇನೋ ಅಂತ ಇಲ್ಲಿಗೆ ಬಂದೆ" ಎಂದ ಪ್ರಕಾಶ.

"ನೀನು ಹೇಳುವವರೆಗೂ ನನಗೆ ಗೊತ್ತಿಲ್ಲಪ್ಪಾ" ಎಂದಳು ಜಾನಕಿ.

ಒಂದು ಮಾತಾದರೂ ಹೇಳದೆ ಅಣ್ಣ ಊರು ಬಿಟ್ಟು ಹೋದದ್ದು ಜಾನಕಿಗೆ ತುಂಬಾ ನೋವನ್ನುಂಟು ಮಾಡಿತ್ತು. ಪ್ರಕಾಶನ ಹತ್ತಿರ ಅಡ್ರೆಸ್ ತೆಗೆದುಕೊಂಡು ಅಣ್ಣನಿಗೆ ಕಾಗದ ಬರೆದಳು. ಒಂದು ವಾರದ ನಂತರ ಶ್ರೀಹರಿಯಿಂದ ಜವಾಬು ಬಂತು:

"ನಿಮ್ಮ ಮೇಲೆ ನನಗೇನೂ ಕೋಪವಿಲ್ಲ ಜಾನಕಿ. ನಿಮ್ಮ ಬದುಕು ನೀವು ಬದುಕುತ್ತಿದೀರಿ. ನನ್ನ ಆವಶ್ಯಕತೆ ನಿಮಗೇನಿಲ್ಲ. ಇನ್ನು ನಿಮ್ಮನ್ನು ಹಳೆಯ ಭಾವನೆಗಳಿಂದ ಬಾಧೆ ಪಡಿಸುವುದು ಸರಿಯಲ್ಲ. ಅಭ್ಯುದಯ ಭಾವನೆಗಳಿಂದ ಹೊಸ ದಾರಿಯಲ್ಲಿ ಮುಂದಮುಂದಕ್ಕೆ ಹೋಗಬೇಕೆಂಬ ಓಟದಲ್ಲಿದ್ದೀರಿ ನೀವು. ಹುಟ್ಟಿ ಬೆಳೆದ ಸಮಾಜವನ್ನು, ರಕ್ತದಲ್ಲಿ ಜೀರ್ಣಿಸಿಕೊಂಡ ಅಭ್ಯಾಸವನ್ನು ಕಿತ್ತೆಸೆಯುವ ಸ್ಥೈರ್ಯ ನನಗಿಲ್ಲ. ಅವುಗಳ ಮಧ್ಯದಲ್ಲಿಯೇ ನನ್ನ ಬದುಕು ಯಾವ ಕಷ್ಟಗಳಿಲ್ಲದೆಯೇ ನಡೆದುಹೋಗುತ್ತದೆಯೆಂಬ ನಂಬಿಕೆಯಿಂದ ನಾನು ಈ ಸ್ಥಳವನ್ನು ಬಿಡಲಾರದ ವ್ಯಾಮೋಹವನ್ನು ಬೆಳೆಸಿಕೊಂಡೆ.

ನಮ್ಮ ಮಧ್ಯೆ ಈ ದೂರ ದಿನದಿನಕ್ಕೆ ಹೆಚ್ಚಾಗುತ್ತದೆಯೇ ಹೊರತು ಕಡಿಮೆಯಾಗುವ ದಾರಿಯಿಲ್ಲ. ಮಾನಸಿಕವಾಗಿ ಏರ್ಪಟ್ಟ ಈ ದೂರವನ್ನು ಅಂಗೀಕರಿಸಬೇಕಾದರೆ ಭೌತಿಕವಾಗಿಯೂ ಸಹ ಸ್ವಲ್ಪ ದೂರದಲ್ಲಿರಬೇಕಾದ್ದು ಒಳ್ಳೆಯದೆನ್ನಿಸಿ ಇಲ್ಲಿಗೆ ಬಂದೆ. ಅಷ್ಟೇ ಹೊರತು ಮತ್ತೇನಿಲ್ಲ."

ಅನಂತರ ಜಾನಕಿ ಬರೆದ ಕಾಗದಗಳಿಗೆ ಶ್ರೀಹರಿಯಿಂದ ಜವಾಬು ಬರಲಿಲ್ಲ. ತನಗೆ ಬರೆಯಬೇಕಾದ್ದು ಇನ್ನೇನೂ ಇಲ್ಲವೆಂಬುದು ಅಣ್ಣನ ಅಭಿಪ್ರಾಯವೆಂದು ಭಾವಿಸಿ ಜಾನಕಿ ಸುಮ್ಮನಾದಳು.

ಆಗಾಗ ಪ್ರಕಾಶನಿಗೆ ಕಾಗದ ಬರುತ್ತಿತ್ತು. ವಿಷಯುಗಳನ್ನು ಜಾನಕಿಗೆ ಹೇಳುತ್ತಿದ್ದ.

'ಅತ್ತಿಗೆಗೆ ಮೈ ಹುಷಾರಿಲ್ಲವಂತೆ. ಅಮ್ಮನಿಗೆ ವಾತದ ನೋವಿನಿಂದ ಏಳಲಾಗದಂತಿದೆಯಂತೆ.'

'ಅಣ್ಣನ ಕೆಲಸ ಮೆಚ್ಚಿ ಆಫೀಸ್‌ನಲ್ಲಿ ಎರಡು ಇಂಕ್ರಿಮೆಂಟ್ ಕೊಟ್ಟರಂತೆ. ಅತ್ತಿಗೆ ಮತ್ತೆ ಬಸುರಿಯಂತೆ.'

'ಮನೆಗೆ ಕಳ್ಳರು ಬಿದ್ದು ಚಿಕ್ಕಪುಟ್ಟ ಸಾಮಾನು, ನೂರು ರೂಪಾಯಿನವರೆಗೂ ಹೋಯಿತಂತೆ.'

'ಮಗೂಗೆ ಜ್ವರ ಬರುತ್ತಿದೆಯಂತೆ. ಔಷಧಿ ಕೊಡಿಸುತ್ತಿದಾರಂತೆ'— ಹೀಗೆ ಕಾಗದ ಬಂದಾಗಲೆಲ್ಲಾ ಹೇಳುತ್ತಿದ್ದ ಪ್ರಕಾಶ.

ಕೇಳಿ ವ್ಯಥೆ ಪಡುವುದೂ, ಸಾಧ್ಯವಾದಾಗ ಪ್ರಕಾಶನ ಮೂಲಕ ಹತ್ತೋ ಹದಿನೈದೋ ಹಣ ಕಳುಹಿಸುವುದರ ಹೊರತು ಜಾನಕಿ ಮಾಡುವುದೇನೂ ಇರಲಿಲ್ಲ. ಅದೂ ಸಹ ಹೆಚ್ಚು ಸಲ ಸಾಧ್ಯವಾಗುತ್ತಿರಲಿಲ್ಲ. ಒಂದೊಂದು ಸಲ ಶಾಂತನ ಕಾಲೇಜು ಫೀಸಿಗೆ ಪ್ರಕಾಶನನ್ನು ಕೇಳಬೇಕಾಗಿ ಬರುತ್ತಿತ್ತು.

"ಇದರಲ್ಲಿ ಸಂಕೋಚಪಡುವ ಕಾರಣವೇನಿಲ್ಲಕ್ಕಾ ಶಾಂತನಿಗೆ ನೀನೆಷ್ಟೋ ನಾನೂ ಅಷ್ಟೆ. ಮನೆಮಠವಿಲ್ಲದ ಹುಡುಗನಾದ್ದರಿಂದ ನನ್ನ ಹತ್ತಿರ ಇಟ್ಟುಕೊಳ್ಳಲಾಗಲಿಲ್ಲ. ನಿನಗೆ ಅವಕಾಶವಿದೆಯಾದ್ದರಿಂದ ಇಟ್ಟುಕೊಂಡಿದ್ದಿ. ಹಣದ ವಿಷಯದಲ್ಲಿ ಇಬ್ಬರಿಗೂ ಸಮಾನವಾದ ಹೊಣೆಯಿದೆ" ಎನ್ನುತ್ತಿದ್ದ.

ಕಾಲ ಕಳೆಯುತ್ತಿದ್ದರೂ ಶಾಂತನ ಬಗ್ಗೆ ವಿಶ್ವಾಸ ಬೆಳೆಸಿಕೊಳ್ಳಲಾರದಾದಳು ಜಾನಕಿ. ಓದು ತನ್ನ ಬದುಕಿಗೆ ಎಷ್ಟು ಅವಶ್ಯವೋ ಶಾಂತ ಗ್ರಹಿಸಿದಂತಿರಲಿಲ್ಲ. ಪುಸ್ತಕ ಮುಂದಿಟ್ಟುಕೊಂಡು ಹಗಲುಕನಸು ಕಾಣುತ್ತಿದ್ದಳು.

"ಹಗಲುಗನಸಿಗೆ ಬದುಕನ್ನು ಮುಂದಕ್ಕೆ ನಡೆಸುವ ಶಕ್ತಿಯಿಲ್ಲಮ್ಮಾ ಶಾಂತಾ. ಬಾಳಿನಲ್ಲಿ ಧೈರ್ಯವಾಗಿ ಹೆಜ್ಜೆ ಮುಂದಿಡಬೇಕಾದರೆ ಪಾದಗಳಿಗೆ ಗಟ್ಟಿನೆಲೆ ತಾಗಬೇಕು. ಗಾಳಿಯಲ್ಲಿ ಕಟ್ಟಿದ ಗೋಪುರ ನಿಲ್ಲುವುದಿಲ್ಲ. ಪಾಯ ಸರಿಯಿಲ್ಲದ ಕಟ್ಟಡ ಕುಸಿದುಬೀಳುತ್ತದೆ. ನಿನ್ನ ಬಾಳಿಗೆ ಅಡಿಗಲ್ಲು ಈ ಓದು. ಅದರಮೇಲೆ ನೀನು ತೋರಿಸುವ ಶ್ರದ್ಧೆ, ನಿನಗೆ ಮುಂದಕ್ಕೆ ದಾರಿ ತೋರಿಸುವ

ದೀಪ. ಆ ದೀಪ ಹಿಡಿದು ಸಾಗಿ ಗುರಿ ಮುಟ್ಟಬೇಕು. ಕತ್ತಲಲ್ಲಿ ತಡವರಿಸುತ್ತಾ ಮುಂದೆ ಹೋಗಬೇಡ. ಬೆಟ್ಟವಾದರೂ ಅಡ್ಡ ಬರಬಹುದು. ಹಳ್ಳದಲ್ಲಾದರೂ ಬೀಳಬಹುದು" ಎಂದು ಬೋಧಿಸುತ್ತಿದ್ದಳು ಜಾನಕಿ.

ಅಕ್ಕ ಹೇಳಿದ್ದನ್ನೆಲ್ಲಾ ಶ್ರದ್ಧೆಯಿಟ್ಟು ಕೇಳುತ್ತಿದ್ದಳು ಶಾಂತ.

'ಅಕ್ಕನಿಗೆ ಚಿಕ್ಕಮಕ್ಕಳಿಗೆ ನೀತಿಪಾಠ ಹೇಳೋದು ಅಭ್ಯಾಸವಾಗಿ ಬಿಟ್ಟಿದೆ. ಅಷ್ಟುಮಾತ್ರ ನನಗೆ ಗೊತ್ತಿಲ್ಲವೇನು? ನನ್ನ ಓದಿನ ವಿಷಯ ನಾನು ನೋಡಿಕೊಳ್ಳಲಾರೆನೇ?' ಎಂದುಕೊಳ್ಳುತ್ತಿದ್ದಳು.

ಶಾಂತನ ಓದು ತನಗೊಂದು ಸಮಸ್ಯೆಯಾಗಿ ನಿಲ್ಲುತ್ತದೆಯೆಂದು ಜಾನಕಿ ಎಂದೂ ಭಾವಿಸಿರಲಿಲ್ಲ. ಶಾಂತ ಚುರುಕುಬುದ್ಧಿಯವಳೆಂದೂ ಅವಕಾಶ ಕಲ್ಪಿಸಿದರೆ ಮುಂದೆಬರಬಲ್ಲಳೆಂದೂ ತಿಳಿದುಕೊಂಡಿದ್ದಳು. ಈಗಲೂ ತಂಗಿಯ ಜಾಣ್ಮೆಯ ಬಗ್ಗೆ ಅವಳಿಗೆ ನಂಬಿಕೆ ಸಡಲಲಿಲ್ಲ. ಆದಕ್ಕೆ ತಕ್ಕ ಶ್ರದ್ಧೆ ತೋರುತ್ತಿಲ್ಲವೆಂಬುದೇ ಅವಳ ಚಿಂತೆ.

ಶಾಂತ ಪರೀಕ್ಷೆ ಪಾಸಾದರೆ ನಂತರ ಏನು ಮಾಡಬೇಕು? ಅದೃಷ್ಟ ಚೆನ್ನಾಗಿಲ್ಲದೆ ಪಾಸಾಗದಿದ್ದರೆ ಏನು ಮಾಡಬೇಕು? ಹಗಲೂ ರಾತ್ರಿ ಜಾನಕಿಯನ್ನು ಮುತ್ತಿ ಕಾಡುತ್ತಿದ್ದ ಸಮಸ್ಯೆ ಇದು.

"ನೀನಿಷ್ಟು ಆಲೋಚನೆ ಮಾಡಬೇಕಾಗಿಲ್ಲ, ಜಾನಕಿ. ಶಾಂತ ಪಾಸಾಗುತ್ತಾಳೆ. ಬಿ.ಎಸ್ಸಿ. ಪಾಸಾದರೆ ಕೆಲಸ ಸಿಕ್ಕೋದೇನೂ ಕಷ್ಟವಲ್ಲ. ಆ ವಿಷಯ ನಾನು ನೋಡಿಕೊಳ್ಳುತ್ತೇನೆ. ನೀನೇನೂ ಆಲೋಚಿಸಬೇಡ" ಎನ್ನುತ್ತಿದ್ದರು ಅನಸೂಯಮ್ಮ.

ಶಾಂತ ಫೇಲಾದರೆ ಮತ್ತೆ ಒಂದು ವರ್ಷ ಓದಿಸಬಲ್ಲೆನೆಂಬ ಧೈರ್ಯವಿರಲಿಲ್ಲ ಜಾನಕಿಗೆ. ಗೋವಿಂದಬಾಬು ಹೊರಟುಹೋದಾಗಿನಿಂದ ಬಾಲವಿಹಾರದ ಕಾರ್ಯಕ್ರಮ ಅಸ್ತವ್ಯಸ್ತವಾಗಿತ್ತು. ಆತನ ಸ್ಥಳದಲ್ಲಿ ಹೊಸದಾಗಿ ಬಂದ ವ್ಯಕ್ತಿ ಅಹಂಭಾವಿ. ಆವೇಶ ಬಂದರೆ ತಡೆಯಲಾರ.

"ಆತ ಹೊಸದಾಗಿ ಬಂದಿದಾರೆ. ಅವರಿಗೆ ತಿಳಿಯದ ವಿಷಯಗಳಲ್ಲಿ ನೀನೂ ಸಹಾಯಮಾಡತ್ತಿರು" ಎನ್ನುತ್ತಿದ್ದರು ಅನಸೂಯಮ್ಮ.

ಜಾನಕಿ ಯಾವ ಮಾತು ಹೇಳಹೋದರೂ ಕಸಕ್ಕಿಂತ ಕಡೆಯಾಗಿ ನೋಡುತ್ತಿದ್ದರು ಆತ.

"ಈ ಆಫೀಸಿನಲ್ಲಿ ದೊಡ್ಡ–ಚಿಕ್ಕ ಎಂಬ ವ್ಯತ್ಯಾಸವೇ ಇದ್ದಂತಿಲ್ಲ. ಅವರವರ ಸ್ಥಾನದಲ್ಲಿ ಅವರವರು ಇದ್ದು ಕೆಲಸ ಮಾಡಿಕೋಬೇಕು ಅನ್ನೋ ಜ್ಞಾನಾನೆ ಇಲ್ಲ. ಎಲ್ಲಕ್ಕೂ ನಾನಿದೀನೀಂತ ತಯಾರಾಗುತ್ತಾರೆ" ಎನ್ನುತ್ತಿದ್ದ.

ದಿನಕ್ಕಿಪ್ಪತ್ತು ಸಲವಾದರೂ ಜಾನಕಿ ತನ್ನ ಕೈಕೆಳಗೆ ಕೆಲಸಮಾಡು ತ್ತಿರುವ ಸೆಕ್ರೆಟರಿ ಎಂದೂ ತನ್ನ ಅಪ್ಪಣೆಯನ್ನು ಪಾಲಿಸುವುದೊಂದೇ ಅವಳ ಕೆಲಸವೆಂದೂ, ಅದಕ್ಕೂ ಹೆಚ್ಚಾಗಿ ಬಾಲವಿಹಾರದ ವ್ಯವಹಾರಗಳಲ್ಲಿ ಕೈ ಇಡುವುದನ್ನು ತಾವು ಸಹಿಸುವುದಿಲ್ಲವೆಂದೂ ನೆನಪು ಮಾಡುತ್ತಿದ್ದ.

ಚಿಕ್ಕ-ಪುಟ್ಟ ವಿಷಯಗಳಿಗೆ ಅನಸೂಯಮ್ಮನವರನರೆವಿಗೂ ಹೋಗದೆ ತಾನೇ ನಿರ್ಣಯಿಸಿ ಕೆಲಸ ಮಾಡುವುದು ಜಾನಕಿಗೆ ಅಭ್ಯಾಸವಾಗಿತ್ತು. ಗೋವಿಂದ ಬಾಬು ಬಂದಮೇಲೂ ಈ ಅಭ್ಯಾಸಕ್ಕೆ ಅಡ್ಡಿ ಬಂದಿರಲಿಲ್ಲ.

'ಪ್ರತಿಯೊಂದು ಕೆಲಸಕ್ಕೂ ಬಾಧ್ಯತೆಯನ್ನು ಅಧಿಕಾರಿಗಳ ಮೇಲೆ ಹಾಕಿ ಕೈಕಟ್ಟಿ ಕುಳಿತುಕೊಳ್ಳುವುದೆಂದರೆ ನನಗೆ ಸೇರದು, ಜಾನಕಿ. ತಮ್ಮಿಂದಾದ ಷ್ಟನ್ನೂ ತಾವೂ ಮಾಡುತ್ತಾ ಮಿಕ್ಕದ್ದನ್ನು ಮೇಲಿನವರಿಗೆ ಬಿಟ್ಟರೆ ಕೆಲಸ ಸುಗಮವಾಗಿ ಕಾಲಹರಣವಿಲ್ಲದೆ ನಡೆಯುತ್ತದೆ. ಆಫೀಸಿನಲ್ಲಿ ನಡೆಯುತ್ತಿರು ವುದೇನೆಂದು ಎಲ್ಲರಿಗೂ ತಿಳಿಯುತ್ತದೆ' ಎನ್ನುತ್ತಿದ್ದ ಗೋವಿಂದಬಾಬು.

ಈ ಹೊಸಬ ಅದಕ್ಕೆ ಪೂರ್ತಿ ವಿರುದ್ಧವಾಗಿದ್ದ. ಆತ ಬಂದ ಮೇಲೆ ಅನಸೂಯಮ್ಮ ಸಹ ತಮ್ಮ ಅಭ್ಯಾಸಗಳನ್ನು ಬದಲಿಸಿಕೊಂಡಿದಾರೇನೋ ಅನ್ನಿಸುತ್ತಿತ್ತು ಜಾನಕಿಗೆ. ಬಾಲವಿಹಾರದಲ್ಲಿ ಆತ ಮಾಡುತ್ತಿದ್ದ ಅರ್ಥವಿಲ್ಲದ ಬದಲಾವಣೆ, ಶಿಸ್ತಿನ ಹೆಸರಿನಲ್ಲಿ ಮಕ್ಕಳ ಮೇಲೂ, ಕೈಕೆಳಗಿನ ನೌಕರರ ಬಗ್ಗೆಯೂ ಆತ ನಡೆದುಕೊಳ್ಳುತ್ತಿದ್ದ ರೀತಿ, ಅನಸೂಯಮ್ಮನ ದೃಷ್ಟಿಯಲ್ಲಿ ಬೀಳಲಿಲ್ಲವೆಂದು ಹೇಳಲಾಗುತ್ತಿರಲಿಲ್ಲ. ಎಲ್ಲಾ ನೋಡುತ್ತಾ ಆಕೆ ಸುಮ್ಮನೆ ಇದಾರೆಂದರೆ ಆಕೆಗೆ ಆತನ ಮೇಲೆ ಒಳ್ಳೆಯ ಅಭಿಪ್ರಾಯ ಏರ್ಪಟ್ಟಿರಬೇಕೆಂದು ಕೊಂಡಳು ಜಾನಕಿ.

ಒಂದೆರಡು ಸಲ ತಾನಾಗಿ ಆಫೀಸಿನಲ್ಲಿ ನಡೆಯುತ್ತಿದ್ದ ವಿಷಯಗಳನ್ನು ಅನಸೂಯಮ್ಮನವರಿಗೆ ಹೇಳಿ ನೋಡಿದಳು ಜಾನಕಿ. ಬಾಲವಿಹಾರದ ಅಧಿಪತಿ ಗಳ ಒಳ್ಳೆಯತನಕ್ಕೂ, ಮರ್ಯಾದೆಗೂ ಒಗ್ಗಿಕೊಂಡಿದ್ದ ನೌಕರರು, ಆಯಾ ಗಳು ಈತನ ಕೆಳಗೆ ಹೆಚ್ಚು ದಿನ ಕೆಲಸ ಮಾಡುವಂತಿಲ್ಲವೆಂದು ಸೂಚಿಸಿದಳು.

ಜಾನಕಿ ಹೇಳಿದ್ದನ್ನೆಲ್ಲಾ ಮೌನವಾಗಿ ಕೇಳಿದ್ದರು ಅನಸೂಯಮ್ಮ. "ಆತ ವೃದ್ಧ. ಅನುಭವಶಾಲಿ. ಈ ಸಂಸ್ಥೆಯನ್ನು ಸರಿಯಾದ ಮಾರ್ಗದಲ್ಲಿ ನಡೆಸಲು ನನ್ನ ಸರ್ವಶಕ್ತಿಯನ್ನೂ ಉಪಯೋಗಿಸುತ್ತೇನೆ ಎಂದ. ನಾವು ಇನ್ನೊಬ್ಬರನ್ನು ಕುರಿತು ಯಾವುದಾದರೂ ನಿರ್ಣಯವನ್ನು ಮಾಡುವಾಗ ಸ್ವಲ್ಪ ಆಲೋಚಿಸಬೇಕು, ಜಾನಕಿ" ಎಂದರಾಕೆ.

ಅನಂತರ ಅನಸೂಯಮ್ಮನೊಂದಿಗೆ ಯಾವ ವಿಷಯವನ್ನೂ ಪ್ರಸ್ತಾಪಿಸ

ಲಿಲ್ಲ ಜಾನಕಿ. ಆದರೆ ಅಲ್ಲಿ ನಡೆಯುತ್ತಿದ್ದ ಬದಲಾವಣೆ, ತನ್ನ ಬಗ್ಗೆ ಆ ವೃದ್ಧ ಆಫೀಸರು ಬೆಳೆಸಿಕೊಂಡ ಭಾವನೆಗಳನ್ನು ನೋಡಿ ತಾನು ಇನ್ನು ಹೆಚ್ಚು ಕಾಲ ಬಾಲವಿಹಾರದಲ್ಲಿ ಕೆಲಸ ಮಾಡುವುದು ಸಾಧ್ಯವಿಲ್ಲವೆಂದು ನಿಶ್ಚಯಿಸಿಕೊಂಡಳು. ಇನ್ನೊಂದು ಕೆಲಸ ಸಂಪಾದಿಸಬೇಕಾದರೆ ಅಷ್ಟು ಸುಲಭವಲ್ಲ. ಎಂತೆಂತಹ ಓದಿದವರಿಗೇ ಕೆಲಸ ಸಿಕ್ಕದಿರುವಾಗ ತನ್ನಂತಹವರಿಗೆ ಈ ಕಾಲದಲ್ಲಿ ಕೆಲಸ ಸಿಕ್ಕುವುದು ಎಷ್ಟು ಕಷ್ಟ!

ಹೋಗಲಿ, ಶಾಂತನಿಗಾದರೂ ಕೆಲಸ ಸಿಕ್ಕರೆ ಅದೊಂದು ಆಸರೆಯೆನ್ನಿಸು ತ್ತಿತ್ತು. ಆದ್ದರಿಂದಲೇ ಶಾಂತನ ಓದು ಈ ವರ್ಷ ಪೂರ್ತಿಯಾಗಲೇಬೇಕೆಂಬ ಕೋರಿಕೆ ಜಾನಕಿಯಲ್ಲಿ ಬಲವಾಗಿ ಬೇರೂರಿತ್ತು.

ಈ ಕೆಲಸ ಹೋದರೆ ತಮ್ಮ ಗತಿ ಏನು ಎಂಬ ಚಿಂತೆ ಅವಳನ್ನು ಕಾಡುತ್ತಿತ್ತು. ಅಣ್ಣನ ಮನೆಯ ಬಾಗಿಲು ತಮಗೆಂದೋ ಮುಚ್ಚಿಹೋಗಿತ್ತು. ಮಿಕ್ಕಿದ್ದು ಪ್ರಕಾಶ. ಆ ಹೊಸ ಬುಕ್‌ಸ್ಟಾಲ್ ತೆಗೆದಾಗಿನಿಂದ ಸಾಲ ಹೆಚ್ಚಾಗಿ ಹಣಕ್ಕೆ ಅವನಿಗೇ ಸ್ವಲ್ಪ ಕಷ್ಟವಾಗಿತ್ತು. ಅದೂ ಅಲ್ಲದೆ ಪ್ರತಿ ತಿಂಗಳೂ ಅಣ್ಣ ಶ್ರೀಹರಿಗೆ ಇಷ್ಟೋ ಅಷ್ಟೋ ಹಣ ಕಳುಹಿಸುತ್ತಲೇ ಇದ್ದ.

ಒಂದು ದಿನ ಪ್ರಕಾಶ ನಗುತ್ತಾ ಅದೇ ಮಾತು ಹೇಳಿದ್ದ:

"ಅಣ್ಣ ಕೋಪದಲ್ಲಿ ವ್ಯಂಗ್ಯವಾಗಿ ಹೇಳಿದ್ದರೂ ಅದೇ ನಿಜವಾಯಿತಕ್ಕ. 'ನೀನು ಬೀದಿ ಬೀದಿ ತಿರುಗಿ ಪೇಪರ್ ಮಾರಿ ಹಣ ಸಂಪಾದಿಸಿ ನನಗೆ ಕೊಡುತ್ತಿ. ನಾನು ನನ್ನ ತಮ್ಮ ಕಳುಹಿಸಿದಾಂತ ಎರಡು ಕೈಲೂ ಬಾಚಿ ಕೊಳ್ತೀನಿ' ಅಂತ. ಈ ನಡುವೆ ಪ್ರತಿ ತಿಂಗಳೂ ಅಣ್ಣ ತಮ್ಮನ ಹಣ ಇಷ್ಟೋ ಅಷ್ಟೋ ಮುಟ್ಟದೆ ದಿನಗಳೆಯುತ್ತಿಲ್ಲ" ಎಂದಿದ್ದ.

ಇಂತಹ ಪರಿಸ್ಥಿತಿಯಲ್ಲಿ ತಾವಿಬ್ಬರೂ ಅವನ ಮೇಲೆ ಭಾರಹಾಕುವುದು ಅಸಾಧ್ಯ. ಅಯೋಮಯವಾಗಿದ್ದ ಪರಿಸ್ಥಿತಿಯಲ್ಲಿ ಭವಿಷ್ಯದಲ್ಲಿ ಆಶಾದೀಪದಂತೆ ಕಾಣುತ್ತಾ ಒಂದೇ ಒಂದು ಕಿರಣ ಮೇಲೆಮೇಲೆ ಜಾನಕಿಯ ಮನಸಿನಲ್ಲಿ ಮಿಂಚುತ್ತಿತ್ತು.

ಗೋವಿಂದ ಬಾಬು ಬಾಲವಿಹಾರ ಬಿಟ್ಟುಹೋಗುವ ಮುಂಚೆ ಒಂದು ಸಾಯಂಕಾಲ ಇಬ್ಬರೂ ಹೂಗಿಡಗಳ ಮಧ್ಯೆ ನಡೆಯುತ್ತಿದ್ದರು. ಒಂದು ಸೂರ್ಯಕಾಂತಿ ಗಿಡ ಹುಳು ಕೊರೆದ ಕಾರಣದಿಂದ ಬಾಡಿಹೋಗಿತ್ತು. ವಿಕಸಿಸಿದ ಹೂ, ಬಿರಿಯುತ್ತಿದ್ದ ಮೊಗ್ಗು, ರಕ್ಷಕದಳಗಳ ಮಧ್ಯೆ ಆಗತಾನೇ ಇಣಿಕಿ ನೋಡುತ್ತಿದ್ದ ಕಾಸುಮೊಗ್ಗುಗಳು ಎಲ್ಲಾ ಗಿಡದೊಂದಿಗೇ ಬಾಡಿಹೋಗಿದ್ದುವು.

ಅದನ್ನು ನೋಡಿ ತುಂಬಾ ನೊಂದುಕೊಂಡ ಬಾಬು. "ನಿನ್ನೆ ಹಸಿರಾಗಿ ಹೂಗಳಿಂದ ತುಂಬಿ ನಳನಳಿಸುತ್ತಿದ್ದ ಗಿಡ ಒಂದೇ ದಿನದಲ್ಲಿ ಹೇಗಾಗಿಬಿಟ್ಟಿದೆ"

"ಗೋವಿಂದ ಬಾಬೂ, ಆಗಾಗ ನೀವು ನೋಡುತ್ತಿರುವ ಹೂಗಿಡ ಬಾಡಿದರೇನೇ ಇಷ್ಟು ವ್ಯಥೆಪಡುತ್ತಿದ್ದಿರಲ್ಲಾ, ನಮ್ಮ ಸುತ್ತಲೂ ಬೆಳೆಸಿನಿಂತ ಇಷ್ಟೊಂದು ಮಕ್ಕಳನ್ನು ಹೇಗೆ ಬಿಟ್ಟುಹೋಗುತ್ತಿದೀರಿ? ನಿಮ್ಮ ಸಾಮಿಪ್ಯ ದಿಂದಾಗಿ ಅವರೆಲ್ಲಾ ಎಷ್ಟು ಆನಂದಪಡೆಯುತ್ತಿದಾರೆಂಬುದು ನಿಮಗೆ ತಿಳಿ ಯದು. ನೀವು ಹೊರಟುಹೋದರೆ ಅವರೆಷ್ಟು ವ್ಯಥೆಪಡುತ್ತಾರೋ ನೀವು ಎಂದಾದರೂ ಆಲೋಚಿಸಿದೀರಾ?" ಎಂದಳು ಜಾನಕಿ.

"ಚಿಕ್ಕಮಕ್ಕಳು ತಮ್ಮ ಚಿಂತೆಯನ್ನು ಬಹಳ ಬೇಗ ಮರೆತುಬಿಡುತ್ತಾರೆ, ಜಾನಕಿ. ನಾನು ಹೊರಟುಹೋದರೆ ಅವರಿಗೆ ಇನ್ನೊಬ್ಬ ಅಣ್ಣ ಬರುತ್ತಾನೆ. ಆತನೊಂದಿಗೂ ಇಷ್ಟೇ ಪ್ರೀತಿಯಿಂದ ನಡೆದುಕೊಳ್ಳುತ್ತಾರೆ ಅವರು."

"ಹಾಗೆ ನಡೆದರೆ ಸಂತೋಷಾನೇ. ಅನಸೂಯಮ್ಮನವರ ಆರೋಗ್ಯ, ಆಕೆ ಮೊದಲಿನಂತೆ ಓಡಾಡಿಕೊಂಡು ಕೆಲಸಕಾರ್ಯ ಮಾಡಿಕೊಳ್ಳಲು ಅವಕಾಶ ಕೊಡುವುದಿಲ್ಲ. ಹೊಸದಾಗಿ ಬರುವಾತ ಒಳ್ಳೆಯವನಾದರೆ ಪರವಾಗಿಲ್ಲ. ಇಲ್ಲವಾದರೆ ದೇವರೇ ಗತಿ. ಎಲ್ಲರೂ ನಿಮ್ಮಂತಹ ಸಹೃದಯರೇ ಆಗಿರುವುದಿಲ್ಲ. ಹಣಕ್ಕೋಸ್ಕರ ಕೆಲಸ ಮಾಡುವವರಿಗೆ ಈ ಸಂಸ್ಥೆಯ ಬಗ್ಗೆ, ಈ ಮಕ್ಕಳ ಬಗ್ಗೆ, ನಿಮಗಿರುವಂಥ ಅನುಬಂಧವಿರುವುದಿಲ್ಲ. ನಿಮ್ಮ ಪರಿಚಯ ವಾಗುವ ಮುನ್ನ ನನ್ನ ಅಭಿಪ್ರಾಯವೂ ಅದೇ ರೀತಿ ಇತ್ತು. ಈಗ ಇದು ಕಡಿದುಕೊಳ್ಳಲಾರದಂತಹ ಮಧುರವಾದ ಅನುಬಂಧವಾಗಿದೆ. ಆತ್ಮೀಯತೆ ತಾನೇತಾನಾಗಿದೆ. ಈ ಸಂಸ್ಥೆ ಅಭಿವೃದ್ಧಿಯಾಗಬೇಕೆಂದೂ, ಇಲ್ಲಿನ ಮಕ್ಕಳು ಆನಂದದಿಂದಿರಬೇಕೆಂದೂ ಸದಾ ಹಾರೈಸುತ್ತಿರುತ್ತೇನೆ."

"ನಿಮಗೆ ನನ್ನ ಮೇಲಿರುವ ಅಭಿಮಾನದಿಂದ ಹಾಗೆ ಹೇಳುತ್ತಿದೀರಷ್ಟೆ. ನಾನು ಹೊರಟುಹೋದರೆ ಇಲ್ಲಿನ ಕೆಲಸಕಾರ್ಯ ನಿಂತುಹೋಗುತ್ತದೆಯೆಂಬ ಭಯ ನನಗಿಲ್ಲ. ಆದರೆ ಈ ಮಕ್ಕಳನ್ನು ಬಿಟ್ಟುಹೋಗುವುದು ನನಗೂ ಕಷ್ಟ ವಾಗಿಯೇ ಇದೆ. ಮತ್ತೆ ವಾಪಸು ಬರಲು ಪ್ರಯತ್ನಿಸುತ್ತೇನೆ. ಸಾಧ್ಯವಾದರೆ ಈ ಸಲ ಇಲ್ಲಿಯೇ ಇದ್ದುಬಿಡುವ ಏರ್ಪಾಡು ಮಾಡಿಕೊಂಡು ಬರುತ್ತೇನೆ. ಇಷ್ಟರಲ್ಲಿ ನಾನಿಲ್ಲಿರಬೇಕಾದ ಅವಶ್ಯಕತೆ ನಿಮಗೇನಾದರೂ ಕಂಡರೆ ಕೂಡಲೇ ಉತ್ತರ ಬರೆಯಿರಿ, ತಪ್ಪದೆ ಬರುತ್ತೇನೆ" ಎಂದಿದ್ದ ಆತ.

ಆ ಮಾತು ನೆನಪಾದಕೂಡಲೇ ಕಾಗದ ಪೆನ್ನು ಕೈಗೆ ತೆಗೆದುಕೊಂಡಳು ಜಾನಕಿ.

"ಗೋವಿಂದಬಾಬೂ, ಬಾಲವಿಹಾರಕ್ಕೆ ನಿಮ್ಮ ಆವಶ್ಯಕತೆ ಈಗಿರುವಷ್ಟು ಹೆಚ್ಚಾಗಿ ಮುಂದೆಂದೂ ಇರಲಾರದು. ನಿಮ್ಮ ಅಕ್ಕನವರು ನೆಟ್ಟ ಸಸಿಯನ್ನು ನೀವು ನೀರೆರೆದು ಪೋಷಿಸಿದಿರಿ. ಅದು ಹೂ ಬಿಟ್ಟು ಫಲ ಕೊಡುವ ಸಮಯದಲ್ಲಿ ನೀವಿಬ್ಬರೂ ಅದರ ಬಗ್ಗೆ ನಿರ್ಲಿಪ್ತತೆ ಬೆಳೆಸಿಕೊಂಡಿದೀರಿ. ಕಣ್ಣಮುಂದೆ ದಿನದಿನಕ್ಕೆ ಬಾಡಿಹೋಗುತ್ತಿರುವ ಈ ಗಿಡವನ್ನು ನೋಡಿ ವ್ಯಥೆಪಡುವುದರ ಹೊರತು ಏನನ್ನೂ ಮಾಡಲಾರದ ಸ್ಥಿತಿಯಲ್ಲಿ ನಾನಿದ್ದೇನೆ. ಈಗಿನ ಮ್ಯಾನೇಜರರ ಕೆಲಸವನ್ನು ಗಮನಿಸಿಯೂ ಅನಸೂಯಮ್ಮ ಹೀಗೇಕೆ ಮೌನವಾಗಿದಾರೋ ನನಗರ್ಥವಾಗುತ್ತಿಲ್ಲ. ಕೈಲಾಗದಿದ್ದರೂ ಓಡಾಡುತ್ತಿದಾರೆ. ಎಲ್ಲವನ್ನೂ ನೋಡುತ್ತಿದಾರೆ. ಆದರೆ ಬಾಯಿಬಿಟ್ಟು 'ಹೀಗೇಕೆ?' ಎಂದು ಮಾತ್ರ ಪ್ರಶ್ನೆ ಮಾಡುತ್ತಿಲ್ಲ. ನನಗೆ ತಿಳಿದ ಹಾಗೆ ಅನಸೂಯಮ್ಮನವರು ಇಂತಹ ಪರಿಸ್ಥಿತಿಯನ್ನು ಎಂದೂ ಸಹಿಸುವುದಿಲ್ಲ. ನಿಮ್ಮ ಅಕ್ಕ ಪೂರ್ತಿ ಬದಲಾಗಿದಾರೆ. ಸರಿಯಾದ ಸಮಯದಲ್ಲಿ ಬಂದು ಈ ಬಾಧ್ಯತೆಯನ್ನು ಸ್ವೀಕರಿಸಬೇಕಾದ ಆವಶ್ಯಕತೆ ಬಂದಿದೆ ಈಗ."

ಎಂದು ಬರೆದು ಪೋಸ್ಟ್ ಮಾಡಿದಳು ಜಾನಕಿ.

ಜಾನಕಿಯ ಮುಂದೆ ಮ್ಯಾನೇಜರರನ್ನು ಕಡಿಮೆ ಮಾಡಿ ಮಾತನಾಡುವುದು ಒಳ್ಳೆಯದಲ್ಲವೆಂದುಕೊಂಡ ಅನಸೂಯಮ್ಮ, ಜಾನಕಿ ಆತನನ್ನು ಕುರಿತು ಹೇಳಿದಾಗ ನಿರ್ಲಕ್ಷ್ಯದಿಂದಿದ್ದಂತೆ ನಟಿಸಿದ್ದರು. ತಾನು ಮಾಡುತ್ತಿದ್ದ ಕೆಲಸ, ಆಲೋಚನೆಗಳನ್ನು ತಿದ್ದಿಕೊಳ್ಳಲು ಮ್ಯಾನೇಜರರಿಗೆ ಸಾಕಷ್ಟು ಅವಕಾಶ ಕೊಡಬೇಕೆಂಬ ಉದ್ದೇಶದಿಂದಲೇ ತನ್ನ ಅಭಿಪ್ರಾಯವನ್ನು ಸಲಹೆಯ ರೂಪದಲ್ಲಿ ಮಾತ್ರವೇ ಕೊಟ್ಟು ವಿಧಿನಿರ್ವಹಣೆಯ ಬಾಧ್ಯತೆಯನ್ನು ಆತನಿಗೇ ಬಿಟ್ಟು ಸ್ವಲ್ಪ ಕಾಲ ನೋಡಿದ್ದರು ಅನಸೂಯಮ್ಮ.

ಆತ ತಾನು ಮಾಡುತ್ತಿದ್ದ ತಪ್ಪುಗಳನ್ನು ತಿದ್ದಿಕೊಳ್ಳುವುದಂತಿರಲಿ, ಇನ್ನೂ ಮುಂದುವರಿಸುತ್ತಾ ಮಕ್ಕಳೊಂದಿಗೂ, ನೌಕರರೊಂದಿಗೂ ನಿರಂಕುಶವಾಗಿ ವರ್ತಿಸಲಾರಂಭಿಸಿದ್ದರು. ಅನಸೂಯಮ್ಮ ತಾನು ಹೇಗೆ ಹೇಳಿದರೆ ಹಾಗೆ ಕೇಳುತ್ತಾರೆಂದೂ, ತನ್ನ ಮಾತಿಗೆ ಎದುರುಹೇಳುವ ಸ್ವಭಾವವಲ್ಲವೆಂದೂ ಆತ ಭಾವಿಸಿದ. ಅವಕಾಶ ದೊರೆತಾಗಲೇ ಅಧಿಕಾರ ಸ್ಥಾಪಿಸಿಕೊಂಡು, ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಬೇಕೆಂಬ ಭಾವನೆಯಲ್ಲಿದ್ದ.

ಬಾಯಿಬಿಟ್ಟು ಏನೂ ಮಾತನಾಡದಿದ್ದರೂ ಅನಸೂಯಮ್ಮ ಈ ವಿಷಯಗಳನ್ನೆಲ್ಲಾ ಗ್ರಹಿಸಿದ್ದರು. ಈತನಿಂದ ಬಾಲವಿಹಾರದ ಅಭಿವೃದ್ಧಿ

ಸಾಧ್ಯವಿಲ್ಲವೆಂದು ನಿಶ್ಚಯಿಸಿಕೊಂಡರು. ಮತ್ತೆ ಬೇರೊಬ್ಬರನ್ನು ನಿಯಮಿಸು ವುದಕ್ಕೆ ಮುಂಚೆ ಈ ವಿಷಯವನ್ನು ಗೋವಿಂದಬಾಬುಗೆ ತಿಳಿಸುವುದು ಉತ್ತಮ ಎಂದು ಭಾವಿಸಿದರು.

"ನಿನ್ನ ಮಾನವಸೇವೆಯನ್ನು ಇಲ್ಲಿ ಬಂದು ಮಾಡಬಾರದೇ? ಈ ಮಕ್ಕಳು ಮಾತ್ರ ಮಾನವರಲ್ಲವೇ?" ಎಂದು ಬರೆದು, "ಗೋವಿಂದೂ ನೀನು ಹೊರಟುಹೋದಾಗಿನಿಂದ ಇಲ್ಲಿ ಕೆಲಸ ಸರಿಯಾಗಿ ನಡೆಯುತ್ತಿಲ್ಲ. ನಿನಗೆ ಇಲ್ಲಿರಲು ಇಷ್ಟವಿಲ್ಲದಿದ್ದರೆ ಯಾರನ್ನಾದರೂ ಒಬ್ಬರನ್ನು ತರಪೇತು ಮಾಡಿ ಇಲ್ಲಿರಿಸಿ, ಎಲ್ಲಾ ವಿಧವಾದ ಏರ್ಪಾಟುಗಳನ್ನೂ ಮಾಡಿಹೋಗು. ನಾನಿನ್ನು ಈ ಭಾರವನ್ನು ಹೊರಲಾರೆ. ನೀನೇ ನೋಡಿಕೊಳ್ಳಬೇಕ " ಎಂದು ಬರೆದರು ಆಕೆ.

ಗೋವಿಂದ ಬಾಬೂಗೆ ಕಾಗದ ಬರೆದ ಮರುದಿನದಿಂದ ಆತನ ಉತ್ತರ ಕ್ಕೋಸ್ಕರ ಎದುರುನೋಡುತ್ತಿದ್ದಳು ಜಾನಕಿ. ಗೋವಿಂದಬಾಬು ಹಿಂತಿರುಗಿ ಬರುತ್ತಾನೆ. "ಅಣ್ಣಾ, ಅಣ್ಣಾ" ಎಂದು ಓಡಿಬರುವ ಮಕ್ಕಳ ಮುಖದಲ್ಲಿ ನಗೆಮಲ್ಲಿಗೆ ಬಿರಿಯುತ್ತದೆ. ಹೊಸ ವರ್ಷ ನೂತನ ಶೋಭೆಯಿಂದ ಬಾಲ ವಿಹಾರ ಕಂಗೊಳಿಸುತ್ತದೆ. ಅನಂತರ ಎಲ್ಲ ಸರಿಯಾದ ದಾರಿಯಲ್ಲಿ ನಡೆಯು ತ್ತದೆ. ಬೇಸಗೆಯಲ್ಲಿನ ದಾರಿಹೋಕನಿಗೆ ತಣ್ಣನೆಯ ಮರದ ನೆರಳಿನಂತೆ ಎಲ್ಲಾ ಹಾಯಾಗಿ ಕಳೆಯುತ್ತದೆ—ಎಂದುಕೊಂಡಳು ಜಾನಕಿ.

'ಗೋವಿಂದಬಾಬುವಿನ ಬರವಿನಿಂದ ಲಾಭ ಪಡೆಯುವುದು ಬಾಲ ವಿಹಾರ ಒಂದೇನೇ? ಸ್ವತಹ ನಿನಗೇನೂ ಪ್ರತ್ಯೇಕವಾದ ಆನಂದವಿಲ್ಲವೇ?'— ಎಂದು ಜಾನಕಿಯ ಮನಸು ಪ್ರಶ್ನಿಸಿತು.

'ಏಕಿಲ್ಲ? ಬಾಲವಿಹಾರ ಚೆನ್ನಾಗಿದ್ದರೆ ನನ್ನ ಪರಿಸ್ಥಿತಿಯೂ ಚೆನ್ನಾಗಿ ರುತ್ತೆ. ನಾನು ಬಾಲವಿಹಾರದಲ್ಲಿ ಒಂದು ಭಾಗ ತಾನೆ?'—ಜಾನಕಿ ಉತ್ತರ ಹೇಳಿಕೊಂಡಳು.

'ಅಷ್ಟೇನೇ, ಇನ್ನೇನೂ ಆಲೋಚನೆಯಿಲ್ಲವೇ ನಿನ್ನ ಮನಸಿನಲ್ಲಿ?'— ಮನಸು ಕೆದಕಿ ಪ್ರಶ್ನಿಸಿತು.

ಆ ಪ್ರಶ್ನೆಗೆ ಸ್ಪಷ್ಟವಾಗಿ ಉತ್ತರ ಕೊಡುವುದು ಜಾನಕಿಯಿಂದಾಗದ ಮಾತಾಗಿತ್ತು. ಗೋವಿಂದ ಬಾಬು ಹೊರಟುಹೋದಾಗಿನಿಂದ ಸದಾ ಮನಸಿ ನಲ್ಲಿ ಅದೇ ಪ್ರಶ್ನೆ ಸುಳಿಯುತ್ತಿತ್ತು. ತನಗೆ ಸಂಬಂಧಿಸಿದ ಒಂದು ಪ್ರಶ್ನೆಗೆ ನೇರವಾಗಿ ಉತ್ತರ ಹೇಳಲಾರದ ಹೇಡಿತನ ತನ್ನಲ್ಲಿದೆಯೆಂಬುದೇ ಜಾನಕಿಗೆ ಅದುವರೆವಿಗೂ ಗೊತ್ತಿರಲಿಲ್ಲ. ಆ ಪ್ರಶ್ನೆಗೆ ಉತ್ತರ ಹೇಳುವಷ್ಟರ ಪರಿಪಕ್ವತೆ

ತನ್ನ ಆಲೋಚನೆಗಳಿಗಿನ್ನೂ ಬಂದಿಲ್ಲವೆನಿಸಿತು. ಕಾಲನೊಂದಿಗೆ ಪ್ರಯಾಣ ಮಾಡಿ ಪರಿಣತೆಯನ್ನು ಹೊಂದಿ ಹಣ್ಣಾದಾಗಲೇ ಹಣ್ಣು ಸಿಹಿಯಾಗಿರುತ್ತದೆ. ಸಮಯ ಬರುವವರೆಗೂ ಕಾದಿರುವುದೇ ತನಗೆ ಶ್ರೇಯಸ್ಕರವೆಂದು ನಿಶ್ಚಯಿಸಿ ಕೊಂಡಳು ಜಾನಕಿ.

ಜಾನಕಿ ನೆನಪಿನ ಸುಳಿಯಲ್ಲಿ ಸಿಕ್ಕಿ ಕೊಚ್ಚಿಕೊಂಡು ಹೋಗುತ್ತಿರುವಾಗಲೇ ಪ್ರಕಾಶ ಬಂದಿದ್ದ.

"ಬಹಳ ದಿನದಿಂದ ಕಾಣಲಿಲ್ಲವಲ್ಲೋ" ಎಂದಳು ಜಾನಕಿ.

"ಅಲ್ಲಿನ ಕೆಲಸ ಮುಗಿಸಿಕೊಂಡು ಅಣ್ಣನ ಬಳಿ ಹೋಗಿದ್ದೆ."

"ಏನು ವಿಶೇಷ?"

"ಏನಿದೆ? ಕಾಗದದಲ್ಲಿ ಬರೆಯುತ್ತಿದ್ದುದರ ಸ್ವರೂಪವೇ ಅಲ್ಲಿ ಕಾಣುತ್ತಿದೆ. ಅತ್ತಿಗೆ ತುಂಬಾ ಬಲಹೀನವಾಗಿದ್ದಾರೆ. ಡಾಕ್ಟರ್‌ನ ಕೇಳಿ ಒಂದೆರಡು ಟಾನಿಕ್ ಬಾಟಲ್ ತೆಗೆದುಕೊಟ್ಟೆ. ತಪ್ಪದೆ ತೆಗೆದುಕೊಳ್ಳಿ ಅಂತ ಹೇಳಿ ಬಂದೆ. ಅತ್ತಿಗೆ ನನ್ನ ಕಡೆ ನೋಡಿ ನಕ್ಕು, 'ಪ್ರಕಾಶಾ, ಇವು ಚಿಕ್ಕ ಮಕ್ಕಳಿಗೂ ಕೆಲಸಕ್ಕೆ ಬರುತ್ತೇನೋ' ಎಂದಳು.

"ಆಗ ನನಗೆ ನನ್ನ ತಪ್ಪು ಅರ್ಥವಾಗಿತ್ತು. ಮಗು ಅತ್ತಿಗೆಗಿಂತ ಬಲಹೀನವಾಗಿತ್ತು. ನನ್ನ ಮನಸಿನಲ್ಲಿ ಮುಖ್ಯಸ್ಥಾನದಲ್ಲಿ ಅತ್ತಿಗೆಯಿರುತ್ತಾಳೆ. ಅಣ್ಣ ಮಗು ಎಲ್ಲರೂ ಆಕೆಗೆ ಅನುಬಂಧವಾಗಿಯೇ ಕಾಣುತ್ತಾರೆ ನನಗೆ. ಈ ಮಾತು ಹೇಳಿದರೆ ಅಣ್ಣನಿಗೆ ಕೋಪಬರುತ್ತೆ.

" 'ನನ್ನಿಂದ ಅತ್ತಿಗೇನೊ, ಅತ್ತಿಗೆಯಿಂದ ನಾನು ನಿನಗೆ ಸಂಬಂಧಿಯೋ' ಅನ್ನುತ್ತಾನೆ. ಈ ಸಂಬಂಧ ಬಾಂಧವ್ಯಗಳಿಗೆ ಅತೀತವಾದ ಯಾವುದೋ ಗುಣ ಅತ್ತಿಗೆಯಲ್ಲಿದೆ. ಅದು ಆಕೆಯ ಬಗ್ಗೆ ನನ್ನ ಗೌರವವನ್ನು ಇಮ್ಮಡಿಗೊಳಿಸುತ್ತದೆ. ನಮ್ಮಿಂದ ಏನನ್ನೂ ಆಶಿಸದೆ ನಮಗೆ ಫಲಪುಷ್ಪಗಳನ್ನೂ, ಆಹಾರಧಾನ್ಯಗಳನ್ನೂ, ಖನಿಜಸಂಪತ್ತನ್ನೂ ಕೊಡುವ ಭೂಮಾತೆಯಂತೆ ಕಾಣುತ್ತಾಳೆ, ಅತ್ತಿಗೆ ನನಗೆ. ಒಬ್ಬರಿಗೆ ಕೊಡುವುದರ ಹೊರತು, ಕೊಳ್ಳುವುದನ್ನೇ ಅರಿಯದ ಅತ್ತಿಗೆಗೆ ಏನು ಕೊಟ್ಟರೆ ತಾನೇ ತೃಪ್ತಿಯುಂಟಾಗುತ್ತದೆ? ಇಲ್ಲಿಯೇ ಅಣ್ಣನೊಂದಿಗೆ ಜಗಳ ನನಗೆ.

"ನನಗಿಂತ ಹೆಚ್ಚಾಗಿ ನಿಮ್ಮ ಅತ್ತಿಗೆ ನಿನಗೆ ಕೊಟ್ಟದ್ದೇನು? ನಾನು ನಿಮಗೋಸ್ಕರ ಮಾಡಿದ್ದರಲ್ಲಿ ಎಷ್ಟು ಪಾಲು ಅವಳು ಮಾಡಿದ್ದಾಳೆ? ನಾನು ಬೇಡ ಅಂದಿದ್ದರೆ ಅವಳು ನಿಮಗೆ ಒಂದು ಲೋಟ ನೀರು ಕೂಡಾ ಕೊಡುತ್ತಿರಲಿಲ್ಲ. ಮುಖ್ಯ ವ್ಯಕ್ತಿ ನಾನು. ನನ್ನನ್ನು ಬಿಟ್ಟು ನಿಮ್ಮ ಅತ್ತಿಗೆಯನ್ನು ಕಟ್ಟಿ

ಕೊಂಡು ಒದ್ದಾಡುತ್ತೀಯೆಲ್ಲಾ' ಎನ್ನುತ್ತಾನೆ ಅಣ್ಣ.

"ಶಾಂತಣ್ಣ ಜಾನಕಿಯನ್ನು ನಿಮ್ಮ ಅತ್ತಿಗೆ ಎಷ್ಟರಮಟ್ಟಿಗೆ ಕಾಪಾಡಿದಳು? ಅವರನ್ನ ಸಮರ್ಥಿಸುತ್ತಾ ಒಂದು ಮಾತೂ ಆಡಲಿಲ್ಲವಲ್ಲಾ. ಅವಳಿಗೆ ನಿನ್ನ ಮೇಲೆ ಅಷ್ಟು ಅಭಿಮಾನವಿದ್ದದ್ದಾದರೆ ನನ್ನನ್ನು ಎದುರಿಸಿ ಎಂದೂ ಜಗಳವಾಡಲಿಲ್ಲವೇಕೆ?—ಎಂದು ತನ್ನ ವಾದವನ್ನು ಮುಂದಿಡುತ್ತಾನೆ.

"ಒಂದು ವಿಧವಾಗಿ ನೋಡಿದರೆ ಅಣ್ಣ ತನ್ನ ಪ್ರಶ್ನೆಗೆ ತಾನೇ ಜವಾಬು ಹೇಳುತ್ತಿದ್ದಾನೆ ಅನ್ನಿಸುತ್ತೆ, ನನಗೆ. ತನ್ನ ಸ್ಥಾನವನ್ನು ಗುರ್ತಿಸಿ ನಡೆದು ಕೊಳ್ಳುವುದರಲ್ಲಿಯೇ ಅತ್ತಿಗೆಯ ಹೆಚ್ಚಳ ಕಾಣುತ್ತದೆ. ಗಂಡನೊಂದಿಗೆ ವಾದಿಸಿ ನಮಗೆ ಮಾಡುವ ಉಪಕಾರವೇನೂ ಇಲ್ಲವೆಂದು ಆಕೆಗೆ ಗೊತ್ತು. ಅತ್ತಿಗೆ ತನ್ನ ಸಂಸಾರ ರಟ್ಟುಮಾಡಿಕೊಂಡರೆ ನಾವೆಲ್ಲಾ ಎಷ್ಟು ವ್ಯಥೆಪಡುತ್ತೀವೋ ಆಕೆಗೆ ಗೊತ್ತು. ಆ ವಿಧವಾಗಿ ಮಾಡದೆ ಇರುವುದರಲ್ಲಿಯೇ ಆಕೆಗೆ ನಮ್ಮ ಮೇಲಿರುವ ಪ್ರೀತಿ ವ್ಯಕ್ತವಾಗುತ್ತದೆ.

"ಎಂದೂ ನಾನು ನಿಮಗೋಸ್ಕರ ಇದನ್ನು ಮಾಡಿದೆ, ಮಾಡುತ್ತಿದ್ದೇನೆ ಎನ್ನಲಿಲ್ಲ ಆಕೆ. ಮನಸಿನಲ್ಲಿ ಸಹ ಅಂದುಕೊಂಡಿರಲಾರರು. ಆದ್ದರಿಂದಲೇ ಆಕೆಗೆ ಅಶಾಂತಿಯಿಲ್ಲ. ನಮ್ಮಿಂದ ಏನನ್ನೂ ಆಶಿಸದ ಆಕೆಗೆ ನಾವು ಎಷ್ಟು ಸ್ವಲ್ಪ ಕೊಟ್ಟರೂ ಅಮಿತವಾಗಿ ಸಂತೋಷಿಸುತ್ತಾರೆ.

"ಅದೇ ಅಣ್ಣ, ತಾನು ನಮಗೆ ಮಾಡಿದ್ದೆ ಅಂದುಕೊಳ್ಳುವುದಕ್ಕೆಲ್ಲಾ ಬಡ್ಡಿ ಸಹಿತವಾಗಿ ತೀರಿಸಬೇಕೆಂದು ಆಶಿಸುತ್ತಾನೆ. ಆದ್ದರಿಂದಲೇ ಅಣ್ಣನಿಗೆ ಎಷ್ಟು ಕೊಟ್ಟರೂ ತೃಪ್ತಿಯಿರೋಲ್ಲ....ಆ....ಏನೋ ಹೇಳಹೋಗಿ ಏನೇನೋ ಹೇಳುತ್ತಿದ್ದೇನಲ್ಲವೇ? ಮಿಕ್ಕದ್ದೆಲ್ಲಾ ಮಾಮೂಲೆ. ಊರಿಗೆ ಹೋಗಿ ಮಗುವಿಗೆ ಔಷಧಿ ಕಳುಹಿಸುತ್ತೇನೆ, ನೀವು ಮಾತ್ರ ಇದನ್ನು ತಪ್ಪದೆ ತೆಗೆದುಕೊಳ್ಳಿ ಅಂತ ಹೇಳಿ ಬಂದೆ."

"ಅತ್ತಿಗೆ ಅಷ್ಟು ಬಲಹೀನರಾಗಿದ್ದಾರೆಯೇ?"

"ಅಭಿಮಾನದಿಂದ ನೋಡುವವರ ಕಣ್ಣಿಗೆ ಹಾಗೇ ಕಾಣುತ್ತದೆ, ಪ್ರಕಾಶ—ಅಂದರು ಅತ್ತಿಗೆ" ಎಂದ ಪ್ರಕಾಶ.

ಒಂದು ಸಲ ಹೋಗಿ ಅತ್ತಿಗೆಯನ್ನು ನೋಡಿ ಬಂದಿದ್ದರೆ ಆಗಿತ್ತು ಎಂದುಕೊಂಡಳು ಜಾನಕಿ. ಆದರೆ ಆ ದಿನ ಅಣ್ಣ ಅಂದ ಮಾತುಗಳನ್ನವಳು ಇನ್ನೂ ಮರೆತಿರಲಿಲ್ಲ. ತೀರಾ ಹೋದಮೇಲೆ ಅಣ್ಣ ಏನಾದರೂ ಅಂದರೆ ಅತ್ತಿಗೆ ನೊಂದುಕೊಳ್ಳುತ್ತಾರೆ. ಅದಕ್ಕಿಂತ ಹೀಗೆ ದೂರವಾಗಿರುವುದೇ ಒಳ್ಳೆಯದೆನಿಸಿತು.

ಸಹಜವಾಗಿ ಮಕ್ಕಳ ಮನಸ್ಸಿನಲ್ಲಿ ತಾಯಿ ಈ ಸ್ಥಾನದಲ್ಲಿರುತ್ತಾರೆ. ಆದರೆ ಈ ಕುಟುಂಬದಲ್ಲಿ ತಾಯಿಯನ್ನು ತಪ್ಪಿಸಿ ಆ ಸ್ಥಾನವನ್ನು ಅತ್ತಿಗೆ ಹೇಗೆ ಆಕ್ರಮಿಸಿದರೆಂಬುದು ಯಾರಿಗೂ ಅರ್ಥವಾಗಿರಲಿಲ್ಲ. ತಾಯಿಯಿಲ್ಲದ ಮಕ್ಕಳನ್ನು, ಚಿಕ್ಕಂದಿನಿಂದ ಬೆಳಸಿ ದೊಡ್ಡವರನ್ನು ಮಾಡಿದ ಅತ್ತಿಗೆಯ ಮೇಲೆ, ಮೈದುನ, ನಾದಿನಿಯರಿಗೆ ಅಭಿಮಾನವಿರುವುದು ಸಹಜ. ಆದರೆ ಹೆಚ್ಚು ಕಡಿಮೆ ತಮ್ಮ ವಯಸ್ಸಿನವರೇ ಆದ ಅತ್ತಿಗೆಯ ಬಗ್ಗೆ ಇಷ್ಟು ಗೌರವ, ಅಭಿಮಾನವಿರುವುದು ಅಪರೂಪವೆಂದೇ ಹೇಳಬಹುದು.

ಪ್ರಕಾಶನಿಗೂ, ಜಾನಕಿಗೂ ಅತ್ತಿಗೆಯ ಬಗ್ಗೆ ಇದ್ದ ಅಭಿಮಾನಕ್ಕೆ ಪ್ರತ್ಯೇಕವಾದ ಕಾರಣವೇ ಇರಲಿಲ್ಲ. ದೊಡ್ಡವರು 'ಮುಖ ನೋಡಿಕೊಂಡ ಗಳಿಗೆ ಅಂಥಾದ್ದು' ಅಂತಾರಲ್ಲಾ ಆ ತರಹದ್ದು ಏನೋ ಇರಬೇಕು.

ಪ್ರಕಾಶ ಹೊರಡುವ ಮುನ್ನ ಇನ್ನೊಂದು ಸಮಾಚಾರ ಹೇಳಿದ:

"ರಾಜಾರಾಯರ ಹೆಂಡತಿ ಹೋಗಿಬಿಟ್ಟಿದ್ದಾರಂತೆ."

"ಯಾವ ರಾಜಾರಾಯರು?" ಅರ್ಥವಾಗದೆ ಪ್ರಶ್ನಿಸಿದಳು ಜಾನಕಿ.

ಆ ದಿನ ನೂತನ ವಸ್ತ್ರಗಳನ್ನು ಧರಿಸಿ, ದೃಷ್ಟಿಬೊಟ್ಟು, ಕಣ್ಣಿಗೆ ಕಾಡಿಗೆ, ಹಣೆಯಲ್ಲಿ ತಿಲಕ ಧರಿಸಿ ಫ್ಲೈಟ್ ಸ್ಟೇಷನ್ನಿನಲ್ಲಿ ನೆರಳು-ಬೆಳಕುಗಳ ಮಧ್ಯೆ ನಿಂತು ಮಾತನಾಡಿದ ರಾಜಾರಾಯ ಆವಳಿಗೆ ನೆನಪಾಗಲಿಲ್ಲ. ತನಗೆ ತಿಳಿದವರಲ್ಲಿ ರಾಜಾರಾಯ ಎಂಬ ಹೆಸರಿನವರು ಯಾರಿದ್ದಾರಪ್ಪಾ ಎಂದು ಆಲೋಚಿಸತೊಡಗಿದಳು.

"ನಿನ್ನ ಕೊರಳಲ್ಲಿ ತಾಳಿ ಕಟ್ಟಿದ್ದ ಗಂಡನ ಹೆಂಡತಿ ಕಣಕ್ಕಾ" ಎಂದಂದು ತನ್ನ ಮಾತಿನ ರೀತಿಗೆ ತಾನೇ ನಾಚಿ, ಮೀಸೆಯ ಹಿಂದಿನಿಂದ ನಕ್ಕ ಪ್ರಕಾಶ.

ತಮಾಷೆಗೆ ಅಣ್ಣನೊಡನೆ ಮೀಸೆ ಬೆಳೆಸುವ ಮಾತು ಬಂದಾಗಿನಿಂದ ಪ್ರಕಾಶ ಮೀಸೆ ಬೆಳೆಸಲು ಪ್ರಾರಂಭಿಸಿದ್ದ. ಐದಡಿ ಎತ್ತರ, ಸಿಪ್ಪೆ ತೆಗೆದ ಸುವರ್ಣಗಡ್ಡೆಯಂತೆ ಕೆಂಪಾದ ಮುಖ, ದಟ್ಟವಾದ ಕ್ರಾಪು, ದಪ್ಪಗಿನ ಮೀಸೆ ಇವುಗಳಿಂದ ಪ್ರಕಾಶ ನೋಡಲು ವಿಚಿತ್ರವಾಗಿ ಕಾಣುತ್ತಿದ್ದ.

"ಅಕ್ಕನ್ನ ಕೇಳಿ ಇಪ್ಪತ್ತೈದು ಪೈಸೆ ಕೊಡಿಸ್ತೀನಿ. ಆ ಮೀಸೆ ತೆಗೆಸಿ ಬಿಡೊ ಪ್ರಕಾಶ, ನೋಡೋಕಾಗ್ತಿಲ್ಲ" ಎಂದು ಗೋಗರೆಯುತ್ತಿದ್ದಳು, ಶಾಂತ.

"ಇಂಥಾ ರಾಜಾಮೀಸೇನ ಇಪ್ಪತ್ತೈದು ಪೈಸೆಗೆ ಕಳಕೋತೀನೇನು? ವ್ರತ ಕೆಟ್ಟರೂ ಸುಖ ದಕ್ಕಬೇಕು ಅಂತಾರೆ ದೊಡ್ಡೋರು. ಒಂದು ಸಾವಿರ ರೂಪಾಯಿ ಕೊಡು, ತೆಗೆಸ್ತೀನಿ" ಅಂತಿದ್ದ ಪ್ರಕಾಶ.

"ನನಗೇನಂತೆ, ಆ ಮೀಸೆ ಇರೋವರ್ಗೂ ಯಾವ ಹುಡುಗೀನೂ ನಿನ್ನ

ಕಡೆ ನೋಡೊಲ್ಲ" ಎಂದು ಹೆದರಿಸುತ್ತಿದ್ದಳು ಶಾಂತ.

"ಓ ಸೋದರೀಮಣಿ, ನನ್ನ ಆಶಯವೂ ಅದೇ. ಅಂತಹ ಆಪತ್ತಿನಲ್ಲಿ ಸಿಕ್ಕಿಕೊಳ್ಳದೆ ರಕ್ಷಿಸುವುದಾದರೆ ನನ್ನ ಮಿಾಸೆಗೆ ಜೈ" ಎಂದು ಪ್ರಕಾಶ ಗಟ್ಟಿಯಾಗಿ ನಕ್ಕ.

"ಎಷ್ಟು ದಿನ ಈ ಒಂಟಿಬಾಳು ಪ್ರಕಾಶ? ಒಂದು ಹುಡುಗೀನ ನೋಡಿ ಮದುವೆ ಮಾಡಿಕೊಳ್ಳಬಾರದೇನು?" ಎನ್ನುತ್ತಿದ್ದಳು ಜಾನಕಿ.

"ನನ್ನ ಅಂಗಡಿಯಲ್ಲಿ ಒಂದು ಬೀರುವಿನ ತುಂಬಾ ಫ್ಯಾಮಿಲಿ ಪ್ಲಾನಿಂಗ್‌ಗೆ ಸಂಬಂಧಪಟ್ಟ ಪುಸ್ತಕಗಳಿವೆ. ಅಕ್ಕಾ. ನಾನು ಮದುವೆ ಮಾಡಿಕೊಂಡರೆ ಆ ಭಾರ್ಯಾಮಣಿ ಹತ್ತು ಜನ ಮಕ್ಕಳನ್ನು ಹೆತ್ತು ನನ್ನ ಅಂಗಡಿಯ ಮೇಲೆ ದಂಡಯಾತ್ರೆಗೆ ಕಳುಹಿಸಿದರೆ ನನ್ನ ವ್ಯಾಪಾರವೆಲ್ಲಾ 'ಗೋಲ್ ಮಾಲ್' ಆಗುತ್ತೆ. ಪುಸ್ತಕ ಕೊಳ್ಳುವವರು 'ಆ ಪುಸ್ತಕ ನಿನ್ನ ಅಂಗಡಿಯಲ್ಲಿ ಇದ್ದರೆ ಎಷ್ಟು ಉಪಯೋಗವೋ ನಮ್ಮ ಮನೆಯಲ್ಲಿದ್ದರೂ ಅಷ್ಟೇ ಉಪಯೋಗ' ಅಂತ ಹೊರಟುಹೋಗುತ್ತಾರೆ" ಎಂದ ಪ್ರಕಾಶ.

"ಮದುವೆ ಮಾಡಿಕೊಂಡ ಮಾತ್ರಕ್ಕೆ ಹತ್ತು ಜನ ಮಕ್ಕಳು ಹುಟ್ಟಿಬರುತ್ತಾರೇನು? ಪರಿಮಿತ ಸಂತಾನ ಬೇಕು ಎಂಬ ಆಲೋಚನೆಯಲ್ಲಿಲ್ಲದವರಿಗೆ, ಅದರ ಬೆಲೆ ತಿಳಿಯದವರಿಗೆ ಹುಟ್ಟುತ್ತಾರಷ್ಟೆ" ಎಂದಳು ಜಾನಕಿ.

"ಹಾಗಾದರೆ ಅಕ್ಕಾ, ಮನುಷ್ಯ ತನಗೆ ತಿಳಿದ ಪ್ರತಿಯೊಂದು ವಿಷಯವನ್ನೂ ಆಚರಣೆಯಲ್ಲಿಡುತ್ತಾನೇನು? ಸಡಲುತ್ತಿರುವ ಕುಲಮತ ಪ್ರಾಧಾನ್ಯತೆಗೆ ಮನುಷ್ಯ ಮತ್ತೂ ನೀರೆರೆದು ಪೋಷಿಸುತ್ತಿದಾನೇಕೆ? ಈಗಿನ ಕಾಲದಲ್ಲಿ ಸಹಜವೆಂದು ನಂಬುತ್ತಿರುವ ವರ್ಣಾಂತರ ವಿವಾಹಗಳನ್ನೂ ವಿಧವಾವಿವಾಹಗಳನ್ನೂ ಏಕೆ ವ್ಯತಿರೇಕಿಸುತ್ತಿದಾನೆ? ಕಷ್ಟಪಟ್ಟು ಜೀವಿಸುವ ದಾರಿ ತೆರೆದಿದ್ದರೂ, ಅಡ್ಡದಾರಿಯಲ್ಲಿ ಹೊಟ್ಟೆ ತುಂಬಿಸಿಕೊಳ್ಳಲು ತಾಪತ್ರಯ ಪಡುತ್ತಿದಾನೇಕೆ? ಇದರಲ್ಲಿನ ತಪ್ಪುಒಪ್ಪುಗಳನ್ನು ತಿಳಿಯದೆಯೇ ಮಾಡುತ್ತಿದಾನೆಯೇ? ತನಗೆ ತಿಳಿದ ವಿಷಯವನ್ನು ಒಪ್ಪಿಕೊಳ್ಳಲು ಧೈರ್ಯ ಬೇಕಕ್ಕ. ತಾನು ನ್ಯಾಯವೆಂದು ನಂಬಿದ ವಿಷಯವನ್ನು ಆಚರಣೆಯಲ್ಲಿ ತರಲು ಆತ್ಮಸ್ಥೈರ್ಯ ಬೇಕು. ನಮ್ಮಲ್ಲಿ ಬಹಳ ಜನ ಆ ಮಟ್ಟಕ್ಕೆ ಏರಲು ತುಂಬಾ ದಿನ ಬೇಕಾಗುತ್ತೆ. ಅದುವರೆವಿಗೂ ನಾನಾರನ್ನೂ ನಂಬುವುದಿಲ್ಲ. ಹೆಂಗಸರನ್ನ ಮೊದಲೇ ನಂಬಬಾರದು. ಅವರು ಪ್ರೀತಿ ಎಂಬ ಮಾದಕದ್ರವ ಕುಡಿಸಿ, ನಾವು ಬೇಡ ಅಂದುಕೊಳ್ಳೋ ಕೆಲಸಗಳನ್ನೆಲ್ಲಾ ಮಾಡಿಸಿಬಿಡ್ತಾರೆ" ಎಂದ ಪ್ರಕಾಶ ನಗುತ್ತಾ.

ಪ್ರಕಾಶ ನಿಸಾಸೆ ತೀಡಿಕೊಳ್ಳುತ್ತಾ ಹಿಂತಿರುಗಿ ನೋಡಿದ. ತಾನಾಡಿದ ಮಾತಿನಿಂದ ಅಕ್ಕನಲ್ಲೇನಾದರೂ ಬದಲಾವಣೆ ಆಗಿದೆಯೇನೊ ನೋಡೋಣ ಎಂದು.

'ಕಾಲ ತೀರಿದವರು ಹೋಗುತ್ತಾರೆ, ಇದರಲ್ಲೇನಿದೆ?'—ಎನಿಸಿತು ಜಾನಕಿಗೆ.

ಆ ಮಾತು ಕಿವಿಯ ಮೇಲೆ ಬೀಳದವಳಂತೆಯೇ, "ಮತ್ತೆ ಯಾವಾಗ ಬರುತ್ತಿ?" ಎಂದಳು.

"ಬಿಡುವಿದ್ದಾಗ ಬರುತ್ತೇನೆ. ಹುಂ....ಅಮ್ಮ, ಅಣ್ಣ, ಈ ವಿಷಯ ನಿನಗೆ ಹೇಳು ಎಂದರು" ಎನ್ನುತ್ತಾ ಹೊರಟುಹೋದ ಪ್ರಕಾಶ.

ಪ್ರಕಾಶ ಹೊಸಲು ದಾಟುತ್ತಿರುವಾಗ ಪೋಸ್ಟ್‌ಮನ್ ಬಂದು ಜಾನಕಿಯ ಕೈಗೆ ಒಂದು ಕವರ್ ಕೊಟ್ಟ. ಅದನ್ನು ತದೇಕವಾಗಿ ದಿಟ್ಟಿಸಿದಳು ಜಾನಕಿ. ನಾಲ್ಕು ಹೆಜ್ಜೆ ಮುಂದಿಟ್ಟ ಪ್ರಕಾಶ ಅಕ್ಕನಿಗೇನೋ ಹೇಳಬಯಸಲು ಹಿಂದಿರುಗಿ ಬಂದ. ಆಕೆಯ ಕಣ್ಣಿನಲ್ಲಿನ ಕಾಂತಿಯನ್ನೂ ಮುಖದಲ್ಲಿನ ಪ್ರಶಾಂತತೆಯನ್ನೂ ಕಂಡು ಆ ಅನುಭೂತಿಯನ್ನು ಹಾಳು ಮಾಡಲಿಚ್ಛಿಸದೆ ಹಿಂತಿರುಗಿ ಹೊರಟುಹೋದ.

ಕವರನ್ನೊಡೆದು ಕಾಗದ ಓದಿ ಹಾಗೇ ನಿಂತಿದ್ದಳು ಜಾನಕಿ. ಶಾಂತ ಬಂದು, "ಎಲ್ಲಿಂದಕ್ಕಾ, ಕಾಗದ" ಎಂದಾಗಲೇ ಈ ಲೋಕಕ್ಕೆ ಹಿಂತಿರುಗಿದ್ದು.

"ನಾಳೆ ರಾತ್ರಿ ರೈಲಿನಲ್ಲಿ ಗೋವಿಂದಬಾಬು ಬರ್ತಾರಂತೆ"—ಅಕ್ಕನ ಮುಖದಲ್ಲಿನ ಆನಂದವನ್ನು ನೋಡಿ ಅದಕ್ಕಿಂತಲೂ ಒಳ್ಳೆಯ ಸಮಾಚಾರ ವನ್ನು ನಿರೀಕ್ಷಿಸಿದ್ದ ಶಾಂತ ಮಾತನಾಡದೆ ಒಳಕ್ಕೆ ಹೊರಟುಹೋದಳು.

"ನಾಳೆ ರಾತ್ರಿ ಗೋವಿಂದಬಾಬು ಬರ್ತಾರೆ."

ಪ್ರಕಾಶ ರಾಜಾರಾಯರ ಹೆಂಡತಿಯ ಸಾವನ್ನು ಕುರಿತು ಹೇಳಿದಾಗ ತನಗೇನೂ ಅನ್ನಿಸಲಿಲ್ಲ. ಕಾಲ ತೀರಿದವರು ದಿನಾ ಎಷ್ಟೋ ಜನ ಸಾಯು ತ್ತಾರೆ. ಪ್ರತ್ಯೇಕವಾಗಿ ಹೇಳಿಕೊಳ್ಳಲು ಅದರಲ್ಲೇನಿದೆ ಅನ್ನಿಸಿತ್ತು. ಈಗ ಗೋವಿಂದ ಬಾಬು ಬರುತ್ತಿದ್ದಾರೆ ಎಂದರೆ ದಿನಾ ರೈಲಿನಲ್ಲಿ ಎಷ್ಟೋ ಜನ ಬರುತ್ತಾರೆ, ಅದರಲ್ಲೇನಿದೆ ಅನ್ನಿಸಲಿಲ್ಲ. ಆ ಸಮಾಚಾರ ರಾತ್ರಿಯೆಲ್ಲಾ ಕನಸಿ ನಲ್ಲಿ ಅವಳ ಕಣ್ಣಮುಂದೆ ಸುಳಿದಾಡುತ್ತಲೇ ಇತ್ತು.

* * *

ತಾನೇ ಸ್ಟೇಷನ್ನಿಗೆ ಹೋಗಿ ಗೋವಿಂದ ಬಾಬುವನ್ನು ಕರೆತಂದಳು ಜಾನಕಿ. ಆತನನ್ನು ನೋಡಿದ ಕೂಡಲೇ ಅವಳಿಗೆ ಹೋದ ಪ್ರಾಣ ತಿರುಗಿ

ಬಂದಂತಾಗಿತ್ತು. ಬಾಲವಿಹಾರದ ಮಕ್ಕಳನ್ನು ಕುರಿತ ಚಿಂತೆ, ಭಯಗಳೆಲ್ಲಾ ಎಲ್ಲಿಯೋ ಹಾರಿಹೋದಂತೆನಿಸಿತು.

"ನೀವು ಬಂದಿರಿ. ಇನ್ನು ನನಗೇನೂ ಚಿಂತೆಯಿಲ್ಲ. ಎಲ್ಲಾ ನೀವು ನೋಡಿಕೊಳ್ಳುತ್ತೀರಿ" ಎಂದು ಹಾಯಾಗಿ ಉಸಿರಾಡಿದಳು ಜಾನಕಿ.

"ನೀವು 'ಬಾ' ಎಂದು ಆಜ್ಞಾಪಿಸಿದ ಮೇಲೆ ಬಾರದೆ ಹೇಗಿರಲಿ?"

ನಿಜವಾಗಿಯೂ ನನ್ನ ಮಾತಿನ ಮೇಲಷ್ಟು ಶ್ರದ್ಧೆಯಿದೆಯೇ ಎಂದು ಆವನ ಮುಖವನ್ನು ಪರಿಶೀಲಿಸಿ ನೋಡಿದಳು ಜಾನಕಿ.

"ಏನು ಹಾಗೆ ನೋಡುತ್ತಿದೀರಿ? ಇಲ್ಲಿಂದ ಹೋದಮೇಲೆ ತುಂಬಾ ಇಳಿದುಹೋಗಿದೀನೇನು?....ಮನೆಗೆ ಹೋದಕೂಡಲೇ ಅವರೆಲ್ಲಾ, "ಏನೋ ಹೀಗಾಗಿಬಿಟ್ಟಿದ್ದಿ. ಊಟ ತಿಂಡಿ ಸರಿಯಿಲ್ಲವೇ? ಅಂತ ಕೇಳಿದ್ದೇ ಕೇಳಿದ್ದು. ಅವರ ಉದ್ದೇಶದಲ್ಲಿ ನಾನು ಮತ್ತೆ ಈಗ ತಾನೇ ಸರಿಹೋಗುತ್ತಿದೀನಂತೆ. ಮತ್ತೆ ಅಲ್ಲಿಗೇಕೆ ಹೋಗುತ್ತಿ ಅಂತ ಅಡ್ಡಿಮಾಡಲು ನೋಡಿದರು. ಈ ಸಲ ನನ್ನನ್ನು ನೋಡಿಕೊಳ್ಳಲು ಅಲ್ಲೊಂದು ಹುಡುಗಿಯಿದೆಯಮ್ಮ, ಮತ್ತೆ ಕೃಶನಾಗಿ ಬರೋಲ್ಲ ಅಂತ ಗ್ಯಾರಂಟಿ ಕೊಟ್ಟು ಬಂದಿದೀನಿ. ಮತ್ತೆ ಹೇಗೆ ನೋಡಿಕೊಳ್ಳುತ್ತೀರೋ ನಿಮ್ಮಿಷ್ಟ" ಎಂದ ಗೋವಿಂದ ಬಾಬು ನಗುತ್ತಾ.

ಇದಕ್ಕೆ ಮುಂಚೆ ಗೋವಿಂದ ಬಾಬು ಮಾತನಾಡುತ್ತಿದ್ದ ಪದ್ಧತಿಗೂ ಈಗ ಮಾತನಾಡುತ್ತಿರುವುದಕ್ಕೂ ಏನೋ ವ್ಯತ್ಯಾಸವಿದ್ದಂತೆನಿಸಿತು ಜಾನಕಿಗೆ. ತಾನು ಸಲಿಗೆ ವಹಿಸಿ ಬರುವಂತೆ ಬರೆದದ್ದರಿಂದ ಆತ ಸಹ ಸಲಿಗೆಯಿಂದ ಮಾತನಾಡುತ್ತಿರುವಂತೆನಿಸಿತು. ಅದು ಅವಳಿಗೆ ಪ್ರಿಯವಾಗಿತು ಕೂಡಾ.

ದಾರಿಯುದ್ದಕ್ಕೂ ಆತ ಹೊರಟುಹೋದಮೇಲೆ ಬಾಲವಿಹಾರದಲ್ಲಿ ನಡೆದ ಬದಲಾವಣೆಗಳನ್ನೂ ಹೊಸ ಮ್ಯಾನೇಜರ್ ಮಾಡುತ್ತಿರುವ ಅರ್ಥವಿಲ್ಲದ ಕೆಲಸಗಳನ್ನೂ ಕುರಿತು ಜಾನಕಿ ಒಂದೇ ಸಮನೆ ಮಾತನಾಡಿದಳು. ಕೊನೆಯಲ್ಲಿ "ಗೋವಿಂದಬಾಬೂ, ನೀವೀಗ ಬರದಿದ್ದರೆ ನಾನಿಲ್ಲಿ ಕೆಲಸ ಬಿಟ್ಟು ಹೋಗೋಣ ಅಂತ ಕೂಡಾ ಅಂದುಕೊಂಡಿದ್ದೆ" ಎಂದು ಪೂರ್ತಿ ಮಾಡಿದಳು.

ಗೋವಿಂದ ಬಾಬು ಬರುತ್ತಾರೆಂದು ತನಗೆ ಮೊದಲೇ ತಿಳಿದಿದ್ದಂತೆ ವರಾಂಡದಲ್ಲಿ ಎದುರು ನೋಡುತ್ತಾ ಕುಳಿತಿದ್ದ ಅನಸೂಯಮ್ಮನವರನ್ನು ನೋಡಿ ಆಶ್ಚರ್ಯಪಟ್ಟಳು ಜಾನಕಿ.

ಅನಸೂಯಮ್ಮ ಆಶ್ಚರ್ಯ ಪ್ರಕಟಿಸದೆ, "ಬಂದೆಯಾ ಗೋವಿಂದೂ, ನಿನ್ನನ್ನು ಕುರಿತೇ ಆಲೋಚಿಸುತ್ತಿದೀನಿ" ಎಂದರು.

ಗೋವಿಂದ ಬಾಬು ಆಕೆಯ ಮಾತಿಗೆ ಜವಾಬು ಹೇಳದೆ, "ಜಾನಕಿ,

ಒಂದು ಲೋಟ ನೀರು ತಂದುಕೊಡುತ್ತೀರಾ?" ಎಂದ.

ಜಾನಕಿ ಒಳಕ್ಕೆ ಹೋದಳು.

"ನಿನ್ನ ಕಾಗದ ಸೇರಿತಕ್ಕಾ. ಕೂಡಲೇ ಹೊರಟು ಬಂದೆ. ಅದಕ್ಕೆ ಮುಂಚೆಯೇ ಇಲ್ಲಿನ ಪರಿಸ್ಥಿತಿಯನ್ನು ವಿವರಿಸುತ್ತಾ ಜಾನಕಿ ಬರೆದ ಕಾಗದವೂ ಸೇರಿತ್ತು. ನಾನು ತನ್ನ ಕಾಗದ ನೋಡಿಯೇ ಬಂದಿದೇನೆಂದು ಜಾನಕಿ ಅಭಿಪ್ರಾಯ ಪಡುತ್ತಿದ್ದಾಳೆ...." ಎಂದ ಗೋವಿಂದ ಬಾಬು.

ಜಾನಕಿಗೆ ಬಾಲವಿಹಾರದ ಬಗ್ಗೆ ಇದ್ದ ಶ್ರದ್ಧಾಸಕ್ತಿಗಳಿಗೆ ಅನಸೂಯಮ್ಮ ಸಂತೋಷಿಸಿದರು. ಗೋವಿಂದ ಬಾಬು ಹಾಗೇಕೆ ಹೇಳುತ್ತಿದ್ದಾನೆಂಬುದನ್ನು ಊಹಿಸಿ ತನ್ನಲ್ಲಿ ತಾವೇ ನಕ್ಕರು.

ಜಾನಕಿ ಲೋಟದಲ್ಲಿ ನೀರು ತಂದಳು. ಗೋವಿಂದಬಾಬು ಒಂದು ಗುಟುಕು ನೀರು ಕುಡಿದು ಲೋಟ ಪಕ್ಕದಲ್ಲಿಟ್ಟ.

"ನಿನ್ನ ಕಾಗದ ನೋಡಿ ಹೊರಟು ಬಂದನಂತೆ ಗೋವಿಂದು. ಒಳ್ಳೆಯ ಕೆಲಸ ಮಾಡಿದೆಯಮ್ಮಾ, ಜಾನಕಿ. ಮತ್ತೆ ಗೋವಿಂದು ಈ ಬಾಧ್ಯತೆ ಸ್ವೀಕರಿಸುತ್ತಿರುವುದು ನನಗೆಷ್ಟು ನೆಮ್ಮದಿ ಕೊಡಬಲ್ಲುದೋ ನೀನು ಊಹಿಸ ಬಲ್ಲೆ. ನೀವಿಬ್ಬರೂ ಈ ಬಾಲವಿಹಾರದ ಅಭಿವೃದ್ಧಿಗಾಗಿ ಮನಸ್ಫೂರ್ತಿಯಾಗಿ ಶ್ರಮಿಸುತ್ತೀರೆಂದು ನನಗೆ ಗೊತ್ತು" ಎಂದರು ಸಂತೃಪ್ತಿಯಿಂದ.

ಜಾನಕಿ ಹೊರಟು ಹೋದಮೇಲೆ ಅನಸೂಯಮ್ಮನವರಿಂದ ಬಾಲವಿಹಾರಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನೂ ತಿಳಿದುಕೊಂಡ ಗೋವಿಂದ ಬಾಬು. ಮಾರನೆಯ ದಿನ ತಾನೇ ಸ್ವತಃ ಹೋಗಿ ನೋಡಿ ಬಂದ. ಆತ ಹೊರಟುಹೋದ ಮೇಲೆ ಕೆಲವು ಬದಲಾವಣೆಗಳನ್ನು ಮಾಡಿದ್ದೂ ನಿಜ. ಅವು ಸತ್ಫಲಿತಗಳನ್ನು ಕೊಡದಿದ್ದುದೂ ನಿಜ. ಅಷ್ಟು ಮಾತ್ರಕ್ಕೇ ಬಾಲ ವಿಹಾರಕ್ಕೆ ಉಂಟಾಗುವ ಪ್ರಮಾದವೇನೂ ಇರಲಿಲ್ಲ. ಜಾನಕಿ ಭಯಪಟ್ಟಷ್ಟು ಪರಿಸ್ಥಿತಿ ವಿಷಮಿಸಿರಲಿಲ್ಲ.

ಹೊಸ ಮ್ಯಾನೇಜರರ ಸ್ವಭಾವ ಬೇರೆ. ದಂಡನೆಯಿಂದ ಮಕ್ಕಳನ್ನೂ ನೌಕರರನ್ನೂ ಹದ್ದಿನಲ್ಲಿಟ್ಟು ಅವರ ಕೈಯಲ್ಲಿ ಸಕ್ರಮವಾಗಿ ಕೆಲಸ ಮಾಡಿಸ ಬೇಕೆಂದೇ ಆತನ ಉದ್ದೇಶ. ದಂಡಂ ದಶಗುಣಂ ಭವೇತ್. ಎಂಬುದು ಆತನ ಭಾವನೆ. ಆದರೆ ಮಕ್ಕಳ ವಿಷಯದಲ್ಲಿ ಇದು ಕೆಲಸಕ್ಕೆ ಬಾರದು. ಕೆಲಸದವರೂ ತಗ್ಗಿ ನಡೆಯರು. ಒಳಗೊಳಗೇ ಬೈದುಕೊಳ್ಳುತ್ತಾರೆ.

ದಂಡನೆಯ ನೀತಿಯನ್ನವಲಂಬಿಸಿದ್ದರಿಂದಾಗಿ ಮಕ್ಕಳಿಗೂ ನೌಕರರಿಗೂ ಆತ ರಾಕ್ಷಸನಂತೆ ಕಾಣುತ್ತಿದ್ದ. ಅದಕ್ಕೂ ಹೆಚ್ಚಾದ ಲೋಪವೇನಿರಲಿಲ್ಲ

ಆತನಲ್ಲಿ. ಆದರೆ ಆ ತರಹ ಸ್ವಭಾವದ ಮನುಷ್ಯರು ಬಾಲವಿಹಾರದಂತಹ ಚಿಕ್ಕ ಮಕ್ಕಳ ಸಂಸ್ಥೆಯಲ್ಲಿ ಕೆಲಸಮಾಡಲು ಯೋಗ್ಯರಲ್ಲ ಎಂದುಕೊಂಡ ಗೋವಿಂದ ಬಾಬು.

ಹೊಸ ಮ್ಯಾನೇಜರರು ಮಾಡಿದ ಕೆಲಸಗಳಿಗಾಗಿ ಧನ್ಯವಾದಗಳನ್ನು ಅರ್ಪಿಸುತ್ತಾ, ಸಾಕಷ್ಟು ಗೌರವಧನವನ್ನು ಕೊಟ್ಟು ಆತನನ್ನು ಬೀಳ್ಕೊಟ್ಟರು ಅನಸೂಯಮ್ಮ. 'ಮತ್ತೆ ನಿಮ್ಮ ಆವಶ್ಯಕತೆಯುಂಟಾದರೆ ಹೇಳಿಕಳುಹಿಸುತ್ತೇನೆ." ಎಂದರು.

ಆತ ಸಂತೋಷದಿಂದಲೇ ಹೊರಟುಹೋದ.

ಶಾಂತಳ ಪರೀಕ್ಷೆ ಮುಗಿದು ಎರಡು ತಿಂಗಳಾಗಿತ್ತು. ಫಲಿತಾಂಶ ಕ್ಕೋಸ್ಕರ ಆತುರದಿಂದ ಎದುರುನೋಡುತ್ತಿದ್ದಳು ಜಾನಕಿ.

"ನಿಮ್ಮ ತಂಗಿಗಿಂತ ನಿಮಗೇ ಹೆಚ್ಚು ಆತುರವಿದ್ದಂತಿದೆಯಲ್ಲಾ" ಎಂದ ಗೋವಿಂದ ಬಾಬು.

"ಬಾಧ್ಯತೆ ಇರುವವರಿಗೆ ಆತುರವಿರುವುದು ಸಹಜವಲ್ಲವೇ, ಗೋವಿಂದ ಬಾಬೂ."

"ಭಾರವಾಗಿರುವವರಿಗೆ ಮಾತ್ರ ಆತುರವಿರುವುದಿಲ್ಲವೇ? ಸಾಧ್ಯವಾದಷ್ಟು ಬೇಗ ತಮ್ಮ ಭಾರ ಕಡಿಮೆ ಮಾಡಬೇಕೆಂಬ ತಾಪತ್ರಯ ಇರುವುದಿಲ್ಲವೇ?"

"ಶಾಂತಳಿಗಂತಹ ಆಲೋಚನೆಯಿದ್ದರೆ ಅದು ಸಂತೋಷಪಡಬೇಕಾದ ವಿಷಯವೇ. ಆದರೆ ಅವಳ ಮನಸಿನಲ್ಲಿ ಆ ತರಹದ ಆಲೋಚನೆ ಸುಳಿಯುವುದೋ ಇಲ್ಲವೋ ಕಾಣೆ. ಯಾರೋ ಒಬ್ಬರು ತನ್ನ ಭಾರವಹಿಸಿ ಬೇಕಾದ್ದು ನೋಡಿಕೊಳ್ಳುತ್ತಾ ಇದ್ದರೆ ಹಗಲು ಕನಸು ಕಾಣುತ್ತಾ, ಗಾಳಿಗೋಪುರ ಕಟ್ಟುತ್ತಾ ಊಹಾಲೋಕದಲ್ಲಿ ತೇಲಿ ಹೋಗುತ್ತಾಳೆ. ತನ್ನ ಕಾಲಮೇಲೆ ತಾನು ನಿಲ್ಲಬೇಕೆಂಬ ನಿಶ್ಚಯವಾಗಲೀ ಕಷ್ಟಪಟ್ಟು ಕೆಲಸ ಮಾಡುವುದರಲ್ಲಿ ಇರುವ ಬೆಲೆಯನ್ನಾಗಲೀ ಅವಳು ಲಕ್ಷಿಸುವುದಿಲ್ಲ. ಅದೃಷ್ಟವಂತರ ಬದುಕಿಗಿಂತಹ ಆಸೆ ಪ್ರತಿಬಂಧಕವೇನಲ್ಲ. ಆದರೆ ನಮ್ಮಂತಹ........"

"ನಿಮಗೇನು ಕಡಿಮೆ ಜಾನಕಿ, ಹಾಯಾಗಿ ಕೆಲಸ ಮಾಡುತ್ತಿದೀರಿ. ಸ್ವತಂತ್ರವಾಗಿ ಜೀವನ ನಡೆಸುತ್ತಿದೀರಿ. ಹಣವಂತರು ಮಾತ್ರ ಕಷ್ಟಗಳಿಲ್ಲದೆ ಸುಖವಾಗಿ ಬದುಕುತ್ತಿದಾರಾ? ಅವರಿಗೆ ತಕ್ಕ ಕಷ್ಟ ಅವರಿಗೂ ಇರುತ್ತೆ.... ಈಗ ನನ್ನ ಮಾತೇ ನೋಡಿ. ಮನೆಯಲ್ಲಿ ನಾನೊಬ್ಬನೇ ಗಂಡುಹುಡುಗ. ನನ್ನ ಅಕ್ಕಂದಿರಿಗೂ ತಂಗಿಯರಿಗೂ ಮದುವೆಯಾಗಿ ಅತ್ತೆಮನೆಯಲ್ಲಿದ್ದಾರೆ.

ಎಷ್ಟು ದಿನ ಹೀಗೆ ಬ್ರಹ್ಮಚಾರಿಯಾಗಿರುತ್ತಿ. ನಮ್ಮ ಅಂತಸ್ಥಿಗೆ ತಕ್ಕ ಹುಡುಗಿಯನ್ನು ಮದುವೆಯಾಗಿ ಹಾಯಾಗಿರಬಾರದೇ ಅನ್ನುತ್ತಾರೆ ಅಮ್ಮ. ತಂದೆಯವರಿಗೆ ನನ್ನ ಜತೆಯಲ್ಲಿ ಹಳ್ಳಿ ಹಳ್ಳಿ ತಿರುಗಿ ಸಹಾಯುವಾಗಿರುವಂತಹ ಹೆಣ್ಣನ್ನು ಮಾಡಿಕೊಂಡರೆ ಒಳ್ಳೆಯದೆಂದಿದೆ. ಇನ್ನು ನನ್ನ ಇಷ್ಟವೇನು ಎಂದರೆ..........."

ಆತನ ವಾಕ್ಯ ಪೂರ್ತಿಯಾಗುವುದಕ್ಕಾಗಿ ನಿರೀಕ್ಷಿಸುತ್ತಿದ್ದಳು ಜಾನಕಿ. ಅವಳ ಹೃದಯ ವೇಗವಾಗಿ ಬಡಿದುಕೊಳ್ಳುತ್ತಿತ್ತು. ದೇಹದಲ್ಲಿನ ರಕ್ತ ಬಿಸಿಯಾಗಿ ಕಂಪಿಸಿತು.

ಆತ ಹೇಳಬೇಕೆಂದುಕೊಂಡ ಮಾತನ್ನು ಆಕೆ ಊಹಿಸಿಕೊಂಡಳು. ಆದರೆ ಇದುವರೆವಿಗೂ ಆ ಮಾತನ್ನು ತನ್ನ ಕಿವಿಯಿಂದ ಕೇಳಿರಲಿಲ್ಲ. ಈ ದಿನ ಆ ಮಾತನ್ನು ಕೇಳಲು ಮೈಯೆಲ್ಲಾ ಕಿವಿಯಾಗಿ ನಿರೀಕ್ಷಿಸುತ್ತಿದ್ದಳು. ಈ ಸಲ ಬಂದಾಗಿನಿಂದ ಆತನ ನಡವಳಿಕೆ ಆ ಮಾತಿಗೆ ಸ್ಪಷ್ಟತೆಯನ್ನು ಕೊಟ್ಟಿತ್ತು. ತಿಂಗಳಿನಿಂದ ಯಾವ ನಿಮಿಷದಲ್ಲಿ ಈ ಮಾತು ಕೇಳಿ ಬರುತ್ತದೆಯೋ ಎಂದು ಎದೆಯನ್ನು ಒತ್ತಿ ಹಿಡಿದು ಕಿವಿಗೊಟ್ಟು ಎದುರು ನೋಡುತ್ತಿದ್ದಳು.

'ಎಷ್ಟೋ ಸಲ ನಾಲಗೆಯ ತುದಿಯವರೆಗೂ ಬಂದ ಮಾತನ್ನು ಆತ ನುಂಗಿಬಿಟ್ಟಿದ್ದ. ಇಲ್ಲಾ ಅವಳಿಗೆ ಹಾಗೆನಿಸಿತ್ತು. ಆ ಒಂದು ವಿಷಯದಲ್ಲಿಯೇ ಅವಳು ಆತನನ್ನು ಅರ್ಥಮಾಡಿಕೊಳ್ಳಲಾರದವಳಾಗಿದ್ದಳು. ಆ ಒಂದು ಮಾತನ್ನಾಡಲು ಆತನಿಗೇಕೆ ಧೈರ್ಯವಿಲ್ಲ? ಪಕ್ಕಪಕ್ಕದಲ್ಲಿ ಕುಳಿತು ಸಿನಿಮಾ ನೋಡುತ್ತಿದ್ದಾಗ ಸಾಯಂಕಾಲದ ಮಸುಕು ಬೆಳಕಿನಲ್ಲಿ ಜತೆಯಾಗಿ ವಾಕಿಂಗ್ ಹೊರಟಾಗ, ಎದುರೆದುರಾಗಿ ಲಾನ್‌ನಲ್ಲಿ ಕುಳಿತು ಗಂಟೆಗಟ್ಟಲೆ ಹರಟೆ ಹೊಡೆಯುತ್ತಿದ್ದಾಗ ತನ್ನ ಹೃದಯವನ್ನರಿಯಬೇಕೆಂಬ ಆಕಾಂಕ್ಷೆಯಿಂದ, ತನ್ನ ನೋಟದಲ್ಲಿನ ಗೂಢಾರ್ಥವನ್ನು ಗ್ರಹಿಸಬೇಕೆಂಬ ಕುತೂಹಲದಿಂದ, ತನ್ನ ಕಡೆ ದಿಟ್ಟಿಸಿ ನೋಡುತ್ತಿರಲಿಲ್ಲವೇ? ಕಣ್ಣಿನಲ್ಲಿನ ಭಾವನೆ ಪ್ರತಿಫಲಿಸಲಿಲ್ಲವೇ? ಮನಸು ಅರ್ಥವಾಗಲಿಲ್ಲವೇ? ಧೈರ್ಯವಾಗಿ ಮನಸಿನಲ್ಲಿನ ಮಾತನ್ನು ಹೇಳಬೇಕಾದ ಗಂಡಸು ಆತನೇ ಹಿಂದೆಗೆಯುತ್ತಿರುವಾಗ........ ಇಬ್ಬರೂ ಒಳಗೊಳಗೇ ತಪಿಸಬೇಕೇಕೆ? ಈ ನಿರೀಕ್ಷೆಗೆ ಕೊನೆ ಇಲ್ಲವೇ?' ಎಂದುಕೊಂಡಳು.

ಜಾನಕಿ ಧೈರ್ಯತಂದುಕೊಂಡಳು. ಆತ ಮೌನಭಂಗ ಮಾಡದಿದ್ದಲ್ಲಿ ತಾನಾದರೂ ಮುಂದುವರಿಯಬೇಕು. ಇಂತಹ ಅನುಕೂಲವಾದ ಸಮಯ ಇದಕ್ಕೂ ಮುಂಚೆ ಲಭಿಸಿರಲಿಲ್ಲ ಅವಳಿಗೆ. ಸಾಧಾರಣವಾಗಿ ಶಾಂತ ಅವ

ರೊಂದಿಗಿರುತ್ತಿದ್ದಳು. ಶಾಂತ ತನ್ನೊಡನಿರದಿದ್ದರೆ ಚೆನ್ನಾಗಿತ್ತು ಅನಿಸುತ್ತಿತ್ತು ಜಾನಕಿಗೆ. ಆದರೆ ಶಾಂತಳಿಗೆ ಆ ತರಹದ ಆಲೋಚನೆಯೇ ಬರುತ್ತಿರಲಿಲ್ಲ. ಅಕ್ಕನೆದುರಿಗೇ ಆತನೊಂದಿಗೆ ನಗುತ್ತಾ ಕೆಲೆಯುತ್ತಾ ಮಾತನಾಡುತ್ತಿದ್ದಳು. ತಾನೇ ಸಲಿಗೆ ವಹಿಸಿ ವರ್ತಿಸುತ್ತಿದ್ದಳು. ಅಕ್ಕ ಅಲ್ಲಿದ್ದಾಳೆಂಬ ಮಾತನ್ನೇ ಮರೆತು ಆತನೊಂದಿಗೆ ಹರಟೆ ಹೊಡೆಯಲು ಮುಂದಾಗುತ್ತಿದ್ದಳು.

ಶಾಂತನ ಮಾತುಗಳಿಗೆ ನಾಗಸ್ವರವನ್ನು ಕೇಳಿ ತಲೆಯೆತ್ತುವ ನಾಗರಾಜನಂತೆ ಕಿವಿಗೊಡುತ್ತಿದ್ದ ಆತ. ಒಂದೊಂದು ಸಲ ಜಾನಕಿಗೆ ಶಾಂತನ ಮೇಲೆ ಅಸೂಯೆ ಹುಟ್ಟುತ್ತಿತ್ತು. ತಮ್ಮಿಬ್ಬರ ಮಧ್ಯೆ ಇದ್ದ ಸ್ನೇಹವನ್ನು ತಿಳಿದೂ ತಿಳಿದೂ ಶಾಂತ ತಮ್ಮ ಮಧ್ಯೆ ಅಡ್ಡಿಯಾಗಿ ಏಕೆ ಬರಬೇಕು? ಈ ಸಲ ಸ್ಪಷ್ಟವಾಗಿ ಹೇಳಿಬಿಡಬೇಕು ಗೋವಿಂದಬಾಬುವಿನೊಂದಿಗೆ ಅಷ್ಟು ಸಲಿಗೆಯಿಂದಿರಬೇಡ ಅಂತ. ಅದು ಒಳ್ಳೆಯದಲ್ಲಾಂತಲೂ ಹೇಳಬೇಕು—ಎಂದುಕೊಳ್ಳುತ್ತಿದ್ದಳು ಜಾನಕಿ.

'ನೀನು ಮಾತ್ರ ಆತನೊಂದಿಗೆ ಸಲಿಗೆಯಿಂದಿಲ್ಲವೇನು? ನಿನಗೆ ಮಾತ್ರ ಒಳ್ಳೆಯದೇನು? ಆತನ ಕೈಕೆಳಗೆ ಕೆಲಸ ಮಾಡುತಿದ್ದಾಕ್ಷಣ ಸಿನಿಮಾ, ವಾಕಿಂಗ್ ಅಂತ ಆತನ ಜತೇಲಿ ಓಡಾಡೋದು ಸರಿಯೇನು? ನನಗೆ ಬುದ್ಧಿ ಹೇಳೋಕೆ ಮುಂಚೆ ನಿನ್ನ ನಡವಳಿಕೆ ಒಂದು ಸಾರಿ ನೋಡಿಕೋ....' ಎಂದು ಶಾಂತ ತಿರುಗಿಬಿದ್ದರೆ?

'ಏನು ಹೇಳಬೇಕು? ತನ್ನ ಪ್ರವರ್ತನೆಯನ್ನು ಹೇಗೆ ಸಮರ್ಥಿಸಿಕೊಳ್ಳಬೇಕು? ಗುಲಗಂಜಿಯಂತೆ ಅಕ್ಕ ತನ್ನ ನಡತೆಯನ್ನಾಲೋಚಿಸದೆ ನನ್ನಲ್ಲಿ ತಪ್ಪು ಹುಡುಕುತ್ತಿದಾಳೆಂದು ಶಾಂತ ತನ್ನನ್ನು ಅಸಹ್ಯಿಸಿಕೊಂಡರೆ.... ಪ್ರಕಾಶನವರೆಗೂ ಹೋದರೆ?.... ಅಣ್ಣನಿಗೂ ಅಮ್ಮನಿಗೂ ತಿಳಿದರೆ....

'ತಿಳಿದರೇನಂತೆ? ನೀನೂ ಹೆಣ್ಣಲ್ಲವೆ? ನೀನೂ ಸಾಧಾರಣ ಮಾನವಳಲ್ಲವೇ? ಬದುಕೆಲ್ಲಾ ಹೀಗೆಯೇ ಸನ್ಯಾಸಿನಿಯಂತೆ ಕಳೆಯುತ್ತೇನೆಂದು ಯಾರಿಗಾದರೂ ಮಾತು ಕೊಟ್ಟಿದೀಯಾ? ಏಕಷ್ಟು ಭಯ?' ಮನಸು ಧೈರ್ಯ ಹೇಳುತ್ತಿತ್ತು.

ಶಾಂತ ತನ್ನೊಂದಿಗಿಲ್ಲದ ಇಂತಹ ಅವಕಾಶ ಮತ್ತೆ ಇಷ್ಟರಲ್ಲಿ ಸಿಕ್ಕದಿರಬಹುದು. ಒಂದು ಸಲ ಮನಸು ಬಿಚ್ಚಿ ಮಾತನಾಡಿಕೊಂಡನಂತರ ತಮ್ಮ ಮಧ್ಯೆ ಯಾರಿದ್ದರೂ ಪರವಾಗಿಲ್ಲ, ಅನ್ನಿಸಿತು ಜಾನಕಿಗೆ ಅಷ್ಟಕ್ಕೇ ಮಾತು ನಿಲ್ಲಿಸಿಬಿಡುತ್ತಾನೇನೋ ಎಂಬ ಹೆದರಿಕೆಯಿಂದ, "ಹಾಗಾದರೆ ನಿಮ್ಮ ಇಷ್ಟ ಏನು ಗೋವಿಂದಬಾಬೂ" ಎಂದು ಪ್ರಶ್ನಿಸಿದಳು.

ಆತ ತದೇಕವಾಗಿ ಜಾನಕಿಯ ಮುಖ ನೋಡುತ್ತಾ ಉತ್ತರ ಹೇಳಲು ತುಟಿ ಬಿಚ್ಚಿದ.

ಜಾನಕಿಯ ಹೃದಯ ಆತನ ಮಾತುಗಳನ್ನಾಲಿಸಲು ಹಾತೊರೆದು ನಿಂತಿತು.

ಅದೇ ಸಮಯದಲ್ಲಿ ಬಿರುಗಾಳಿಯಂತೆ ಬೀಸಿ ಬಂದಳು ಶಾಂತ.

"ಗೋವಿಂದ ಬಾಬೂ, ನಾನು ಪಾಸಾಗಿದೀನಿ. ಸೆಕೆಂಡ್ ಕ್ಲಾಸ್‌ನಲ್ಲಿ" ಎನ್ನುತ್ತಾ ಆತನ ಕೈಗಳನ್ನು ಹಿಡಿದುಕೊಂಡು ಉತ್ಸಾಹದಿಂದ ಹೇಳಿದಳು.

ತನ್ನನ್ನು ಅಪ್ಪಿಕೊಳ್ಳಲು ಬಂದ ಶಾಂತಳನ್ನು ಆತನೇ ದೂರವಿರಿಸಿದಂತೆ ಭಾಸವಾಯಿತು ಜಾನಕಿ. ಒಂದು ಕ್ಷಣ ಅವಳ ಮನಸು ಅಗ್ನಿಪರ್ವತದಿಂದ ಪ್ರವಹಿಸುವ ಲಾವಾರಸದಂತೆ ಕುದಿಯಿತು.

ಮರುಕ್ಷಣದಲ್ಲಿ ತಂಗಿಯ ಹಿತಾಕಾಂಕ್ಷಿಯಾದ ಅಕ್ಕನಾಗಿ ಮಾರ್ಪಟ್ಟಳು ಜಾನಕಿ.

"ತುಂಬಾ ಸಂತೋಷ, ಶಾಂತಾ. ಕಂಗ್ರಾಟುಲೇಷನ್ಸ್" ಎಂದ ಗೋವಿಂದ ಬಾಬು.

"ಎಷ್ಟು ಒಳ್ಳೆಯ ಸಮಾಚಾರ ಹೇಳಿದಿ ಶಾಂತಾ. ಈ ದಿನಕ್ಕೋಸ್ಕರ ಎಷ್ಟ ಆತುರದಿಂದ ಎದುರು ನೋಡುತ್ತಿದ್ದೆನೋ" ಎಂದಳು ಜಾನಕಿ ಆಪ್ಯಾಯಮಾನವಾಗಿ.

ಗೋವಿಂದ ಬಾಬುವಿನ ಕೈಬಿಟ್ಟು ಅಕ್ಕನನ್ನು ತಬ್ಬಿಕೊಂಡಳು ಶಾಂತ. "ಇದೆಲ್ಲಾ ನಿನ್ನ ಬಿಕ್ಷೆ ಅಕ್ಕಾ. ಆ ದಿನ ನೀನು ಅಭಿಮಾನದಿಂದ ನನ್ನನ್ನು ಆದರಿಸದಿದ್ದರೆ ನಾನು ಬೀದಿಯ ಪಾಲಾಗುತ್ತಿದ್ದೆ. ಇಲ್ಲಾ ಕೆರೆ, ಬಾವಿ ನೋಡಿಕೋಬೇಕಾಗುತ್ತಿತ್ತು." ಶಾಂತಳ ಕಣ್ಣಲ್ಲಿ ನೀರು ಬಂತು.

"ಛಿ, ಹುಚ್ಚು ಹುಡುಗಿ. ಲಕ್ಷಣವಾಗಿ ಪರೀಕ್ಷೆಯಲ್ಲಿ ಪಾಸಾಗಿ ಯಾರಾದರೂ ಅಳುತ್ತಾರೇನು? ನಡಿ, ಪ್ರಕಾಶನಿಗೆ ಹೇಳಿ ಬರೋಣ" ಎಂದಳು, ಜಾನಕಿ.

"ಬೆಳಗಿನಿಂದ ಬಿಸಿಲಿನಲ್ಲಿ ಸುತ್ತಿದೀನಿ. ತಲೆ ತಿರುಗುತ್ತಿದೆ. ನೀನು ಹೋಗಿ ಬಾ ಅಕ್ಕಾ."

ಕ್ಷಣಮಾತ್ರದಲ್ಲಿ ಜಾನಕಿಯ ಉತ್ಸಾಹ ತಣ್ಣಗಾಯಿತು. ಒಂಟಿಯಾಗಿ ಹೋಗಲು ಅವಳ ಮನಸ್ಸೊಪ್ಪಲಿಲ್ಲ. "ಹೋಗಲಿ ಬಿಡು, ನಾಳೆ ಅವನೇ ಬರುತ್ತಾನೆ" ಎಂದಳು.

"ಇಲ್ಲಕ್ಕಾ. ಫೇಲಾಗ್ತೀನೋ, ಏನೋ ಅಂತ ಭಯಪಟ್ಟು ನನ್ನ

ನಂಬರ್ ಕೂಡಾ ಕೊಡಲಿಲ್ಲ. ಈವತ್ತು ರಿಸಲ್ಟ್ ಬಂದದ್ದನ್ನ ನೋಡಿ ಶಾಂತೆ ಫೇಲಾಗಿರುತ್ತಾಳೆ, ಅದಕ್ಕೇ ಹೇಳಲಿಲ್ಲ ಅಂದುಕೋತಾನೆ. ಒಂದು ಸಲ ಹೋಗಿ ಬಾ ಅಕ್ಕಾ. ಎಷ್ಟು ಹೊತ್ತು ಮಹಾ."

ಈ ವಿಷಯಕ್ಕೆ ಅಷ್ಟು ಬೇಡಿಕೊಳ್ಳಬೇಕಾದ ಆವಶ್ಯಕತೆಯಿದೆಯೇ ಎಂದು ಆಲೋಚಿಸುತ್ತಾ ಮೇಲೆದ್ದಳು ಜಾನಕಿ.

"ನಡೆಯಿರಿ, ನಾನೂ ಬಂದೆ. ಇಬ್ಬರು ಮಕ್ಕಳಿಗೆ ಮೈಹುಷಾರಿಲ್ಲ ಎಂದು ಆಯಾ ಹೇಳಿದಳು ಹೋಗಿ ನೋಡಬೇಕು" ಎಂದ ಗೋವಿಂದಬಾಬು.

ಮೇಯಿನ್ ಗೇಟು ದಾಟುವವರೆಗೂ ಹಿಂತಿರುಗಿ ನೋಡುತ್ತಲೇ ಇದ್ದಳು ಜಾನಕಿ.

* * *

ಸುಖ-ದುಃಖಗಳೂ, ಒಳಿತು-ಕೆಡಕುಗಳೂ ಕಾಲದೊಂದಿಗೆ ಬೆರೆತು ನಾಮಮಾತ್ರವಾಗುತ್ತವೆ. ಅವುಗಳ ನೆನಪು ಮಾತ್ರವೇ ಮನುಷ್ಯನಿಗೆ ಮಗುವಾಗುತ್ತದೆ. ಅದಕ್ಕೆ ಮನುಷ್ಯನನ್ನು ಅಷ್ಟಾಗಿ ಹಿಡಿದು ನಿಲ್ಲಿಸುವ ಶಕ್ತಿ ಇರೋಲ್ಲ. ಆದ್ದರಿಂದಲೇ ಒಂದು ಕಾಲದಲ್ಲಿ ಆಪ್ತಮಿತ್ರರಾಗಿದ್ದವರ ಸ್ನೇಹ ಕಡಿದುಹೋಗುವುದಕ್ಕೂ ವಿರೋಧಿಗಳ ಮಧ್ಯೆ ಶತ್ರುತ್ವ ಸವೆದು ಹೋಗುವುದಕ್ಕೂ ಅವಕಾಶವುಂಟಾಗುತ್ತದೆ.

ಈ ನಡುವೆ ಉಂಟಾದ ಹಣದ ಬಿಕ್ಕಟ್ಟಿನಿಂದಾಗಿ ಶ್ರೀಹರಿಯ ಅಹಂಭಾವ ಒಂದು ಮೆಟ್ಟಿಲು ಕೆಳಗಿಳಿದಿತ್ತು. ಹಣ ಸಂಪಾದಿಸುತ್ತಾ ತನ್ನ ಜೀವನ ತಾನು ನಡೆಸುತ್ತಿದ್ದ ತಂಗಿಯೊಂದಿಗೆ ವಿರೋಧ ಕಟ್ಟಿಕೊಂಡು ಪ್ರಯೋಜನವಿಲ್ಲವೆನಿಸಿತ್ತು. ತನ್ನ ಕೋಪತಾಪಗಳಿಗೆ ಹೆದರುವ ಸ್ಥಿತಿಯನ್ನು ಒಡಹುಟ್ಟಿದವರು ದಾಟಿಹೋಗಿದಾರೆಂದು ಗ್ರಹಿಸಿದ್ದ. ತಾನು ಮಕ್ಕಳೊಂದಿಗ. ಅವರು ಒಬ್ಬಂಟಿಗರು. ಅವರ ಆಸರೆ ತನಗೆ ಎಂದೋ ಒಂದು ದಿನ ಬೇಕಾಗಬಹುದು. ಅನಾವಶ್ಯಕವಾಗಿ ಅವರೊಂದಿಗೆ ದ್ವೇಷ ಬೆಳೆಸಿಕೊಳ್ಳುವುದರಲ್ಲಿ ಅರ್ಥವಿಲ್ಲವೆನಿಸಿತು.

ಹೀಗಂದುಕೊಳ್ಳುತ್ತಲೇ ಜಾನಕಿಗೆ ಕಾಗದ ಬರೆದ. ಆನಂತರ ಆಗಾಗ್ಗೆ ಬರೆಯುತ್ತಲೇ ಇದ್ದ. ಪ್ರತಿಯೊಂದು ಕಾಗದದಲ್ಲಿಯೂ ಆರ್ಥಿಕ ಅಡಚಣೆ, ಅನಾರೋಗ್ಯ, ಇವುಗಳ ವಿಚಾರ ಇದ್ದೇ ಇರುತ್ತಿತ್ತು.

ಇದೇನೇ ಬದುಕು? ಇದಕ್ಕೋಸ್ಕರವೇ ಮನುಷ್ಯ ಬದುಕುತ್ತಿರುವುದು? ತಾನು ಎಂದಿಗೂ ಸೇರಲಾರದ ಗುರಿಯನ್ನು ಊಹಿಸುತ್ತಾ ಓಡುತ್ತಾ, ಏಳುತ್ತಾ ಜೀವನದಾದ್ಯಂತವೂ ಅದೇ ಪ್ರಯತ್ನ ಮಾಡುತ್ತಾ, ಎಂದೋ

ಒಂದು ದಿನ ದಣಿದು ಕಣ್ಣು ಮುಚ್ಚಿಕೊಳ್ಳುವುದೇ ಬದುಕೇ?

ಆದಿ ಮಧ್ಯಂತರಗಳಲ್ಲಿ ಮನುಷ್ಯನಿಗೆ ಸಿಗುತ್ತಿರುವ ಬದುಕು ಇದೇನೇನು?

ಇದಕ್ಕೋಸ್ಕರವೇ ಈ ದ್ವೇಷ, ಅಸೂಯೆಗಳನ್ನೂ, ಅಹಂಕಾರ, ವಿರೋಧಗಳನ್ನೂ ಹೆಚ್ಚಿಸಿಕೊಳ್ಳುವುದು, ಕೊನೆಗೆ ಎಲ್ಲರೂ ಪಡೆಯುವುದು ಮಿತಿಯಿಲ್ಲದ ಆವೇದನೆಯ ಮಧ್ಯದಲ್ಲಿ ಸಿಕ್ಕಿ ಸಾಯುವುದಕ್ಕೇ ಎಂದುಕೊಳ್ಳುತ್ತಿದ್ದಳು, ಜಾನಕಿ.

ತನಗೆ ಅಷ್ಟೋ ಇಷ್ಟೋ ಸಹಾಯಮಾಡುತ್ತಿದ್ದ ಜಾನಕಿಯೊಂದಿಗೆ ಶ್ರೀಹರಿ ಸಮಾಧಾನಕ್ಕೆ ಬಂದರೂ, ಶಾಂತಳನ್ನು ಮಾತ್ರ ಕ್ಷಮಿಸಲಿಲ್ಲ. ತಾನು ಬರೆಯುವ ಕಾಗದಗಳಲ್ಲಿ ಶಾಂತ ಎಂಬ ಹುಡುಗಿ ತಮ್ಮ ಮನೆಯಲ್ಲಿ ಇದ್ದಾಳೆಂಬ ಭಾವನೆಯೇ ಇಲ್ಲದಂತೆ ಬರೆಯುತ್ತಿದ್ದ. ಇದು ಜಾನಕಿಗೆ ತುಂಬಾ ನೋವನ್ನುಂಟು ಮಾಡುತ್ತಿತ್ತು. ಅಣ್ಣನಿಂದ ಕಾಗದ ಬಂದಕೂಡಲೇ ಶಾಂತ ಆತುರದಿಂದ ಕೈಗೆ ತೆಗೆದುಕೊಂಡು, ಪೂರ್ತಿ ಓದಿ, ಅಕ್ಕನ ಕೈಯಲ್ಲಿಟ್ಟು ಅಲ್ಲಿಂದ ಹೊರಟುಹೋಗುತ್ತಿದ್ದಳು.

"ಅಕ್ಕಾ, ಅಣ್ಣ ನನ್ನನ್ನು ಎಂದಿಗೂ ಕ್ಷಮಿಸುವುದಿಲ್ಲವೇ?" ಎಂದು ಕೇಳುತ್ತಿದ್ದಳು.

"ಮನುಷ್ಯರ ಅಭಿಮಾನವನ್ನು ಕೆಲವರು ಹಣದಿಂದ ಕೊಳ್ಳಬಲ್ಲರು. ನೀನೂ ಕೆಲಸ ಮಾಡುತ್ತಾ ಆರ್ಥಿಕವಾಗಿ ಒಳ್ಳೆಯ ಸ್ಥಿತಿಯಲ್ಲಿದ್ದರೆ ಅಣ್ಣ ನಿನ್ನನ್ನೂ ಗುರ್ತಿಸಬಹುದು" ಎನ್ನುತ್ತಿದ್ದಳು ಜಾನಕಿ.

ಶಾಂತ ಬಿ.ಎಸ್ಸಿ. ಪಾಸಾದ ವಿಷಯ ಅಣ್ಣನಿಗೆ ಬರೆದಿದ್ದಳು ಜಾನಕಿ. ಈಗಲಾದರೂ ಅಣ್ಣನ ಕೋಪ ಕಡಿಮೆಯಾಗಬಹುದು ಎಂದುಕೊಂಡಳು. ಅಣ್ಣನಿಂದ ಕೂಡಲೇ ಜವಾಬು ಬಂದಿತ್ತು. ಮೊದಲನೇ ಸಾಲಿನಲ್ಲೇ "ನಿನ್ನ ತಂಗಿ ಪರೀಕ್ಷೆ ಪಾಸಾಗಿದ್ದು ತುಂಬಾ ಸಂತೋಷ" ಎಂದಿತ್ತು.

ಹುಚ್ಚು ಅಣ್ಣನಿಗೆ! ತಾನು ಅಲ್ಲ ಅಂದುಕೊಂಡ ಮಾತ್ರಕ್ಕೆ ಶಾಂತ ತನ್ನ ತಂಗಿಯಲ್ಲದೆ ಹೋಗುತ್ತಾಳೇನು? ಅಂದುಕೊಂಡ ಮಾತ್ರಕ್ಕೆ ಅಳಿಸಿ ಹೋಗುವ ಅನುಬಂಧವಾದರೆ ಇದು ಎಂದೋ ಕಡಿದುಹೋಗುತ್ತಿತ್ತು. ಕೈಯಿಂದ ಅಳಿಸಿದರೆ ಹೋಗಲು ಇದು ಮಸಿಯ ಗುರುತಲ್ಲ. ಹೆಜ್ಜೆಯ ಗುರುತು —ಎಂದುಕೊಂಡಳು.

ಕಾಗದದಲ್ಲಿ ಮಿಕ್ಕ ಭಾಗ ತಮಾಷೆಯಾಗಿತ್ತು. ಅಪ್ರಸ್ತುತವಾದ ಅನೇಕ ವಿಷಯಗಳನ್ನು ಬರೆಯುತ್ತಾ, ಮೊನ್ನೆ ಆಫೀಸಿನ ಕೆಲಸದ ಮೇಲೆ

ನಿಮ್ಮ ಅತ್ತೆಯ ಮನೆಗೆ ಹೋಗಿದ್ದೆ. ಆ ಗ್ರಾಮದ ಶಾನುಭೋಗರು ರಾಜಾ
ರಾಯರೇ ಆದ್ದರಿಂದ ನಾನು ಅಲ್ಲಿಯೇ ಉಳಿದುಕೊಳ್ಳಬೇಕಾಗಿ ಬಂತು.
ಅವರು ನನ್ನನ್ನು ತುಂಬಾ ಆದರದಿಂದ ನೋಡಿಕೊಂಡರು. ರಾಜಾರಾಯರಿಗೆ
ಒಳ್ಳೆಯ ಹೆಸರಿದೆ ಆಡೂರಿನಲ್ಲಿ. ಆಸ್ತಿ, ಪಾಸ್ತಿ, ಗೌರವ, ಮರ್ಯಾದೆ
ಯಾವುದಕ್ಕೂ ಕಡಿಮೆಯಿಲ್ಲ" ಎಂದು ಬರೆಯುತ್ತಾ ಮತ್ತೊಂದು ವಿಷಯ
ಸೇರಿಸಿದ್ದ. ಮೂರುತಿಂಗಳ ಕೆಳಗೆ ಆತನ ಹೆಂಡತಿ ಕಾಲವಾದಳು. ತಂದೆತಾಯಿ
ಅದಕ್ಕೆ ಮುಂಚೆಯೇ ಕಾಲವಾದರಂತೆ....ಪಾಪ....ಮಕ್ಕಳೊಂದಿಗ. ತುಂಬಾ
ಅವಸ್ಥೆಪಡುತ್ತಿದಾನೆ ಎಂದು ಸಹಾನುಭೂತಿ ಪ್ರಕಟಿಸಿದ್ದ.

ಅಣ್ಣ ಈ ವಿಷಯಗಳನ್ನೆಲ್ಲಾ ತನಗೇಕೆ ಬರೆದನೋ ಅರ್ಥವಾಗಲಿಲ್ಲ
ಜಾನಕಿಗೆ. ತನ್ನ ನಿರ್ಣಯವನ್ನು ಎಂದೋ ಅಣ್ಣನಿಗೆ ಹೇಳಿಯಾಗಿತ್ತು. ಮತ್ತೆ
ಈ ಪ್ರಸ್ತಾಪ ಏಕೆ ಬಂತು? ಇಲ್ಲಾ ಶಾಂತನನ್ನು ಕೊಟ್ಟು ಮದುವೆ ಮಾಡಿ
ದರೆ ಚನ್ನಾಗಿರುತ್ತದೆಯೆಂದು ಅಣ್ಣನ ಅಭಿಪ್ರಾಯವೇ? ಶಾಂತಳಂತಹ
ಹುಡುಗಿ, ಆ ಹಳ್ಳಿಗಾಡಿನಲ್ಲಿ ಆ ಮಕ್ಕಳ ತಂದೆಯೊಂದಿಗೆ ಸಂಸಾರ ಮಾಡು
ವುದು ನಿಜವೇ?

ಅವಶ್ಯಕತೆಯಿದ್ದುದರಿಂದ ರಹಸ್ಯವಾಗಿ ಬಂದು ತನ್ನೊಂದಿಗೆ ಐದು
ನಿಮಿಷ ಮಾತನಾಡಿದ ಪಾಪಕ್ಕೆ, ಹೆಂಡತಿಯನ್ನು ಅನುಮಾನಿಸಿ, ಅವಮಾನಿ
ಸಿದ ಭೂಪ....ಈಗ....ಒಂದು ಸಲ ಮನೆ ಬಿಟ್ಟು ಓಡಿಹೋದ ನಿಂದೆಯನ್ನು
ಹೊತ್ತ ಶಾಂತಳನ್ನು ಮಾಡಿಕೊಳ್ಳುತ್ತಾನೆಯೇ? ಇದು ಅರ್ಥವಿಲ್ಲದ
ಆಲೋಚನೆ ಎಂದುಕೊಂಡಳು ಜಾನಕಿ.

ಶಾಂತಳನ್ನು ಎಂ.ಎಸ್ಸಿ. ಓದಿಸಬೇಕು. ಇಲ್ಲಾ ಯಾವುದಾದರೂ ಕೆಲಸ
ದಲ್ಲಿ ಸೇರಿಸಬೇಕು. ಅವಳಿಗೆ ಸರಿಯಾದ ವರನನ್ನು ಅವಳೇ ಹುಡುಕಿಕೊಳ್ಳು
ತ್ತಾಳೆ ಎಂದುಕೊಂಡಳು. ಪ್ರಕಾಶನಿಗೂ ಈ ಆಲೋಚನೆ ಸರಿಯೆನಿಸಿತ್ತು.
ಶಾಂತ ಎಂ.ಎಸ್ಸಿ. ಓದುವುದಾದರೆ ತಾನೂ ಸ್ವಲ್ಪ ಹಣ ಸಹಾಯ
ಮಾಡುತ್ತೇನೆಂದ.

* * *

ಬದಲಾಗುತ್ತಿರುವ ತನ್ನ ಮನೋರೀತಿಗೆ, ಶಾಂತ ಕೆಲವು ದಿನ ತನ್ನಿಂದ
ದೂರವಾಗಿರುವುದು ಒಳಿತೆನಿಸಿತು ಜಾನಕಿಗೆ. ಈ ಓದಿನಿಂದಾಗಿ ಶಾಂತ ಎರಡು
ವರ್ಷ ತನ್ನಿಂದ ದೂರವಾಗಿದ್ದರೆ ಇಷ್ಟರಲ್ಲಿ ಅಸ್ತವ್ಯಸ್ತವಾಗಿರುವ ತನ್ನ
ಆಲೋಚನೆಗಳಿಗೆ ಒಂದು ರೂಪ ಮಾರ್ಪಟ್ಟು, ಬದುಕಿನಲ್ಲಿ ಒಂದು ಸ್ಥಿರತೆ
ಏರ್ಪಡಬಹುದೆಂದು ಭಾವಿಸಿದಳು. ಆರ್ಥಿಕವಾಗಿ ತನಗೆ ಭಾರವೆನಿಸಿದರೂ

ತಂಗಿಯನ್ನು ಉನ್ನತ ವ್ಯಾಸಂಗಕ್ಕಾಗಿ ಪ್ರೋತ್ಸಾಹಿಸಿದಳು.

"ಇನ್ನೂ ಮುಂದೆ ಓದಲು ನನಗಿಷ್ಟವಿಲ್ಲಕ್ಕಾ. ರಾತ್ರಿ–ಹಗಲೂ ಕಷ್ಟ ಪಟ್ಟು ನಾನು ಓದಲಾರೆ? ಎಂದು ಖಂಡಿತವಾಗಿ ಹೇಳಿಬಿಟ್ಟಳು ಶಾಂತ.

"ಮತ್ತೇನು ಮಾಡೋಣಾಂತೀಯ?" ಜಾನಕಿ ಪ್ರಶ್ನಿಸಿದಳು.

"ಯಾವುದಾದರೂ ಕೆಲಸಕ್ಕೆ ಸೇರೋಣಾಂತ."

"ಈಗಿನ ಕಾಲದಲ್ಲಿ ಬರೀ ಬಿ.ಎಸ್ಸಿ.ಗೆ ಒಳ್ಳೆ ಕೆಲಸ ಸಿಗ್ತೋದು ಕಷ್ಟ, ಶಾಂತಾ. ಎಂ.ಎಸ್ಸಿ. ಆದರೆ ಕಾಲೇಜಿನಲ್ಲಿ ಲೆಕ್ಚರರ್ ಕೆಲಸ ಸಿಕ್ಕಬಹುದು."

"ನಿನ್ನಷ್ಟು ರೂಪ, ವಿದ್ಯೆ ಇರುವವರಿಗೆ ಸುಲಭವಾಗಿಯೇ ಕೆಲಸ ಸಿಕ್ಕುತ್ತೆ ಶಾಂತಾ" ಎಂದ ಗೋವಿಂದಬಾಬು.

"ತಮಗೆ ತಿಳಿದವರೊಂದಿಗೆ ಹೇಳಿ ಯಾವುದಾದರೂ ಕೆಲಸ ಕೊಡಿಸು ತ್ತಾರಂತೆ." ನಿಶ್ಚಿಂತೆಯಿಂದ ಹೇಳಿದಳು ಶಾಂತ.

ಒಬ್ಬರ ಬಲತ್ಕಾರದಿಂದ ಓದಲು ಪ್ರಯತ್ನಿಸಿದರೆ ಪ್ರಯೋಜನವಿರುವು ದಿಲ್ಲ. ಶಾಂತಳ ಇಷ್ಟದಂತೆಯೇ ಆಗಲಿ. ಕೆಲಸಮಾಡುತ್ತಾ ತನಗೆ ಬೇಕಾದ ವರನನ್ನು ತಾನೇ ಹುಡುಕಿಕೊಳ್ಳುತ್ತಾಳೆ. ನಿನ್ನ ಹಾಗೆ ಕೊನೆಯವರೆವಿಗೂ ಕೆಲಸ ಮಾಡೋಲ್ಲ ಶಾಂತ. ದುಡ್ಡು ಖರ್ಚುಮಾಡಿ ಓದು ಹೇಳಿಸಿದರೂ ಪ್ರಯೋಜನವಿಲ್ಲ" ಎಂದ ಪ್ರಕಾಶ.

"ನಿಮ್ಮ ಶಾಂತನ ಕೆಲಸದ ವಿಷಯ ನನಗೆ ಬಿಡಿ. ನೀವೇನೂ ಚಿಂತಿಸ ಬೇಡಿ" ಎಂದ ಗೋವಿಂದಬಾಬು.

ಎರಡು ಮೂರು ತಿಂಗಳು ಕಳೆದಿತ್ತು. ಗೋವಿಂದಬಾಬು ಶಾಂತಳ ಕೆಲಸಕ್ಕಾಗಿ ಶ್ರದ್ಧೆಯಿಂದ ಪ್ರಯತ್ನಿಸಿದಂತೆ ಕಾಣಲಿಲ್ಲ ಜಾನಕಿಗೆ. ಆತ ಪ್ರಯತ್ನಿಸಿದ್ದರೆ ಸಿಕ್ಕಬಹುದಾಗಿದ್ದ ಒಂದೆರಡು ಕೆಲಸಗಳನ್ನು ಬೇಕೆಂದೇ ನಿರ್ಲಕ್ಷ್ಯ ಮಾಡಿದಂತೆನಿಸಿತು.

"ನೀವು ಸ್ವಲ್ಪ ಪ್ರಯತ್ನಿಸಿದರೆ ಆ ಕೆಲಸ ಸಿಕ್ಕುತ್ತಿತ್ತು ಶಾಂತನಿಗೆ" ಎಂದಳು ಜಾನಕಿ.

"ಅದು ಶಾಂತನಿಗೆ ತಕ್ಕ ಕೆಲಸವಲ್ಲ ಜಾನಕಿ. ಹಗಲೆಲ್ಲಾ ಆ ಲ್ಯಾಬರೇ ಟರಿಯಲ್ಲಿ, ಆಸಿಡ್‌ಗಳ ಮಧ್ಯೆ ಕುಳಿತಿರಲಾರಳು ಶಾಂತ. ಅವಳಿಗೆ ಅದಕ್ಕಿಂತಲೂ ಉತ್ಸಾಹಕರವಾದ ಕೆಲಸ ಬೇಕು. ಶಾಂತನಿಗೆ ಸರಿಹೋಗು ವಂಥಾ ಕೆಲಸಕ್ಕೋಸ್ಕರಾನೇ ನೋಡುತ್ತಿದೀನಿ. ಬೇಗಲೇ ಸಿಕ್ಕಬಹುದು" ಎಂದ ಗೋವಿಂದಬಾಬು ನಿಧಾನವಾಗಿ.

"ಯಾವುದೋ ಒಂದು ಕೆಲಸ ಸಿಕ್ಕಿದರೆ ಸಾಕು, ಗೋವಿಂದಬಾಬೂ.

ಕೆಲಸ ಮಾಡದೆ ಯಾರು ತಾನೇ ಸಂಬಳ ಕೊಡುತ್ತಾರೆ. ಓದು, ಕೆಲಸ ಯಾವುದೂ ಇಲ್ಲದೆ ಶಾಂತ ಹೀಗಿರೋದು ನನಗೇನೂ ಚೆನ್ನಾಗಿಲ್ಲ" ಎಂದಳು ಜಾನಕಿ.

"ಅದೂ ನಿಜಾನ್ನಿ. ಆದರೂ ಎರಡುಮೂರು ವಸ್ತುಗಳನ್ನು ಎದುರಾಗಿಸಿ ಕೊಂಡು, ಯಾವುದಾದರೊಂದನ್ನು ಆರಿಸಿಕೊಳ್ಳ ಹೇಳಿದರೆ ಸ್ವಲ್ಪ ಯೋಚಿಸಿ ನಮಗೆ ಒಳ್ಳೆಯದೆನ್ನಿಸಿದ್ದನ್ನ ಆರಿಸಿಕೊಳ್ಳುತ್ತೇವೆ. ಇರೋದು ಒಂದೇ ಎಂದಾಗ ಯಾವ ಆಲೋಚನೆಯೂ ಇರುವುದಿಲ್ಲ" ಎಂದ.

ಗೋವಿಂದ ಬಾಬುವಿನಿಂದ ಈ ವಿಷಯದಲ್ಲಿ ತಮಗೇನೂ ಸಹಾಯ ವಾಗುವಂತಿಲ್ಲವೆಂದು ನಿಶ್ಚಯಿಸಿಕೊಂಡಳು ಜಾನಕಿ. ಆತ ಬೇಕೆಂದು ಕೈಗೆ ಬಂದ ಅವಕಾಶವನ್ನು ಏಕೆ ತಳ್ಳಿಹಾಕುತ್ತಿದ್ದಾನೋ ಜಾನಕಿಗೆ ಅರ್ಥವಾಗ ಲಿಲ್ಲ. ಅನಸೂಯಮ್ಮನವರಿಗೆ ಒಂದು ಮಾತು ಹೇಳಿ ಬರೋಣವೆಂದು ಅಲ್ಲಿಗೆ ಹೋದಳು. ಶಾಂತ ಹಣ ಸಂಪಾದಿಸಿ ತನ್ನ ಬೊಗಸೆಯನ್ನು ತುಂಬಬೇಕೆಂಬ ಅಭಿಪ್ರಾಯ ಅವಳಿಗಿರಲಿಲ್ಲ. ಹೀಗೆ ಕೆಲಸಕಾರ್ಯ ಇಲ್ಲದೆ ಸೋಮಾರಿಯಾಗಿ ಕುಳಿತಿದ್ದರೆ ಶಾಂತಳ ಮನಸಿನಲ್ಲಿ ಸಲ್ಲದ ಆಲೋಚನೆಗಳು ಹುಟ್ಟಿ ಏನಾಗು ವುದೋ ಎಂದವಳ ಭಯ. ಅಕ್ಕನ ಭಯವನ್ನು ಹೋಗಲಾಡಿಸಲು ಶಾಂತ ಪ್ರಯತ್ನಿಸಲಿಲ್ಲ. ತಂಗಿ ಮಾನಸಿಕವಾಗಿ ಬೆಳೆಯುವವರೆಗೂ ಕೆಲಸ, ಬಾಧ್ಯತೆ ಎಂಬ ಹಗ್ಗಗಳಿಂದ ಅವಳನ್ನು ಬಂಧಿಸಿಡುವುದೇ ಸರಿಯಾದ ದಾರಿಯೆನಿಸಿತು ಜಾನಕಿಗೆ.

ಒಂದು ಕೆಲಸಕ್ಕೋಸ್ಕರ ಜಾನಕಿ ಅನಸೂಯಮ್ಮನ ಬಳಿ ಹೋದರೆ ಇನ್ನೊಂದು ಕೆಲಸ ಎದುರಾಗಿತ್ತು. ಅನಸೂಯಮ್ಮನ ಗಂಡನ ಕಡೆಯವರ ಮನೆಯಲ್ಲಿ ಯಾವುದೋ ಶುಭಕಾರ್ಯ ನಡೆಯುವುದಿತ್ತಂತೆ. ಆಕೆ ಹೋಗಿಯೇ ತೀರಬೇಕಾದ ಪರಿಸ್ಥಿತಿ ಏರ್ಪಟ್ಟಿತ್ತು. ಅನಸೂಯಮ್ಮ ಮರಣಶಾಸನ ಬರೆಯದೆ ಸತ್ತುಹೋದರೆ ಆಕೆಯ ಆ ಸ್ಥಿತಿಯಲ್ಲಿ ಕೊಂಚ ಭಾಗ ಆ ದಾಯಾದಿ ಗಳಿಗೆ ಸೇರುತ್ತಿತ್ತು. ಆ ಕಾರಣದಿಂದಾಗಿ ಅವರು ಅನಸೂಯಮ್ಮನ ಬಳಿ ಎಲ್ಲಿಲ್ಲದ ಅಭಿಮಾನ ನಟಿಸುತ್ತಾ, "ದೊಡ್ಡವರು, ನೀವಿಲ್ಲದೆ ಈ ಶುಭಕಾರ್ಯ ನಡೆಯುವಂತಿಲ್ಲ. ತಪ್ಪದೆ ಬರಲೇಬೇಕು" ಎಂದು ಹಠ ಹಿಡಿದಿದ್ದರು.

"ನನಗೆ ಜತೆಯಾಗಿ ನೀನೂ ಬಾ, ಜಾನಕಿ" ಎಂದರು, ಆಕೆ.

"ಅವರು ಯಾರೋ ನನಗೆ ಗೊತ್ತಿಲ್ಲ. ಇಂತಹ ಶುಭಕಾರ್ಯಗಳಲ್ಲಿ ಭಾಗವಹಿಸುವ ಅಭ್ಯಾಸವೂ ಇಲ್ಲ ನನಗೆ. ಏನೋ ಒಂದು ತರಹ ಇರುತ್ತೆ ನನಗೆ" ಎಂದು ತಪ್ಪಿಸಿಕೊಳ್ಳಲು ಪ್ರಯತ್ನಿಸಿದಳು ಜಾನಕಿ.

"ನಿನಗೆ ತಿಳಿಯದಿದ್ದರೇನಂತೆ? ನನಗೆ ಗೊತ್ತಲ್ಲ. ನೀನು ನನ್ನೊಂದಿಗೆ ಬರುತ್ತಿದ್ದಿ. ಇಷ್ಟಕ್ಕೂ ಎಷ್ಟೋ ದಿನ ಬೇಕಾಗಿಲ್ಲ. ನಾಳೆ ಹೊರಟರೆ ಒಂದು ದಿನ ಇದ್ದು ಬಂದುಬಿಡೋದೇ" ಎಂದರಾಕೆ.

ಅನಸೂಯಮ್ಮನ ಮಾತಿಗೆ ಇಲ್ಲ ಎನ್ನುವ ಅಭ್ಯಾಸವಿರಲಿಲ್ಲ ಜಾನಕಿಗೆ. ಈ ಪ್ರಯಾಣ ತಪ್ಪಲಿಲ್ಲ ಅವಳಿಗೆ.

* * *

ಅನಸೂಯಮ್ಮ ಹೇಳಿದಂತೆಯೇ ಎರಡು ದಿನದಲ್ಲಿ ಜಾನಕಿಯೊಂದಿಗೆ ವಾಪಸಾದರು. ಆಕೆಯನ್ನು ಮನೆಯ ಬಳಿ ಬಿಟ್ಟು ತನ್ನ ರೂಮಿನ ಕಡೆ ನಡೆದಳು ಜಾನಕಿ. ಹಿಂದಿನ ದಿನ ಮಳೆ ಬಿದ್ದುದರಿಂದಾಗಿ ನೆಲ ತೇವವಾಗಿತ್ತು. ಮಳೆಯ ನೀರಿನಲ್ಲಿ ನೆನೆದು ಸ್ವಚ್ಛವಾಗಿದ್ದ ಎಲೆ, ಹೂ ಬಣ್ಣಬಣ್ಣಗಳಿಂದ ಕಳೆಕಳೆಯಾಗಿ ಕಾಣುತ್ತಿತ್ತು. ಎಳೆಯ ಸಸಿಗಳು ಗಾಳಿಗೆ ಅಲ್ಲಾಡುತ್ತಾ ಮನಸ್ಸಿಗೆ ಅಹ್ಲಾದವನ್ನುಂಟುಮಾಡುತ್ತಿದ್ದುವು.

ಸ್ವಲ್ಪ ಹೊತ್ತು ತನ್ಮಯತೆಯಿಂದ ಸುತ್ತಲೂ ನೋಡುತ್ತಾ ನಿಂತುಬಿಟ್ಟಳು ಜಾನಕಿ. ಹೊರಲಾರದ ಆಭರಣಗಳಿಂದ, ಹೊಸ ರೇಷ್ಮೆ ಸೀರೆಗಳ ಮುರಮುರ ಶಬ್ದದಿಂದ, ಹೂ, ಸೆಂಟುಗಳ ವಾಸನೆಯಿಂದ ಮಿಳಿತಗೊಂಡ ಘಾಟು ಸುವಾಸನೆಯಿಂದ ಮೂರ್ಛೆಗೊಳಿಸುವಂತಿದ್ದ ಮದುವೆ ಮನೆಯನ್ನು ಬಿಟ್ಟು ಪ್ರಕೃತಿಯ ಮಡಿಲೊಳಕ್ಕೆ ಬಂದ ಜಾನಕಿ ಸಂತೃಪ್ತಿಯಿಂದ ನಿಟ್ಟುಸಿರು ಬಿಟ್ಟಳು. ಭಗವಂತ ಮನುಷ್ಯನಿಗೆ ಪ್ರಸಾದಿಸಿದ ಈ ವರಕ್ಕೆ ಮನಸ್ಸಿನಲ್ಲಿಯೇ ಕೃತಜ್ಞತೆ ಅರ್ಪಿಸಿದಳು ಜಾನಕಿ. ಮಧುರವಾದ ಊಹೆಗಳು ಮನಸಿನಲ್ಲಿ ಸುಳಿಯುತ್ತಿರಲು ಮೆಲ್ಲನೆ ಮನೆ ಸೇರಿದಳು ಜಾನಕಿ.

ಮನೆಯಲ್ಲಿ ಶಾಂತ ಇರಲಿಲ್ಲ. "ಬೆಳಿಗ್ಗೇನೇ ಶಾಂತಮ್ಮ ಎಲ್ಲಿಗೋ ಹೋದರು. ಇನ್ನೂ ಬಂದಿಲ್ಲ" ಎಂದ ಗಿಡಗಳಿಗೆ ಪಾತಿ ಮಾಡುತ್ತಿದ್ದ ಮಾಲಿ.

"ಈ ಬೀಗದ ಕೈ ನೀವು ಬಂದರೆ ಕೊಡೂಂದರು" ಎಂದು ಬೀಗದ ಕೈ ತೆಗೆದು ಜಗುಲಿಯ ಮೇಲಿಟ್ಟ.

ಜಾನಕಿ ಬೀಗ ತೆಗೆದು ಒಳಕ್ಕೆ ಹೋದಳು. ಮನೆಯಲ್ಲಿ ಪಾತ್ರೆ ಪದಾರ್ಥ ಎಲ್ಲಿಯದಲ್ಲಿ ಬಿದ್ದಿತ್ತು. ಈ ದಿನ ತಾನು ಪ್ರಯಾಣದಿಂದ ದಣಿದು ಮನೆಗೆ ಬರುತ್ತೇನೆಂದು ತಿಳಿದೂ ಶಾಂತ, ಮನೆಯನ್ನು ಈ ಪರಿಸ್ಥಿತಿಯಲ್ಲಿ ಬಿಟ್ಟು ಹೋಗಿರುವುದು ಜಾನಕಿಗೆ ತುಂಬಾ ನೋವನ್ನುಂಟುಮಾಡಿತು. ಅಭಿಮಾನ ಅನ್ನೋದು ಮನಸ್ಸಿನಲ್ಲಿರಬೇಕು, ಒಬ್ಬರು ಹೇಳಿಕೊಟ್ಟರೆ ಬರೋದಲ್ಲ ಎನ್ನಿಸಿತು.

ಮನೆಯನ್ನು ಶುಭ್ರಗೊಳಿಸಿ, ಸ್ನಾನಮಾಡಿ, ಕಾಫಿ ಮಾಡಿಕೊಂಡು ಕುಡಿದಳು. ಆಗ್ಯೂ ಶಾಂತ ಬರಲಿಲ್ಲ. ಬೀದಿ ಬಾಗಿಲಲ್ಲಿ ನಿಂತು ನಿರೀಕ್ಷಿಸಿದಳು. ಮೆಯಿನ್‌ಗೇಟೂ, ಆ ರಸ್ತೆ ನಿರ್ಮಾನುಷ್ಯವಾಗಿತ್ತು.

"ಶಾಂತ ಎಲ್ಲಿಗೆ ಹೋಗಿರಬಹುದು? ತಿರುಗಾಡಲು ಹೋಗಿದ್ದರೂ ಇಷ್ಟು ಹೊತ್ತಿಗೆ ಬರಬೇಕಾಗಿತ್ತಲ್ಲಾ! ಗೋವಿಂದಬಾಬುವಿನೊಂದಿಗೆ ಹರಟೆ ಹೊಡೆಯುತ್ತಾ ವೇಳೆಯನ್ನು ಮರೆತುಬಿಟ್ಟಳೆ? ಇಲ್ಲಾ ಇಬ್ಬರೂ ಎಲ್ಲಿಗಾದರೂ ಹೋಗಿರಬಹುದೇ? ಅವಳಿಗೇನೂ ತೋಚಲಿಲ್ಲ.

ತೋಟದ ಮಾಲಿ ಇನ್ನೂ ಆ ಪಕ್ಕದಲ್ಲಿಯೇ ಕೆಲಸ ಮಾಡುತ್ತಿದ್ದ.

"ಮಲ್ಲಯ್ಯಾ ಶಾಂತಳೊಂದಿಗೆ ಬೇರೆ ಯಾರಾದರೂ ಇದ್ದರೇ?" ಎಂದು ಕೇಳಿದಳು.

"ಇಲ್ಲಮ್ಮಾ, ಶಾಂತಮ್ಮ ಒಬ್ಬರೇ ಹೋದರು" ಎಂದ.

ಪ್ರಕಾಶನಿಗೇನಾದರೂ ತಿಳಿದಿರಬಹುದೇ? ಅವನ ಪುಸ್ತಕದ ಅಂಗಡಿಯ ಪಕ್ಕದಲ್ಲಿದ್ದ ಜವಳಿ ಅಂಗಡಿಯಲ್ಲಿ ಟೆಲಿಫೋನು ಇತ್ತು. ಎಂದಾದರೂ ಸಮಯ ಬಿದ್ದಾಗ ಅಲ್ಲಿಂದ ಮಾತನಾಡುತ್ತಿದ್ದ ಪ್ರಕಾಶ. ಜಾನಕಿ ಬೇಕೆಂದರೆ ಪ್ರಕಾಶನಿಗೆ ಹೇಳಿಕಳುಹಿಸುತ್ತಿದ್ದ ಆ ಅಂಗಡಿಯ ಯಜಮಾನ.

ಪ್ರಕಾಶನಿಗೆ ಫೋನ್ ಮಾಡೋಣವೆಂದು ಆಫೀಸಿಗೆ ಹೋದಳು ಜಾನಕಿ.

"ನನಗೇನೂ ಗೊತ್ತಿಲ್ಲವಲ್ಲಾ" ಎಂದ ಪ್ರಕಾಶ.

"ನಿನ್ನೆ ಸಾಯಂಕಾಲ ಕತ್ತಲಾಗುವವರೆಗೂ ನಿಮ್ಮ ಮನೇಲೇ ಇದೀನಿ ನಾನು. ಗೋವಿಂದಬಾಬುವಾಗಲೀ, ಶಾಂತಾಳಾಗಲೀ ಏನೂ ಹೇಳಲಿಲ್ಲ. ಆಕಸ್ಮಾತ್ತಾಗಿ ಏನಾದರೂ ಪ್ರೋಗ್ರಾಂ ಹಾಕಿರಬಹುದು ಬರುತ್ತಾರೆ ಬಿಡು. ಗಾಬರಿಯೇಕೆ?" ಎಂದ.

"ಶಾಂತಳೊಂದಿಗೆ ಗೋವಿಂದಬಾಬು ಇದಾರಾ?" ಮತ್ತೆ ಪ್ರಕಾಶನೇ ಪ್ರಶ್ನಿಸಿದ.

"ನನಗೇನೂ ಗೊತ್ತಿಲ್ಲ. ಈಗತಾನೇ ಊರಿನಿಂದ ಬಂದೆ."

"ಹೌದು, ಶಾಂತ ಹೇಳಿದಳು. ಯಾವುದೋ ಮದುವೆಗೆ ಹೋಗಿದ್ದೆಯಂತಲ್ಲಾ, ನಾನು ಸಾಯಂಕಾಲ ಬರ್ತೀನಿ. ಶಾಂತಳೊಂದಿಗೆ ಗೋವಿಂದ ಬಾಬು ಇದಾರೋ ಇಲ್ಲವೋ ತಿಳಿದುಕೊಂಡು ನನಗೆ ಫೋನು ಮಾಡು" ಎಂದ ಪ್ರಕಾಶ.

ಜಾನಕಿ ಅಲ್ಲಿಂದ ಅನಸೂಯಮ್ಮನ ಬಳಿಗೆ ಹೋದಳು. ಆಕೆ ಆಗ

ತಾನೇ ವರಾಂಡಾದೊಳಕ್ಕೆ ಹೆಜ್ಜೆಯಿಡುತ್ತಿದ್ದರು.

"ಅರ್ಜೆಂಟಾಗಿ ಏನೋ ಕೆಲಸ ಇದೇಂತ ಗೋವಿಂದು ಒಂದು ವಾರ ರಜಾ ಹಾಕಿ ಮನೆಗೆ ಹೋಗಿದಾನೆ, ಜಾನಕಿ. ಇನ್ನು ಈ ವಾರವೆಲ್ಲಾ ನೀನೇ ಕೆಲಸ ನೋಡಿಕೋಬೇಕು. ಮೊದಲೇ ದಣಿದಿದ್ದಿ. ಈವತ್ತಿನ ಕೆಲಸ ಬೇಗ ಮುಗಿಸಿ ವಿಶ್ರಾಂತಿ ತೆಗೆದುಕೋ" ಎಂದರಾಕೆ.

'ಅಂತ ಅರ್ಜೆಂಟ್ ಕೆಲಸ ಏನಪ್ಪಾ' ಎಂದು ಆಲೋಚಿಸಿದಳು ಜಾನಕಿ. ಗೋವಿಂದ ಬಾಬು ಊರಿಗೆ ಹೋದರೆ ಶಾಂತ ಯಾರೊಂದಿಗೆ ಹೋಗಿರುತ್ತಾಳೆ" ಮನಸು ಹಿಂದೆ ಮುಂದೆ ನೋಡುತ್ತಲೇ ಸಂಶಯ ವ್ಯಕ್ತಪಡಿಸಿತು.

"ನಡೆ ಜಾನಕಿ, ಮಕ್ಕಳನ್ನು ನೋಡಿ ಬರೋಣ. ನಾಲ್ಕು ದಿನ ವಾಯಿತು ನೋಡಿ" ಎನ್ನುತ್ತಾ ಹೊರಟರು ಅನಸೂಯಮ್ಮ.

ಆಕೆಯ ಕೈಗೋಲಿನ ನೆರಳನ್ನು ನೋಡುತ್ತಾ ಹೆಜ್ಜೆ ಹಾಕತೊಡಗಿದಳು ಜಾನಕಿ. ಆಫೀಸನ್ನು ದಾಟಿ ಮುಂದಕ್ಕೆ ಹೆಜ್ಜೆಯಿಡುತ್ತಿದ್ದಾಗ ಜವಾನ ಒಂದು ಕವರನ್ನು ಆಕೆಯ ಕೈಯಲ್ಲಿಟ್ಟು, "ಅಯ್ಯನವರು ನಿಮಗೆ ಕೊಡು ಅಂದರು" ಎಂದ.

ಜಾನಕಿ ಆ ಕವರನ್ನು ಹಿಂದೆ ಮುಂದೆ ತಿರುಗಿಸಿ ನೋಡಿದಳು. ಒಬ್ಬರಿಗೆ ಒಬ್ಬರು ನೇರವಾಗಿ ಹೇಳಲಾರದ ವಿಷಯಗಳನ್ನು ಕಾಗದಗಳ ಮೂಲಕ ಹೇಳುವುದು ಸುಲಭ. ತನ್ನ ಕಾಗದದಲ್ಲಿನ ವಿಷಯಗಳ ಮೇಲೆ ಒಂದು ನಿರ್ಣಯಕ್ಕೆ ಬರಲು ತನಗೆ ವಾರದ ಅವಧಿ ಆವಶ್ಯಕ ಎಂದು ಗೋವಿಂದ ಬಾಬು ಭಾವಿಸಿರುತ್ತಾರೆ. ಆದ್ದರಿಂದಲೇ ಅರ್ಜಂಟ್ ಕೆಲಸದ ನೆಪ ಹೇಳಿ ಹೊರಟುಹೋಗಿರುತ್ತಾರೆ ಎಂದುಕೊಂಡಳು.

ಅವಳ ಮುಖದಲ್ಲಿನ ಭಾವಪರಿವರ್ತನೆಯನ್ನು ನೋಡಿ ಕಿರುನಗೆ ನಕ್ಕರು ಅನಸೂಯಮ್ಮ. ಈ ಸಲ ಗೋವಿಂದಬಾಬು ಬಂದಾಗಿನಿಂದ ಅವರಿಬ್ಬರನ್ನು ಕುರಿತ ಆಲೋಚನೆಗಳು ಜೋಡಿಯಾಗಿಯೇ ಅವರ ಮನಸಿನಲ್ಲಿ ಸುಳಿಯುತ್ತಿದ್ದುವು. 'ಒಳ್ಳೇ ಜೋಡಿ' ಎಂದು ಎಷ್ಟೋ ಸಲ ಅಂದುಕೊಂಡಿದ್ದರು.

ಸಾಯಂಕಾಲದವರೆವಿಗೂ ಪ್ರಶಾಂತವಾಗಿ ಕುಳಿತು ಆ ಕಾಗದವನ್ನು ಓದುವ ಅವಕಾಶವೇ ಸಿಕ್ಕಲಿಲ್ಲ ಜಾನಕಿಗೆ. ಮನೆಗೆ ಹೋಗುವ ದಾರಿಯಲ್ಲಿ ಲಾನ್ ಪಕ್ಕದಲ್ಲಿದ್ದ ನೂರುವರಹದ ಗಿಡದ ಕೆಳಗಿನ ಕಲ್ಲು ಬೆಂಚಿನ ಮೇಲೆ ಕುಳಿತು, ಆತುರದಿಂದ ಕವರ್ ಹರಿದಳು.

ಒಂದು ಕ್ಷಣ ಕಣ್ಣು ಮುಚ್ಚಿಕೊಂಡು ಅದರಲ್ಲಿನ ವಿಷಯ ತನಗೆ ಕೊಡುವ ಆನಂದವನ್ನು ಮನನ ಮಾಡಿಕೊಂಡಳು. ಆ ಸಮಯದಲ್ಲಿ ಅವಳಿಗೆ

ಶಾಂತಳ ನೆನಪಾಗಲಿಲ್ಲ. ಮನೆಗೆ ಬಂದಿದಾಳೆಯೋ ಇಲ್ಲವೋ ಎಂಬ ಗಾಬರಿ ಇರಲಿಲ್ಲ. ಗೋವಿಂದ ಬಾಬು ಊರಿನಲ್ಲಿಲ್ಲವೆಂದು ಪ್ರಕಾಶನಿಗೆ ಫೋನ್ ಮಾಡಬೇಕೆಂಬ ನೆನಪೂ ಉಳಿಯಲಿಲ್ಲ.

ಸುಂದರವಾಗಿ ಸುತ್ತುತ್ತಿದ್ದ ಆನಂದಾಬ್ಧಿಯಲ್ಲಿ, ಅನುರಾಗದ ದೋಣಿಯಲ್ಲಿ ತೇಲಿಹೋಗುತ್ತಾ, ತನ್ನ ಪಕ್ಕದಲ್ಲಿ ಗೋವಿಂದ ಬಾಬು ಮಧುರವಾಗಿ ಲಯಬದ್ಧವಾಗಿ ಹಾಡುತ್ತಿರುವ ಜೀವನರಾಗವನ್ನು ಕೇಳುತ್ತಾ, ತನ್ಮಯಾವಸ್ಥೆಯಲ್ಲಿ ಮುಳುಗಿ ತೇಲುತ್ತಾ....

'ಹುಂ. ಇನ್ನು ಆಲೋಚನೆ ಸಾಕು ಅದರಲ್ಲೇನು ಬರೆದಿದೆಯೋ ಓದಿ ನೋಡು' ಎಂದು ಅವಳ ಮನಸ್ಸು ಎಚ್ಚರಿಸಿತು.

'ಇನ್ನೇನಿರುತ್ತೆ! ಪ್ರಿಯ ಜಾನಕಿ, ನಿನ್ನ ಎದುರಿಗೆ ಈ ಮಾತುಗಳನ್ನು ಹೇಳಲು ಸಂಕೋಚದಿಂದ....'

'ಛೀ! ಗೋವಿಂದ ಬಾಬುವಿಗೆ ಇಷ್ಟು ಸಂಕೋಚವೇ? ಈ ಮಾತನ್ನು ಆತನ ಬಾಯಿಂದಲೇ ಕೇಳಬೇಕೆಂದು ಎಷ್ಟು ಆತುರದಿಂದಿದ್ದೆ! ಗಂಡಸರು ಇಂತಹ ಮಾತುಗಳನ್ನು ಎಷ್ಟೋ ಮಧುರವಾಗಿ ಹೊರಗೆಡಹುತ್ತಾರೆ ಅನ್ನುತ್ತಾರಲ್ಲಾ! ಇಷ್ಟು ಆನಂದಕರವಾದ ಸಮಾಚಾರವನ್ನು ನಿರ್ಜೀವವಾದ ಕಾಗದದ ಮೂಲಕ ತಿಳಿಸಿದಾರಲ್ಲಾ!

ಆಲೋಚನೆಗಳ ಮಧ್ಯದಲ್ಲಿ ಕಾಗದ ಕೈಯಲ್ಲಿ ನಲುಗಿಹೋಗುತ್ತಿರುವ ವಿಷಯವನ್ನೂ ಜಾನಕಿ ಗ್ರಹಿಸಿರಲಿಲ್ಲ. ತನ್ನ ಆವೇಶಕ್ಕೆ ತಾನೇ ನಾಚಿ ಕಾಗದವನ್ನು ಸಾಪು ಮಾಡಿದಳು. ಓದುವ ಮುಂಚೆ ಮತ್ತೊಮ್ಮೆ ಆ ಕಾಗದದ ಕಡೆಗೆ ನಿದಾನವಾಗಿ ದೃಷ್ಟಿ ಹರಿಸಿದಳು. ಪ್ರಾಣವಿಲ್ಲದ ಈ ಕಾಗದ ತನ್ನನ್ನು ಹೇಗೆ ಆಟವಾಡಿಸುತ್ತಿದೆ ಎಂದುಕೊಂಡಳು.

ಸಂಬೋಧನೆಯ ಬಳಿ ಕ್ಷಣಕಾಲ ಅವಳ ದೃಷ್ಟಿ ಆಲೋಚನಾಶೂನ್ಯವಾಗಿ ನಿಂತಿತು.

"ಜಾನಕಿ!

ಈ ಕಾಗದದ ಪ್ರಾರಂಭದಲ್ಲಿಯೇ ನನ್ನ ಸ್ವಾರ್ಥಪರತೆಗಾಗಿ ನಿಮ್ಮ ಕ್ಷಮೆ ತೋರುತ್ತಿದೇನೆ. ನಿಮ್ಮ ಅನುರಾಗವನ್ನು ಆಟದ ಗೊಂಬೆಯಂತೆ ಬಳಸಿಕೊಂಡಿದ್ದಕ್ಕಾಗಿ ಮತ್ತೊಮ್ಮೆ ನಿಮ್ಮ ಕ್ಷಮೆ ಕೋರುತ್ತಿದೇನೆ.

ಮೊದಲ ಸಲ ಬಾಲವಿಹಾರವನ್ನು ಬಿಟ್ಟು ಬಂದಾಗ ನನ್ನ ಮನಸಿನಲ್ಲಿ ವಿಧವಿಧವಾದ ಆಲೋಚನೆಗಳು ಗಜಿಬಿಜಿಯಾಗಿ ಸಿಕ್ಕು ಬಿದ್ದಿದ್ದುವು. ನಿಮ್ಮ ಕಾಗದ ನೋಡಿದ ದಿನ ಅದಕ್ಕೊಂದು ರೂಪ ಏರ್ಪ

ಟ್ಟೆತು. ತುಂಬುಮನಸ್ಸಿನಿಂದ ನಿಮ್ಮ ಆಹ್ವಾನವನ್ನು ಸ್ವೀಕರಿಸಿ ಮನಸಿನ ತುಂಬಾ ನಿಮ್ಮ ರೂಪವನ್ನು ಚಿತ್ರಿಸಿಕೊಂಡು ಬಂದೆ.

ಶಾಂತ ನಮ್ಮಿಬ್ಬರ ಮಧ್ಯೆ ಯಾವಾಗ ಪ್ರವೇಶಿಸಿದಳೋ ನನಗೆ ಸರಿಯಾಗಿ ನೆನಪಿಲ್ಲ. ನಿಮ್ಮ ತಂಗಿಯಾಗಿ ನನಗೆ ಪರಿಚಯವಾದ ಶಾಂತ ತನ್ನ ಮುನ್ನುಗ್ಗುವ ಸ್ವಭಾವದಿಂದಾಗಿ ನನಗೆ ಹತ್ತಿರವಾದಳು. ಆ ಚಿರಕಾಲದಲ್ಲಿಯೇ ಯಾವುದೋ ಆಕರ್ಷಣೆಯಿಂದ ನನ್ನನ್ನು ತನ್ನೆಡೆಗೆ ಸೆಳೆದುಕೊಂಡಳು.

ನಾನು ಸ್ವಲ್ಪ ಜಡವಾಗಿದ್ದರೆ ಉತ್ಸಾಹದಿಂದ ಕೆಲೆಯುತ್ತಾ, ಹರಟೆ ಕೊಚ್ಚಿ, ನನ್ನ ಸೋಮಾರಿತನವನ್ನು ಹಳಿದು, ಕೆಣಕಿ ಉತ್ಸಾಹ ತುಂಬುತ್ತಿದ್ದಳು. ಶಾಂತ ನನ್ನ ಬಳಿ ಇದ್ದಷ್ಟು ಹೊತ್ತೂ ನನ್ನ ಮನಸು ನೂತನೋತ್ಸಾಹದಿಂದ ಕುಣಿದು ಕುಪ್ಪಳಿಸುತ್ತಿತ್ತು. ಉಕ್ಕಿ ದಡವನ್ನು ಮುಟ್ಟುವ ಅಲೆಗಳು ತೀರದಲ್ಲಿದ್ದ ಕಲ್ಮಷವನ್ನು ತೊಳೆದು ಶುಭ್ರಗೊಳಿಸುವಂತೆ ಶಾಂತ ತನ್ನ ಉತ್ಸಾಹದ ಸ್ವಭಾವದಿಂದ ನನ್ನಲ್ಲಿನ ನಿರ್ಲಿಪ್ತತೆ, ಸ್ತಬ್ಧತೆಗಳನ್ನು ತೊಲಗಿಸಿದಳು. ಬಹುಶಃ ಜಡಗೊಂಡ ಈ ಮನಸ್ಸನ್ನು ಕರಗಿಸಬಲ್ಲ ಬಿಸಿ ಶಾಂತಳ ಬಳಿ ನನಗೆ ಹೇರಳವಾಗಿ ಲಭ್ಯವಾಗಿರಬೇಕು.

ತಂಪಾದ ನಿಮ್ಮ ಪ್ರೀತಿಯ ಮಡಿಲಲ್ಲಿ ಪುರುಷ ತನ್ನನ್ನು ತಾನು ಮರೆತು ಹಾಯಾಗಿ ಜೀವನದಾದ್ಯಂತ ವಿಶ್ರಮಿಸಬಲ್ಲ. ಬಳಲಿಕೆಯೆಂಬ ಮಾತನ್ನರಿಯದೆ ಹಾಯಾಗಿ, ಆನಂದವಾಗಿ ಜೀವಿಸಬಲ್ಲ. ಆದರೆ ಶಾಂತಳ ಪ್ರೀತಿ ಇದಕ್ಕೆ ತದ್ವಿರುದ್ಧ. ಕಾಲಿನ ಕೆಳಗೆ ಕೊಳ್ಳಿಯಿಟ್ಟು ಮನುಷ್ಯನನ್ನು ಓಡಿಸುತ್ತದೆ ಶಾಂತಳ ಪ್ರೇಮ. ಹಿಂದಿರುಗಿ ನೋಡದೆ ಮುಂದಕ್ಕೆ ನಡೆ ಎಂದು ಅವಸರಪಡಿಸುತ್ತದೆ. ನನ್ನಂತಹ ಜಡ ಸ್ವಭಾವದ ಮನುಷ್ಯನಿಗೆ ಬದುಕಿನಲ್ಲಿ ಮುಂದೆ ನಡೆಯಲು ಅಂತಹ ಸಹಚರಿಯ ಆವಶ್ಯಕತೆಯಿದೆಯೆಂದು ಕಾಣುತ್ತದೆ.

ಮುವ್ವತ್ತು ವರ್ಷ ತುಂಬಿದ್ದರೂ ಇದುವರೆವಿಗೂ ನನ್ನ ಬಾಳಿನ ಭಾಗಸ್ವಾಮಿನಿಯನ್ನು ಆರಿಸಿಕೊಳ್ಳಲು ಅಸಮರ್ಥನಾಗಿದೇನೆ ಎಂದರೆ ನಾನೆಷ್ಟು ನಿರಾಶಾವಾದಿಯೋ ನೀವು ಗ್ರಹಿಸಬಲ್ಲಿರಿ. ಶಾಂತ ತನ್ನ ಉತ್ಸಾಹದಿಂದ ನನ್ನಲ್ಲಿ ಜೀವ ತುಂಬಿದಳು. ತನ್ನ ಕೋರಿಕೆಗಳಿಂದ ನನ್ನ ಬದುಕಿಗೊಂದು ಅರ್ಥ ಕಲ್ಪಿಸಿದಳು.

ಇದನ್ನೆಲ್ಲಾ ನನ್ನನ್ನು ನಾನು ಸಮರ್ಥಿಸಿಕೊಳ್ಳಲು ನಾನು ಬರೆಯು

ತ್ತಿಲ್ಲ. ಈ ನಿಶ್ಚಯ ನಾಲ್ಕುತಿಂಗಳ ಹಿಂದೆ ನಾನು ಮಾಡಿದ್ದರೆ ಸಂತೋಷ ವಾಗಿರುತ್ತಿತ್ತು. ಆದರೆ ಹಾಗೆ ಜರುಗಲಿಲ್ಲ. ಮೊನ್ನೆಯವರೆವಿಗೂ ನನಗೇನು ಬೇಕೆಂಬುದನ್ನು ನಾನು ನಿರ್ಣಯಿಸಿಕೊಳ್ಳಲಿಲ್ಲ. ನಿಮ್ಮಿಬ್ಬರ ಮಧ್ಯೆ ಒಂದು ವಿಧವಾಗಿ ಹೇಳಬೇಕೆಂದರೆ ಏನನ್ನೂ ನಿಶ್ಚಯಿಸಿಕೊಳ್ಳ ಲಾಗದೆ ನಲುಗಿಹೋದೆ. ನನಗೆ ಬೇಕಾದ್ದು ಶಾಂತ ಎಂದು ಈಗ ತಾನೇ ತಿಳಿದುಕೊಂಡೆ. ಶಾಂತ ನಿಮ್ಮ ತಂಗಿ. ಅವಳ ತಪ್ಪುಗಳನ್ನು ಹಿಂದೆ ಕ್ಷಮಿಸಿದಂತೆ ಈಗಲೂ ಕ್ಷಮಿಸಿ. ನಮ್ಮಿಬ್ಬರಿಗೂ ನಿಮ್ಮ ಆಶೀರ್ವಾದ ಬೇಕು.

ನೀವು ಮನೆಯಲ್ಲಿಲ್ಲದಾಗ ನಿಮ್ಮ ತಂಗಿಯನ್ನು ಈ ರೀತಿಯಾಗಿ ಕರೆದುಕೊಂಡು ಹೋಗುವುದು ನನಗೆ ಸರಿಯಲ್ಲ. ಶಾಂತ ತನ್ನ ಹಿಂದಿನ ಅನುಭವವನ್ನು ಕುರಿತು ನನಗೆ ಹೇಳಿದಳು. ನಿಮ್ಮ ಬಗ್ಗೆ ನಾವೆಷ್ಟು ಅನ್ಯಾಯವಾಗಿ ಪ್ರವರ್ತಿಸಿದರೂ ಶಾಂತಳಿಗೆ ಮತ್ತೆ ಅಂತಹ ಪರಿಸ್ಥಿತಿ ತಂದೊಡ್ಡುವುದಿಲ್ಲ. ನನ್ನ ಮೇಲೆ ನಿಮಗೆ ಅಷ್ಟು ಮಾತ್ರ ನಂಬಿಕೆ ಯಿರುತ್ತದೆಯೆಂದು ಭಾವಿಸಿದೇನೆ. ನಿಮ್ಮ ಆಶೀರ್ವಾದಕ್ಕಾಗಿ ಕೆಲವು ದಿನಗಳಲ್ಲಿಯೇ ಹಿಂದಿರುಗಿ ಬರುತ್ತೇವೆ. ತುಂಬುಹೃದಯದಿಂದ ನಮ್ಮನ್ನು ಕ್ಷಮಿಸಿ ಆಶೀರ್ವದಿಸುತ್ತಿರೆಂದು ನಂಬಿರುವ,

ಗೋವಿಂದ ಬಾಬು.

ಕಣ್ಣೀರಿನಿಂದ ಕಾಗದವನ್ನು ಮಡಿಸಲುಹೋದ ಜಾನಕಿಗೆ ಕಾಗದದ ಹಿಂದೆ ಶಾಂತಳ ಕೈಬರಹ ಕಾಣಿಸಿತು.

"ಅಕ್ಕಾ, ಹಾಲು ಹಾಕಿ ಬೆಳೆಸಿದರೂ ಹಾವು ಕಡಿಯದೆ ಇರುವು ದಿಲ್ಲ. ನಿನ್ನ ಅಭಿಮಾನದಿಂದ ಬದುಕಿ ಬಂದು ನಿನಗೇ ದ್ರೋಹಮಾಡು ತ್ತಿದೇನೆ. ಕ್ಷಮಿಸೆಂದು ಕೇಳುವುದಕ್ಕಾಗಲೀ, ಕೋಪಮಾಡಿಕೊಳ್ಳ ಬೇಡವೆಂದು ಬೇಡಿಕೊಳ್ಳುವುದಕ್ಕಾಗಲೀ ಯೋಗ್ಯತೆಯಿಲ್ಲ ನನಗೆ. ನಿನ್ನ ತಂಗಿಯ ಗುಣ ನಿನಗೆ ತಿಳಿಯದ್ದೇನೂ ಅಲ್ಲ. ನಿನ್ನ ಒಳ್ಳೆಯತನ ನನಗೆ ತಿಳಿಯದ್ದೂ ಅಲ್ಲ. ಅದಕ್ಕೇ ಇಷ್ಟು ವ್ಯಥೆ ನನಗೆ.

ಶಾಂತ.

ಜಾನಕಿಯ ಮೆದುಳು ಮರಗಟ್ಟಿತ್ತು. ಕಣ್ಣಿನಲ್ಲಿ ನೀರು ಇಂಗಿ ಹೋಗಿತ್ತು. ಮೈಯಲ್ಲಿನ ತಾಪ ಆರಿತ್ತು. ಮನಸಿನಲ್ಲಿನ ಆಸೆ ಸಮೂಲವಾಗಿ ನಾಶವಾಗಿತ್ತು. ಚಲನರಹಿತಳಾಗಿ ಕುಳಿತಿದ್ದಳು.

ಮುಚ್ಚಿದ ಕಣ್ಣುರೆಪ್ಪೆ ಮುಚ್ಚಿಯೇ ಇತ್ತು. ಹಣೆಯನ್ನು ಒತ್ತಿ ಹಿಡಿದ ಕೈ ಅಲ್ಲಿಯೇ ನಿಂತಿತ್ತು. ಆವೇಶವನ್ನು ಅಡಗಿಸಲು ಅದುಮಿ ಹಿಡಿದ ತುಟಿ ಹಾಗೆಯೇ ಬಿಗಿದಿತ್ತು.

ಚಲನವಿಲ್ಲದ ಆಕೆಯಲ್ಲಿ ಅನಿಶ್ಚಿತವಾಗಿ ಎಲ್ಲಿಯೋ ಪ್ರಾಣ ಹೊಡೆದು ಕೊಳ್ಳುತ್ತಿತ್ತು. ಅದರಿಂದಲೇ ಆಕೆ ಬದುಕಿದ್ದಳು. ಅವಳಲ್ಲಿ ಜೀವಿಸಬೇಕೆಂಬ ಆಕಾಂಕ್ಷೆ ಮಿಕ್ಕಿತು. ಮನುಷ್ಯನಿಂದ ತಗಲುವ ಪೆಟ್ಟಿಗೆ ಕೆಳಗೆ ಬೀಳಬಾರದೆಂಬ ಪೌರುಷವಿತ್ತು. ಯಾವ ಆಲಂಬನವಿಲ್ಲದಿದ್ದರೂ ತಾನೂ ಮನುಷ್ಯಳಾಗಿ ಜೀವಿಸಬಲ್ಲೆನೆಂಬ ಧೈರ್ಯವಿತ್ತು. ನಂಬಿಕೆಯಿತ್ತು.

ಆದ್ದರಿಂದಲೇ ಮೇಲೆದ್ದಳು. ತೇವ ಆರಿದ ಕಣ್ಣುಗಳನ್ನು ಒರೆಸಿ ಕೊಂಡಳು. ಕೈಯಲ್ಲಿದ್ದ ಕಾಗದವನ್ನು ಭದ್ರವಾಗಿ ಮಡಿಸಿ ಬ್ಯಾಗಿನಲ್ಲಿಟ್ಟು ಕೊಂಡಳು. ನಿದಾನವಾಗಿ ಹೆಜ್ಜೆ ಹಾಕುತ್ತಾ ಮನೆಯ ಕಡೆ ನಡೆದಳು.

ಎದುರಾಗಿ ಜವಾನ ಹೇಳಿದ.

"ನಿಮಗೋಸ್ಕರ ಯಾರೋ ಅಯ್ಯನೋರು ಬಂದವ್ರಮ್ಮಾ. ಎಷ್ಟು ಹೊತ್ತಿಗೂ ನೀವು ಬರ್ಲಿಲ್ಲ. ಹಾಸ್ಟೆಲಿನಲ್ಲಿರ್ತೀರಿ ಅಂದೆ. ಅಲ್ಲಿಗೆ ಹೋಗವ್ರೆ."

ತನಗೋಸ್ಕರ ಯಾರು ಬಂದದ್ದು! ಪ್ರಕಾಶನಾಗಿದ್ದರೆ ಜವಾನನಿಗೆ ಪರಿ ಚಯವಿತ್ತು. ಅಣ್ಣ ಬಂದಿರಬಹುದೆ? ಎಂದುಕೊಂಡಳು.

ಮಳೆಯ ಹನಿ ಬಿದ್ದರೆ ಬೀದಿ ರೊಚ್ಚಾಗಿರುತ್ತದೆ. ದೊಡ್ಡ ಮಳೆ ಬಿದ್ದರೆ ಅಲ್ಲಿರುವ ಮಾಲಿನ್ಯವೆಲ್ಲಾ ಕೊಚ್ಚಿಕೊಂಡು ಹೋಗಿ ನಿರ್ಮಲವಾಗಿರುತ್ತದೆ. ಆ ದಿನದ ಸಂಘಟನೆಯಿಂದ ಜಾನಕಿಯ ಮನಸು ತೊಳೆದ ಕನ್ನಡಿಯಂತಿತ್ತು. ಅದರಲ್ಲಿ ತನ್ನ ರೂಪವನ್ನು ನೋಡಿಕೊಂಡು ಹೆಮ್ಮೆಪಟ್ಟಳು ಜಾನಕಿ.

'ಭಗವಾನ್, ಇಷ್ಟರನುಟ್ಟಿಗಿನ ಧೈರ್ಯ, ಸಾಹಸಗಳನ್ನು ನನಗೆ ಆಸರೆ ಯಾಗಿ ಎಂದೆಂದಿಗೂ ಇರುವಂತೆ ಮಾಡು. ನನ್ನ ಬದುಕನ್ನು ನಾನು ನಡಸಿ ಕೊಳ್ಳುವ ಶಕ್ತಿಯನ್ನು ಕೊಡು. ಅದಕ್ಕಿಂತಲೂ ಹೆಚ್ಚಾಗಿ ನನಗೇನೂ ಬೇಡ' ಎಂದುಕೊಂಡಳು.

ಆವೇಳೆಯಲ್ಲಿ ಬಂದ ಜಾನಕಿಯನ್ನು ಮಕ್ಕಳೆಲ್ಲಾ ಸುತ್ತುಗಟ್ಟಿದರು.

"ಅಕ್ಕಾ, ಬಂದೆಯೇಕೆ? ಈವತ್ತು ನನ್ನ ಬಳಿ ಮಲಗಿಕೊಳ್ಳುತ್ತೀಯ?"

"ನಮಗೆ ಒಳ್ಳೊಳ್ಳೆ ಕತೆ ಹೇಳುತ್ತೀಯಾ?"

"ನಾನು ಮಲಗಿಕೊಳ್ಳಲೇ ನಿನ್ನ ಹತ್ತಿರ!"

ಮಕ್ಕಳನ್ನು ಪ್ರೀತಿಯಿಂದ ಹತ್ತಿರ ಕರೆದುಕೊಂಡಳು ಜಾನಕಿ. ಆ ದಿನ ತನಗೂ, ಅವರಿಗೂ ಹತ್ತಿರದ ಸಾಮ್ಯ ಕಾಣಿಸಿತವಳಿಗೆ. ಅವರಿಗೂ ಯಾರೂ

ಇಲ್ಲ. ಎಂಬ ಭಾವನೆ ಬಂದಿತವಳ ಮನಸಿಗೆ.

"ಸುಮ್ಮನೆ ನಿಮ್ಮನ್ನೆಲ್ಲಾ ಒಂದು ಸಲ ನೋಡೋಣ ಅನ್ನಿಸಿ ಬಂದೆ ಕಣಪ್ಪಾ. ಸ್ವಲ್ಪ ಬಿಡಿ. ನನಗೋಸ್ಕರ ಯಾರೋ ಬಂದಿದಾರಂತೆ. ನೋಡಿ ಬರುತ್ತೀನಿ" ಎಂದು ಪಕ್ಕದಲ್ಲಿದ್ದ ವಿಜಿಟರ್ಸ್ ರೂಮಿಗೆ ಹೋದಳು.

ಆಕೆಯ ಸೆರಗನ್ನು ಹಿಡಿದುಕೊಂಡು ರೈಲಿನಂತೆ ಒಬ್ಬರ ಹಿಂದೊಬ್ಬರು ನಡೆಯತೊಡಗಿದರು ಮಕ್ಕಳು. ಜಾನಕಮ್ಮ ಬಂದರೆ ಮಕ್ಕಳು ಬಿಡೋಲ್ಲ ಎಂದುಕೊಂಡಳು ಆಯಾ, ಅವರ ಆಟ ನೋಡಿ.

ಜಾನಕಿ ಕೋಣೆಯಲ್ಲಿ ಕಾಲಿಟ್ಟಳು. ಅಲ್ಲಿ ಕುಳಿತ್ತಿದ್ದ ವ್ಯಕ್ತಿ ಎದ್ದು ನಿಂತ. ಇಬ್ಬರೂ ಹಿಂದಿನದನ್ನೂ ನೆನೆಸಿಕೊಂಡು ಒಬ್ಬರನ್ನೊಬ್ಬರು ಕ್ಷಣಕಾಲ ನೋಡಿಕೊಂಡರು.

ಆತನೇ ಸಂಭಾಷಣೆ ಪ್ರಾರಂಭಿಸಿದ:

"ನಾನು ರಾಜಾರಾಯ. ಈ ದಿನ ನಾನು ಬರುತ್ತಿದ್ದಂತೆ ನಿಮ್ಮ ಅಣ್ಣ ಬರೆದ ಕಾಗದ ಸೇರಿರಬಹುದು" ಎಂದ.

"ನಮಸ್ಕಾರ ಕುಳಿತುಕೊಳ್ಳಿ. ನಾಲ್ಕು ದಿನದಿಂದ ನಾನು ಊರಿನಲ್ಲಿ ಇರಲಿಲ್ಲ. ಈ ದಿನ ಬೆಳಗಿನಿಂದ ಮನೆಗೆ ಹೋಗಿಲ್ಲ. ಕಾಗದ ಬಂದಿದೆಯೋ ಇಲ್ಲವೋ ನೋಡಿಲ್ಲ" ಎಂದಳು ನಿಧಾನವಾಗಿ.

ಆತ ಮಾತನಾಡಲಿಲ್ಲ.

"ಇಷ್ಟಕ್ಕೂ ನೀವು ಬಂದ ಕೆಲಸ?"

"ನನ್ನ ಹೆಂಡತಿ ತೀರಿಕೊಂಡಳು. ಮೂರು ಜನ ಮಕ್ಕಳಿದಾರೆ."

"ಹೌದು ಕೇಳಿದೆ. ತುಂಬಾ ದುರದೃಷ್ಟಕರವಾದ ವಿಷಯ" ಎಂದಳು ಜಾನಕಿ ಸಹಾನುಭೂತಿಯಿಂದ.

"ಅಮ್ಮ, ಅಪ್ಪ, ಸಹ ಈಗಿಲ್ಲ. ಮಕ್ಕಳನ್ನು ಬೆಳೆಸುವುದು ತುಂಬಾ ಕಷ್ಟವಾಗಿದೆ."

"ತಂದೆಯಿರುವಾಗ ಮಕ್ಕಳನ್ನು ಬಾಲವಿಹಾರದಲ್ಲಿ ಸೇರಿಸಿಕೊಳ್ಳುವ ರೂಢಿ ಇಲ್ಲ, ರಾಜಾರಾಯರೇ. ಆದರಲ್ಲೂ ನಿಮಗೆ ಸಾಕಷ್ಟು ಹಣವಿದೆ. ಆಯಾ ಒಬ್ಬಳನ್ನು ಇರಿಸಿಕೊಂಡರೆ ಸುಖವಾಗಿ ಬೆಳೆಸಬಹುದು" ಎಂದಳು ನಿಶ್ಚಲಳಾಗಿ.

ಆ ಮಾತು ಕೇಳಿ ರಾಜಾರಾಯನ ಮುಖ ಕಠಿಣವಾಗಿ ಮಾರ್ಪ ಟ್ಟಿತು. ಅಷ್ಟರಲ್ಲಿ ತಾನು ಬಂದ ಕೆಲಸವನ್ನು ನೆನಪಿಗೆ ತಂದುಕೊಂಡು ಚೇತರಿಸಿ ಕೊಂಡ.

"ನನ್ನ ಮಕ್ಕಳನ್ನು ನಿಮ್ಮ ಆಶ್ರಮದಲ್ಲಿ ಸೇರಿಸಲು ಬರಲಿಲ್ಲ ನಾನು. ನಾನು ಬದುಕಿರವವರೆಗೂ ಅವರಿಗಂತಹ ದುಃಸ್ಥಿತಿ ಬರಲಾರದು. ನಾನು ನಿನಗೋಸ್ಕರವೇ ಬಂದೆ."

ದೊಡ್ಡವರ ಹಠದ ಮೂಲಕವಾಗಿ ಅವಾಂಚಿತವಾಗಿ ಏರ್ಪಟ್ಟ ಪರಿಸ್ಥಿತಿಯಲ್ಲಿ ನಾವು ಬೇರೆಯಾದೆವು. ಈ ದಿನ ಆ ದೊಡ್ಡವರೂ ಇಲ್ಲ. ಆಗಿನ ಆ ದುಡುಕುತನ, ಆ ಬಿಸಿ ರಕ್ತವೂ ಇಲ್ಲ. ಮಾಡಿದ ತಪ್ಪನ್ನು ತಪ್ಪನ್ನಾಗಿಯೇ ಬಿಟ್ಟುಬಿಡುವುದಕ್ಕಿಂತ ಎಂದಿಗಾದರೂ ತಿದ್ದುಕೊಳ್ಳುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ. ನಿಮ್ಮ ತಾಯಿ, ಅಣ್ಣ ನನ್ನ ಅಭಿಪ್ರಾಯವನ್ನು ಅನುಮೋದಿಸಿದ್ದಾರೆ. ನಿನ್ನ ನೀತಿ, ನಡವಳಿಕೆಯ ಬಗ್ಗೆ ನನಗೇನೂ ಅನುಮಾನವಿಲ್ಲ. ಆ ದಿನದ ಮಾತು ಬರೀ ಆವೇಶದ್ದು ಮಾತ್ರ....ನಿನ್ನನ್ನು ಕರೆದುಕೊಂಡು ಹೋಗಲೆಂದೇ ಬಂದಿದಿನೀ. ತಾಯಿಯಿಲ್ಲದ ಮಕ್ಕಳಿಗೆ ತಾಯಿಯಾಗಿ ನನ್ನ ಬದುಕನ್ನು ನಡೆಸಿಕೊಂಡು ಹೋಗುತ್ತೀಯೆಂಬ ಆಸೆಯಿಂದ ಬಂದಿದೀನಿ."

"ರಾಜಾರಾಯರೇ, ನಿಮಗೆ ಮೂರು ಜನ ಮಕ್ಕಳು. ನಿಮ್ಮ ಮಕ್ಕಳನ್ನು ನೀವು ಬೆಳಸಲಾರದೆ ನನ್ನ ಸಹಾಯ ಕೇಳುತ್ತಿದೀರಿ. ಇವರೆಲ್ಲಾ ನನ್ನ ಮಕ್ಕಳು? ಇವರನ್ನು ಯಾರಿಗೆ ಒಪ್ಪಿಸಿ ಬರಲಿ?"

"ಈ ಕೆಲಸ ಶಾಶ್ವತವಲ್ಲ ಜಾನಕಿ. ನಾಳೆ ಆಕೆಗೆ ಇಷ್ಟವಿಲ್ಲದಿದ್ದರೆ ಕೆಲಸದಿಂದ ತೆಗೆದುಹಾಕಬಹುದು. ಹೆಣ್ಣಿನ ಬಾಳಿಗೆ ಒಂದು ಆಸರೆಯಿರಬೇಕು. ಬಳ್ಳಿಯಂತಹ ಹೆಣ್ಣಿನ ಬಾಳು ಹಬ್ಬಿಕೊಳ್ಳಲು ಬಲವಾದ ಮರವಿರಬೇಕು. ನನ್ನ ಮಾತು ಕೇಳಿ ನನ್ನೊಂದಿಗೆ ಬಾ" ಎಂದ ರಾಜಾರಾಯ ಅನುನಯದಿಂದ.

"ಕ್ಷಮಿಸಿ ರಾಜಾರಾಯರೇ, ಒಂದು ಮರಕ್ಕೆ ಹಬ್ಬಿಕೊಂಡ ಬಳ್ಳಿ, ಆ ಮರ ಬಿದ್ದುಹೋದ ಕೂಡಲೇ ನಾಶವಾಗುತ್ತದೆ. ಈ ಚಿಕ್ಕಚಿಕ್ಕ ಸಸಿಗಳಿಗೆ ಹಬ್ಬಿಕೊಂಡ ನನ್ನ ಜೀವನ ಲತೆ ಎಂದಿಗೂ ಹಸಿರಾಗಿಯೇ ಇರುತ್ತದೆ. ಈ ಚಿಕ್ಕ ಸಸಿ ಬೆಳೆದು ದೊಡ್ಡದಾದರೂ ಅವುಗಳ ಕೆಳಗೆ ಚಿಕ್ಕ, ಪುಟ್ಟ ಸಸಿಗಳು ಹುಟ್ಟಿ ಬರುತ್ತಿರುತ್ತವೆ. ನನಗೀ ಆಸರೆ ಸಾಕು. ನನಗೀ ಬದುಕು ಸಾಕು" ಎಂದಳು ಜಾನಕಿ ನಿಶ್ಚಲಳಾಗಿ.

---

# ಕಾಲವಾಹಿನಿ

ನಮ್ಮ ಸಮಾಜದಲ್ಲಿನ ಮಧ್ಯಮವರ್ಗದ ಕುಟುಂಬವೊಂದರ ಸಹಜ ಚಿತ್ರಣ ಇಲ್ಲಿದೆ. ಹಣದ ಅಡಚಣೆಯಿಂದಾಗಿ ಗಂಡ ಬಿಟ್ಟ ಹೆಣ್ಣಿನಂತೆ ಬದುಕಬೇಕಾಗಿ ಬಂದ ಮಗಳನ್ನು ನೋಡಲಾರದೆ ಹಾಸಿಗೆ ಹಿಡಿದು ಕಣ್ಮುಚ್ಚಿದ ತಂದೆ.... ತಂದೆಯ ಸ್ಥಾನದಲ್ಲಿ ನಿಂತು ಆ ಹೊಣೆಯನ್ನು ನಿರ್ವಹಿಸಲಾಗದೆ, ಸಮಾಜದ ರೂಢಮೂಲ ಸಂಪ್ರದಾಯಗಳನ್ನು ಕಿತ್ತೊಗೆಯುವ ಸ್ಥೈರ್ಯವೂ ಇಲ್ಲದೆ ಚಡಪಡಿಸುವ ಹಿರಿಯಣ್ಣ.... ಸಂತೋಷದಲ್ಲೂ ವಿಪತ್ತಿನಲ್ಲೂ ಧೃತಿಗೆಡದೆ ತಲೆಯೆತ್ತಿ ನಿಂತು ತನ್ನ, ತನ್ನವರ ಒಳಿತಿಗಾಗಿ ಬದುಕನ್ನು ರೂಪಿಸಲು ಹೆಣಗಾಡುವ ಜಾನಕಿ.... ತಾನು ಓದಿ ಉದ್ಯೋಗಸ್ಥನಾಗಿ, ತನಗೆ ನೆರವಾಗಿ ನಿಲ್ಲುವನೆಂದು ಆಶಿಸುತ್ತಿರುವ ಅಣ್ಣನನ್ನು ನಿರಾಶೆಗೊಳಿಸುತ್ತೇನೇನೋ ಎಂಬ ಸಂಶಯದ ಸುಳಿಯಲ್ಲಿ ಸಿಕ್ಕಿ, ಮರಣವನ್ನಪ್ಪಿದ ಶಾಂಬು.... ಓದು ಹತ್ತದಿದ್ದರೂ ಅಧೈರ್ಯಪಡದೆ, ಯಾಚಕವೃತ್ತಿಯೊಂದನ್ನುಳಿದು ಮತ್ತಾವ ಕೆಲಸವನ್ನಾದರೂ ಸರಿ, ಪ್ರಾಮಾಣಿಕವಾಗಿ ಮಾಡುತ್ತಾ ತನ್ನ ಕಾಲಮೇಲೆ ತಾನು ನಿಲ್ಲಬೇಕೆಂಬ ಗುರಿಯಿಂದ ಮುನ್ನಡೆವ ಪ್ರಕಾಶ.... ತನ್ನ ಸಹಜ, ಸರಳಸ್ವಭಾವದಿಂದ ಎಲ್ಲರ ಆತ್ಮೀಯತೆಯನ್ನೂ ಗಳಿಸಿಕೊಳ್ಳುವ ಕನಕ....

ಪ್ರತಿಯೊಬ್ಬರೂ ತಮಗೆದುರಾದ ಸಮಸ್ಯೆಗಳಿಗೆ ತಮ್ಮದೇ ಆದ ರೀತಿಯಲ್ಲಿ ಪರಿಹಾರ ಹುಡುಕುತ್ತಾರೆ.

ಈ ಎಲ್ಲ ಪಾತ್ರಗಳನ್ನೂ ಜೀವಂತವಾಗಿ ನಮ್ಮೆದುರು ನಿಲ್ಲಿಸಿದ್ದಾರೆ ಸುಪ್ರಸಿದ್ಧ ತೆಲುಗು ಕಾದಂಬರಿಗಾರ್ತಿ ಶ್ರೀಮತಿ ದ್ವಿವೇದುಲು ವಿಶಾಲಾಕ್ಷಿ.

ಈಗಾಗಲೇ ಅನೇಕ ತೆಲುಗು ಕೃತಿಗಳನ್ನು ಕನ್ನಡಕ್ಕೂ, ಅನೇಕ ಕನ್ನಡ ಕೃತಿಗಳನ್ನು ತೆಲುಗಿಗೂ ಅನುವಾದಿಸಿ ಖ್ಯಾತರಾಗಿರುವ ಶ್ರೀಮತಿ ಶರ್ವಾಣಿ ಅವರು ಈ ಕಾದಂಬರಿಯನ್ನು ಹೃದಯಂಗಮವಾಗಿ ಕನ್ನಡಿಸಿದ್ದಾರೆ.

ಡಿ. ವಿ. ಕೆ. ಮೂರ್ತಿ :: ಪ್ರಕಾಶಕರು :: ಮೈಸೂರು ೪